# ಚೆನ್ನವೀರ ಕಣವಿ ಸಂದರ್ಶನ

ಸಂಪಾದಕರು

**ಡಾ. ಜಿ.ಎಂ. ಹೆಗಡೆ**





ಸಂವಹನ

**12/1A,** ಈವ್ನಿಂಗ್ ಬಜಾರ್ ಹಿಂಭಾಗ

ಶಿವರಾಂಪೇಟೆ, ಮೈಸೂರು - **570 001**

**CHENNAVEERA KANAVI SANDARSHANA**

A collection of interview Articles with poet Chennaveera Kanavi

Edited by : Dr. G.M. Hegde, (Rtd.) Professor and Head Department of Kannada, Kittel Arts College, Dharwad-580001.

Cell No. : 9945299272

Published by Samvahana, Behind Evening Bazaar, Shivarampet, Mysore - 570 001

Pages : viii + 192 = 200

First Edition : June 2018

Price : ₹ 160/-

ಬೆಲೆ : ಒಂದು ನೂರಾ ಅರವತ್ತು ರೂಪಾಯಿ

ಪ್ರತಿಗಳು ದೊರೆಯುವ ಸ್ಥಳ :

**ಶ್ರೀ ರಾಜೇಂದ್ರ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್**

೧೨/೧, ಈವನಿಂಗ್ ಬಜಾರ್ ಹಿಂಭಾಗ

ಶಿವರಾಂಪೇಟೆ, ಮೈಸೂರು - ೫೭೦ ೦೦೧

ದೂರವಾಣಿ : ೦೮೨೧ - ೨೪೭೬೦೧೯

ರಕ್ಷಾಪುಟ ವಿನ್ಯಾಸ : ಸಂದೇಶ್

ಮುದ್ರಕರು:

**ಶ್ರೀ ರಾಜೇಂದ್ರ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್**

೧೨/೧, ಈವನಿಂಗ್ ಬಜಾರ್ ಹಿಂಭಾಗ

ಶಿವರಾಂಪೇಟೆ, ಮೈಸೂರು- ೫೭೦ ೦೦೧

ದೂರವಾಣಿ : ೨೪೭೬೦೧೯

# ಸಂಪಾದಕರ ನುಡಿ

ಚೆನ್ನವೀರ ಕಣವಿಯವರು ಆಧುನಿಕ ಕನ್ನಡ ಕಾವ್ಯ ಪರಂಪರೆಯ ಶ್ರೇಷ್ಠ ಕವಿಗಳಲ್ಲಿ ಒಬ್ಬರಾಗಿದ್ದಾರೆ. ಕಳೆದ ಏಳು ದಶಕಗಳಿಂದ (೧೯೪೮-೨೦೧೮) ಧ್ಯಾನಸ್ಥ ಮನಸ್ಥಿತಿಯಿಂದ ಕವಿತೆ ರಚಿಸುತ್ತ ಬಂದ ಚೆನ್ನವೀರ ಕಣವಿ ಅವರು ಈಗ ತೊಂಬತ್ತೊಂದರಲ್ಲಿ (೨೮ ಜೂನ್ ೧೯೨೮) ಕಾಲಿರಿಸುತ್ತಿದ್ದಾರೆ. ಪ್ರೀತಿ, ಸ್ನೇಹ, ಅಂತಃಕರಣಗಳೇ ಕಣವಿ ಕವಿ ವ್ಯಕ್ತಿತ್ವದ ವಿಶಿಷ್ಟಾಂಶಗಳಾಗಿದ್ದು ಅವರು ನಮ್ಮ ಕಾಲದ ಮಹತ್ವದ ಮಾನವತಾವಾದಿ ಕವಿಯಾಗಿದ್ದಾರೆ.

ಬತ್ತಲಾರದ ಗಂಗೆಯಂತೆ ನಿರಂತರವಾಗಿ ಪ್ರಕಟವಾಗುತ್ತ ಬಂದ ಕಣವಿಯವರ ಕವಿತೆಗಳು ಕನ್ನಡ ಜನತೆಯ ಅಪಾರ ಪ್ರೀತಿಗೆ ಪಾತ್ರವಾಗಿವೆ. ಕಣವಿ ಅವರ ಸಮಗ್ರ ಕಾವ್ಯದ ಐದು ಆವೃತ್ತಿಗಳು ಈವರೆಗೆ ಪ್ರಕಟವಾಗಿದ್ದು ಕನ್ನಡ ಪ್ರಕಟನ ಪ್ರಪಂಚದಲ್ಲಿ ಒಂದು ವಿಶಿಷ್ಟತೆಯಾಗಿದೆ. ನವೋದಯ ಕಾವ್ಯದ ಮೌಲ್ಯಪ್ರಜ್ಞೆ, ನವ್ಯದ ವಾಸ್ತವತೆ, ನವ್ಯೋತ್ತರದ ಸಾಮಾಜಿಕ ಆಶಯವನ್ನು ಗರ್ಭೀಕರಿಸಿಕೊಂಡ ಕಣವಿ ಕಾವ್ಯ ಕನ್ನಡಕ್ಕೆ ಶ್ರೇಷ್ಠವಾದ ಕವಿತೆಗಳನ್ನು ನೀಡಿದೆ. ಕಣವಿ ಕಾವ್ಯದಲ್ಲಿ ಪರಂಪರೆಯ ಅರಿವು, ಚಾರಿತ್ರಿಕ ಪ್ರಜ್ಞೆ, ಸಮಕಾಲೀನ ಸಂವೇದನೆ ಅಂತಸ್ಥವಾಗಿವೆ. 'ಏನಾದರೂ ಇರಲಿ ಹಾಡು ನಿಲ್ಲಿಸಬೇಡ, ದೀಪ ಪಟ್ಟನೆ ಆರಿ ಹೋಗಬಹುದು' ಎಂದು ಹೇಳಿದ ಕಣವಿಯವರು ಕವಿತೆಯ ಸೃಷ್ಟಿಕಾರ್ಯದಲ್ಲಿ ನಿರಂತರವಾಗಿ ತಮ್ಮ ಭಾವ ಸಂವೇದನೆಯನ್ನು ಪ್ರಕಟಿಸುತ್ತ ಬಂದಿದ್ದಾರೆ. ಕಣವಿ ಅವರ ಜೀವನಶ್ರದ್ಧೆ, ನಿಸರ್ಗಪ್ರೀತಿ, ಮಾನವಾನುಭವ ಅನನ್ಯವಾದದ್ದು. ಅವರು ಚಿರಂತನದಾಹದ ಕವಿಯಾಗಿದ್ದಾರೆ. ಕಣವಿ ಅವರ ಕವಿತೆಯ ಆಕೃತಿ, ಲಯಗಾರಿಕೆ, ಪದಬಂಧ, ಅಭಿವ್ಯಕ್ತಿಯ ವಿಶಿಷ್ಟತೆ ತುಂಬ ಆಕರ್ಷಕವಾದದ್ದು. 'ವಿಶ್ವಭಾರತಿಗೆ ಕನ್ನಡದಾರತಿ ಮೊಳಗಲಿ ಮಂಗಲ ಜಯಭೇರಿ' ಕವಿತೆಯ ಸಾಲು ಕವಿ ಕುವೆಂಪು ಅವರಿಗೇ ರೋಮಾಂಚನ ಉಂಟು ಮಾಡಿದುದನ್ನು ಇಲ್ಲಿ ಉಲ್ಲೇಖಿಸಬೇಕು. ಕಣವಿ ಕಾವ್ಯದಲ್ಲಿ ಅನಸ್ಯೂತವಾಗಿ ಹರಿಯುವ ಜೀವಂತಗತಿಯನ್ನು ಅವರ 'ಕಾವ್ಯಾಕ್ಷಿ'ಯಲ್ಲೇ ವರಕವಿ ಬೇಂದ್ರೆ ಕಂಡಿದ್ದರು.

ಸುನೀತಗಳ ಭಾವಸೌಷ್ಠವದಲ್ಲಿ ಕಣವಿ ಪ್ರತಿಭೆ ಅನನ್ಯ ಸಾಧನೆ ಮಾಡಿದೆ. ವ್ಯಕ್ತಿಗಳ ವ್ಯಕ್ತಿತ್ವವನ್ನು ಕಂಡರಿಸುವಲ್ಲಿ ಕಣವಿ ಪ್ರಜ್ಞೆಯ ಬೆಳಕಿನ ಸ್ಪರ್ಶದ ಅನುಭವವಾಗುತ್ತದೆ. ನಿಸರ್ಗ ಪ್ರೀತಿ, ಜಿಜ್ಞಾಸೆಗಳಲ್ಲಿ ಅವರ ಚಿಂತನಶೀಲತೆ ಅಪರೂಪದ ಅಭಿವ್ಯಕ್ತಿ ಪಡೆದಿದೆ. 'ಕಾವ್ಯಾಕ್ಷಿ' (೧೯೪೯)ಯಿಂದ ಇತ್ತೀಚಿನ 'ಭೂಮಿ ಬದುಕು' (೨೦೧೮) ಸಂಕಲನದವರೆಗೆ ಐದುನೂರಾ ಎಂಬತ್ತೂರಕ್ಕೂ ಹೆಚ್ಚು ಕವಿತೆಗಳನ್ನು ರಚಿಸಿರುವ ಕಣವಿಯವರು ಕಾವ್ಯಸೃಷ್ಟಿಯ ಜೊತೆಗೆ ವಿಮರ್ಶೆ-ಪ್ರಬಂಧಗಳ ವ್ಯವಸಾಯವನ್ನೂ ಮಾಡುತ್ತ ಬಂದಿದ್ದು, ಕಣವಿ ಸಮಗ್ರ ಗದ್ಯದ ಎರಡು ಬೃಹತ್ ಸಂಪುಟಗಳು (೨೦೦೯) ಪ್ರಕಟವಾಗಿವೆ. ಕಣವಿಯವರ ಕವಿತೆ ಮತ್ತು ಸಮಗ್ರಗದ್ಯ ಆಧುನಿಕ ಕರ್ನಾಟಕದ ಸಾಂಸ್ಕೃತಿಕ ಚರಿತ್ರೆಯ ತವನಿಧಿಯಾಗಿವೆ.

ಕಣವಿಯವರ ಸಾರ್ಥಕ ಸಾಹಿತ್ಯ ಸೇವೆಯನ್ನು ಗೌರವಿಸುವ ಕಾರ್ಯ ಆಗಾಗ ಆಗುತ್ತಲೇ ಬಂದಿದೆ. ಅವರಿಗೆ ಐವತ್ತು ತುಂಬಿದಾಗ 'ಚೆಂಬೆಳಕು' ಅಭಿನಂದನಗ್ರಂಥ ಅರ್ಪಿತವಾಗಿದೆ. ಕಣವಿ ಅವರ 'ಜೀವಧ್ವನಿ' ಕವಿತಾ ಸಂಕಲನಕ್ಕೆ ಕೇಂದ್ರ ಸಾಹಿತ್ಯ ಅಕಾಡಮಿ ಪ್ರಶಸ್ತಿ ಬಂದಿದೆ. ಅವರು ಹಾಸನದಲ್ಲಿ ಜರುಗಿದ ೬೫ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ (೧೯೯೬) ಗೌರವಿಸಲ್ಪಟ್ಟಿದ್ದಾರೆ. ಕರ್ನಾಟಕ ಸರಕಾರದ ಪಂಪ ಪ್ರಶಸ್ತಿಯ (೧೯೯೯) ಪುರಸ್ಕೃತರೂ ಅವರಾಗಿದ್ದಾರೆ. ಕಣವಿ ಅವರಿಗೆ ಎಪ್ಪತ್ತು ತುಂಬಿದಾಗ 'ಮುಗಿಯದ ಹಾಡು' ಕಾವ್ಯಾಭಿನಂದನಗ್ರಂಥ ಅರ್ಪಿತವಾಗಿದೆ. ಹಂಪಿಯ ಕನ್ನಡ ವಿಶ್ವವಿದ್ಯಾಲಯ ಅವರಿಗೆ 'ನಾಡೋಜ' ಪದವಿ (೨೦೦೨) ನೀಡಿ ಗೌರವಿಸಿದೆ. ಕಣವಿ ಅವರಿಗೆ ಎಪ್ಪತ್ತೈದು ತುಂಬಿದಾಗ 'ಬೆಳ್ಳಿ ತೇರಿನ ದಾರಿ' ಕಣವಿ ಕಾವ್ಯ ವಿಮರ್ಶಾಲೇಖನಗಳ ಅಭಿನಂದನಗ್ರಂಥವನ್ನು ಅರ್ಪಿಸಲಾಯಿತು. ಕಣವಿ ಅವರಿಗೆ ಎಂಬತ್ತೊಂದು ತುಂಬಿದಾಗ 'ಕಣವಿಯವರ ಕವಿತೆಗಳ ಹೊಸ ಓದು' ಕಣವಿ ಕವಿತೆಗಳ ಪ್ರಾಯೋಗಿಕ ವಿಮರ್ಶೆಯ ಗ್ರಂಥ ಅರ್ಪಿಸಲಾಯಿತು. ಕಣವಿಯವರಿಗೆ ಎಂಬತ್ತೈದು ತುಂಬಿದಾಗ 'ಚೆನ್ನವೀರ ಕಣವಿಯವರ ಆಯ್ದ ಕವಿತೆಗಳ ಅನುಸಂಧಾನ' ವಿಮರ್ಶಾಗ್ರಂಥವನ್ನು ಪ್ರಕಟಿಸಿ ಗೌರವಿಸಲಾಯಿತು. ಕಣವಿಯವರ ಆಯ್ದ ಕವಿತೆಗಳ ಇಂಗ್ಲೀಷ್ ಅನುವಾದ Inviting Life ಕೇಂದ್ರ ಸಾಹಿತ್ಯ ಅಕಾಡಮಿ ಪ್ರಕಟಿಸಿದೆ. ಕಣವಿಯವರ ತೊಂಬತ್ತರ ಸಂಭ್ರಮದಲ್ಲಿ 'ಚೆಂಬೆಳಕಿನ ಕವಿ ಚೆನ್ನವೀರ ಕಣವಿ' ಗ್ರಂಥವನ್ನು ಲೋಕಾರ್ಪಣೆಗೊಳಿಸಲಾಯಿತು. ಕಣವಿಯವರು ತೊಂಬತ್ತೊಂದರಲ್ಲಿ ಕಾಲಿರಿಸಿದಾಗ 'ಕಣವಿ ಸಮಗ್ರ ಕಾವ್ಯ'ದ ಐದನೆಯ ಆವೃತ್ತಿ ಮತ್ತು 'ಚೆನ್ನವೀರ ಕಣವಿ ಸಂದರ್ಶನ' ಗ್ರಂಥಗಳನ್ನು ಪ್ರಕಟಿಸಲಾಗುತ್ತಿದೆ.

ಕಣವಿಯವರಿಗೆ ಕನ್ನಡ ನಾಡಿನ ಜನ ಪ್ರೀತಿ, ಗೌರವ ತೋರಿದ ವಿಶಿಷ್ಟ

ಸಂದರ್ಭಗಳಲ್ಲಿ ನಾಡಿನ ಪ್ರಮುಖ ಪತ್ರಿಕೆಗಳು ಕವಿ ಕಣವಿ ಸಂದರ್ಶನ ಲೇಖನಗಳನ್ನು ಪ್ರಕಟಿಸಿದವು. ಈವರೆಗೆ ಬಂದ ಇಪ್ಪತ್ತಕ್ಕೂ ಹೆಚ್ಚು ಕಣವಿ ಸಂದರ್ಶನ ಲೇಖನಗಳನ್ನು ಕಾವ್ಯಾಸಕ್ತ ಸಹೃದಯರು ನೋಡಿ ಸಂತೋಷಪಟ್ಟಿದ್ದಾರೆ. ಕಣವಿಯವರಿಗೆ ಎಪ್ಪತ್ತೈದು ತುಂಬಿದಾಗ 'ಕವಿ ಕಣವಿ ಸಂದರ್ಶನ' ಪುಸ್ತಕವನ್ನು ಮೊದಲು ಗಡಿನಾಡಿನ ಅಲ್ಲಮಪ್ರಭು ಜನಕಲ್ಯಾಣ ಸಂಸ್ಥೆ ಪ್ರಕಟಿಸಿ ಕವಿವರ್ಯರನ್ನು ಗೌರವಿಸಿತು. ಆನಂತರವೂ ಕಣವಿಯವರನ್ನು ಸಂದರ್ಶಿಸಿ ಪ್ರಕಟಿಸಿದ ಸಂದರ್ಶನ ಲೇಖನಗಳನ್ನು ಸೇರಿಸಿ ಪ್ರಸ್ತುತ ಸಂಪುಟದಲ್ಲಿ ಪ್ರಕಟಿಸಲಾಗುತ್ತಿದೆ.

'ಚೆನ್ನವೀರ ಕಣವಿ ಸಂದರ್ಶನ' ಲೇಖನಗಳು ಅನೇಕ ದೃಷ್ಟಿಯಿಂದ ಮಹತ್ವಪೂರ್ಣವಾಗಿವೆ. ಇವುಗಳಲ್ಲಿ ಕವಿ ಕಣವಿಯವರ ಕವಿಕಾವ್ಯ ಚಿಂತನೆ, ನಾಡು ನುಡಿಯ ಪ್ರಗತಿ, ಸಾಹಿತ್ಯದ ಸಮಕಾಲೀನ ಸ್ಥಿತಿಗತಿಗಳು, ರಾಷ್ಟ್ರ ಎದುರಿಸುತ್ತಿರುವ ಸಮಸ್ಯೆಗಳ ಬಗೆಗೆ ಕವಿಯ ವಿಚಾರಧಾರೆ ಅತ್ಯಂತ ಮನೋಜ್ಞವಾಗಿ ಪ್ರಕಟವಾಗಿದೆ. ಕಣವಿಯವರು ಪ್ರಗತಿವಾದದ ಚಿಂತಕರು. ಆದರ್ಶ ಮತ್ತು ವಾಸ್ತವಗಳನ್ನು ಸಮನ್ವಯ, ಸಮಚಿತ್ತದಿಂದ ಪರಿಭಾವಿಸುವ ಅವರು ಮಾನವತಾವಾದವನ್ನು ಪ್ರತಿಪಾದಿಸುತ್ತಾ ಬಂದಿದ್ದಾರೆ. ದೇಶೀಯ ಚಿಂತನಧಾರೆಯಲ್ಲಿ ಬೆಳೆದ ಕಣವಿಯವರು ಕನ್ನಡ ಸಂಸ್ಕೃತಿಯ ಉದಾತ್ತ ಮೌಲ್ಯಗಳಲ್ಲಿ ಆಸ್ಥೆ ಹೊಂದಿದವರು ಮತ್ತು ಭಾರತದ ಬಹುಮುಖಿ ಸಂಸ್ಕೃತಿಯನ್ನು ಗೌರವಿಸುತ್ತ ಬಂದವರು. ಸಮಕಾಲೀನ ಸಂದರ್ಭದಲ್ಲಿ ಭಾರತೀಯತೆಯ ಪುನಃಶೋಧ ಅತ್ಯಂತ ಪ್ರಸ್ತುತವಾದದ್ದು ಎಂದು ಕಣವಿ ಅವರು ಶ್ರೇಷ್ಠ ಚಿಂತಕರಾಗಿ ವಿಚಾರಗಳನ್ನು ವ್ಯಕ್ತಪಡಿಸಿದ್ದಾರೆ.

ಕಣವಿ ಸಂದರ್ಶನ ಲೇಖನಗಳ ವೈಶಿಷ್ಟ್ಯವೆಂದರೆ ಕಾವ್ಯಾರ್ಥ ಚಿಂತನ ಮತ್ತು ಕವಿ ಕರ್ಮದ ರಹಸ್ಯದ ಒಳನೋಟ. ಕನ್ನಡ ಕಾವ್ಯ ಪರಂಪರೆಯ ಸಂದರ್ಭದಲ್ಲಿಯೇ ಅವರ ಕಾವ್ಯ ವಿಚಾರಧಾರೆ ಆಕೃತಿ ಪಡೆಯುತ್ತದಲ್ಲದೆ ಹೊಸ ಕವಿಗಳಿಗೆ ಕಾವ್ಯ ಸೃಷ್ಟಿಯ ರಹಸ್ಯವನ್ನು ತಿಳಿಸಿಕೊಡುವ ಮಾರ್ಗದರ್ಶನದ ಮಾತುಗಳೂ ಇಲ್ಲಿ ಮುಖ್ಯವಾಗುತ್ತವೆ. ಕಣವಿ ಕವಿ ವ್ಯಕ್ತಿತ್ವದ ಬೆಳವಣಿಗೆಯನ್ನು ಅವರ ಮೂಲಕವೇ ತಿಳಿದುಕೊಳ್ಳುವುದು ಸಾಧ್ಯವಾಗುವಂತೆಯೇ ತಮ್ಮ ಬಾಳಿನ ನಡೆದು ಬಂದ ದಾರಿಯನ್ನು ತಿರುಗಿ ನೋಡುವ ಅವರ ಸ್ವಾನುಭವ ವಿಶಿಷ್ಟವಾದ ರೀತಿಯಲ್ಲಿ ಇಲ್ಲಿ ಪ್ರಕಟವಾಗಿದೆ. ಕಣವಿಯವರು ತಮ್ಮ ಜೀವನವನ್ನು ವಸ್ತುನಿಷ್ಠವಾಗಿ ಅವಲೋಕಿಸುತ್ತಾರೆ. ಅವರು ಆತ್ಮ ಪ್ರಶಂಸೆ ಮಾಡಿಕೊಳ್ಳುವುದಿಲ್ಲ. ಸಮಕಾಲೀನರನ್ನು ಟೀಕೆ, ನಿಂದೆಗೆ ಗುರಿಪಡಿಸಲು ಹೋಗುವುದಿಲ್ಲ. ತಮ್ಮ ಬಗೆಗೆ ಬಂದ ಟೀಕೆಗಳಿಗೂ ಸಮಾಧಾನದಿಂದ ಉತ್ತರಿಸಿದ್ದಾರೆ. ಸಿಡಿಮಿಡಿಗೊಳ್ಳದೆ ಮೆಲುದನಿಯಲ್ಲಿ ತಪ್ಪು ಅಭಿಪ್ರಾಯಗಳನ್ನು

ಅಲ್ಲಗಳೆಯುತ್ತಾರೆ. ಸಮಕಾಲೀನ ಸಾಹಿತಿ, ಕವಿ ಕೃತಿಗಳಿಗೆ ಗುಣಗ್ರಾಹಕತೆಯಿಂದ ವಿಚಾರ ವ್ಯಕ್ತಪಡಿಸುತ್ತಾರೆ. ಸಾವಿರ ವರ್ಷದ ಹಿಂದೆ ಪಂಪನಿಂದ ಆರಂಭವಾದ ಕನ್ನಡ ಪರಂಪರೆಯ ವಾರಸುದಾರರಾಗಿ ಕಣವಿ ಕವಿಮನಸ್ಸು ಆಲೋಚನೆಯನ್ನು ಮಂಡಿಸುತ್ತದೆ.

ಕಣವಿಯವರ ಕವಿತೆಯಂತೆ ಮಾತು ಚಿಂತನೆಗಳೂ ಸಹೃದಯರಿಗೆ ಅತ್ಯಂತ ಪ್ರಿಯವಾದವುಗಳು. ಸ್ವಾನುಭೂತಿ, ಸ್ವವಿಮರ್ಶೆಯಿಂದ ಕೂಡಿರುವ ಕಣವಿ ಮಾತುಗಳಲ್ಲಿ ಅರಿವಿನ ಸ್ಪಂದನವಿದೆ. ಪ್ರಸನ್ನ ಮನಸ್ಸಿನ ಭಾವಲಹರಿಯಿದೆ. ಕಣವಿಯವರೊಂದಿಗೆ ಸಾಹಿತ್ಯ ಸಂವಾದ ನಡೆಸುವದರಿಂದ ಅವರ ಪ್ರೀತಿ, ಸ್ನೇಹ, ಮಾನವೀಯ ವ್ಯಕ್ತಿತ್ವದ ಮಧುರ ಸ್ಪರ್ಶ ಮಾಡಿದ ವಿಶಿಷ್ಟ ಅನುಭವ ಸಂದರ್ಶಕರದಾಗಿದೆ.

'ಚೆನ್ನವೀರ ಕಣವಿ ಸಂದರ್ಶನ' ಪುಸ್ತಕದಲ್ಲಿ ಎರಡು ಭಾಗಗಳಿವೆ. ಮೊದಲ ಭಾಗದ ಹದಿನಾರು ಸಂದರ್ಶನ ಲೇಖನಗಳಲ್ಲಿ ಕಣವಿಯವರೊಡನೆ ಬೇರೆ ಬೇರೆ ಸಂದರ್ಭಗಳಲ್ಲಿ ನಾಡಿನ ವಿವಿಧ ಲೇಖಕರು ನಡೆಸಿದ ಸಂವಾದವಿದೆ. ಈ ಲೇಖನಗಳಲ್ಲಿ ಕಣವಿಯವರೊಡನೆ ನಡೆಸಿದ ವಿಭಿನ್ನ ವಿಷಯಗಳ ಸಾಹಿತ್ಯಿಕ ಚರ್ಚೆಯಿದೆ. ಕಣವಿಯವರೊಂದಿಗೆ ಒಬ್ಬರೆ ನಡೆಸಿದ ಬೇರೆ ಬೇರೆ ಸಂದರ್ಶನ ಲೇಖನಗಳಿದ್ದರೂ ಅವುಗಳಲ್ಲಿ ಒಂದನ್ನು ಮಾತ್ರ ಇಟ್ಟುಕೊಳ್ಳಲಾಗಿದೆ. ಹೆಚ್ಚಿನ ಸಂದರ್ಭಗಳಲ್ಲಿ ಸಂದರ್ಶಕರು ನಿರ್ದಿಷ್ಟವಾದ ಪ್ರಶ್ನೆಗಳ ಮೂಲಕ ಕಣವಿ ಸಂದರ್ಶನಕ್ಕೆ ನಿರ್ಬಂಧ ಹಾಕಿಕೊಳ್ಳದೆ ಸಹಜವಾಗಿ ಕವಿಯೊಡನೆ ಮಾತುಕತೆ ನಡೆಸಿದ್ದಾರೆ.

ಎರಡನೆಯ ಭಾಗದಲ್ಲಿ ಮತ್ತೆ ನಾಲ್ಕು ಸಂದರ್ಶನ ಲೇಖನಗಳಿದ್ದು ಅವು ಹೊಸದಾಗಿ ಸೇರ್ಪಡೆಗೊಂಡಿವೆ. ಈ ಸಂದರ್ಶನ ಲೇಖಕರಾಗಿದ್ದ ಬೆಳಗಾವಿಯ ರವಿ ಉಪಾಧ್ಯ, ಧಾರವಾಡದ ವೀಣಾ ಕುಲಕರ್ಣಿ, ಶರತ್ ಕಲ್ಕೋಡ್ ಈಗ ನಮ್ಮ ನಡುವೆ ಇಲ್ಲ. ಅವರು ಕಣವಿಯವರೊಡನೆ ಉತ್ತಮ ಸಂಬಂಧ ಹೊಂದಿದ್ದನ್ನು ಇಲ್ಲಿ ಸ್ಮರಿಸಬಹುದು. ಅವರ ಲೇಖನಗಳನ್ನು ಇದರಲ್ಲಿ ಪ್ರಕಟಿಸಲಾಗುತ್ತಿದೆ. ನಾನು ಕಣವಿಯವರನ್ನು ಸಂದರ್ಶಿಸಿದ ಇನ್ನೆರಡು ಲೇಖನಗಳು ಇದರಲ್ಲಿ ಬಂದಿಲ್ಲ.

'ಚೆನ್ನವೀರ ಕಣವಿ ಸಂದರ್ಶನ' ಲೇಖನಗಳನ್ನು ಪುಸ್ತಕರೂಪದಲ್ಲಿ ಪ್ರಕಟಿಸುವಾಗ ಪತ್ರಿಕೆಯಲ್ಲಿ ಬಂದಂತೆ ಯಥಾವತ್ತಾಗಿ ಒಂದು ಕೊಲಾಜ್ ಆಗಿ ಇಡದೆ ಅವನ್ನು ಒಂದು ವ್ಯವಸ್ಥೆಗೆ ಅಣಿಗೊಳಿಸಲಾಗಿದೆ. ಹೀಗೆ ಮಾಡುವಲ್ಲಿ ವಿಮರ್ಶಕ ಮಿತ್ರರಾದ ಡಾ. ಶಾಮಸುಂದರ ಬಿದರಕುಂದಿ ಅವರು ನೆರವಾಗಿದ್ದಾರೆ. ಅವರಿಗೆ ಕೃತಜ್ಞತೆಗಳು. ಕಣವಿ ಸಂದರ್ಶನದ ಲೇಖನಗಳನ್ನು ಪುಸ್ತಕರೂಪದಲ್ಲಿ ಪ್ರಕಟಿಸಲು ಒಪ್ಪಿಗೆ ನೀಡಿದ ಎಲ್ಲ ಸಂದರ್ಶಕ ಸ್ನೇಹಿತರಿಗೆ ತುಂಬು ಹೃದಯದ ಧನ್ಯವಾದಗಳು.

ಚೆನ್ನವೀರ ಕಣವಿ ಅವರು ತೊಂಬತ್ತೊಂದನೆಯ ವರ್ಷದಲ್ಲಿ ಕಾಲಿರಿಸುತ್ತಿರುವಾಗ

'ಚೆನ್ನವೀರ ಕಣವಿ ಸಂದರ್ಶನ' ಮತ್ತು 'ಕಣವಿ ಸಮಗ್ರ ಕಾವ್ಯ'ದ ಐದನೆಯ ಪರಿವರ್ಧಿತ ಆವೃತ್ತಿಯನ್ನು ಪ್ರಕಟಿಸುತ್ತಿರುವ ಮೈಸೂರಿನ ಹೆಸರಾಂತ ಪುಸ್ತಕ ಪ್ರಕಾಶಕರಾದ ಡಿ.ಎನ್. ಲೋಕಪ್ಪ ಅವರಿಗೆ ಹಾರ್ದಿಕ ಕೃತಜ್ಞತೆಗಳು. ಕಣವಿ ಸಮಗ್ರ ಕಾವ್ಯದ ಮೂರನೆಯ ಆವೃತ್ತಿಯನ್ನು ಅವರು ೨೦೦೩ರಲ್ಲಿ ತಮ್ಮ ಸಂವಹನ ಪ್ರಕಾಶನದ ಮೂಲಕ ಪ್ರಕಟಿಸಿದ್ದನ್ನೂ ಇಲ್ಲಿ ಸ್ಮರಿಸುತ್ತೇವೆ. ಸಾಹಿತ್ಯದ ರುಚಿ ಅಭಿರುಚಿಯನ್ನು ನಿರಂತರವಾಗಿ ಬೆಳೆಸಲು ಶ್ರಮಿಸುತ್ತಿರುವ ಮೈಸೂರಿನ ಸಂವಹನ ಪ್ರಕಾಶನ ಸಾವಿರಾರು ಕೃತಿಗಳನ್ನು ಪ್ರಕಾಶನಗೊಳಿಸಿ ವಿಕ್ರಮ ಸ್ಥಾಪಿಸಿದೆ. ಸಂವಹನ ಪ್ರಕಾಶನದ ಡಿ.ಎನ್. ಲೋಕಪ್ಪ ಅವರು ಈಗ ಎಪ್ಪತ್ತರ ಸಂಭ್ರಮದಲ್ಲಿದ್ದಾರೆ. ಅವರಿಗೆ ಶುಭವನ್ನು ಕೋರುತ್ತೇವೆ.

ಕನ್ನಡದಲ್ಲಿ ಒಬ್ಬ ಸಾಹಿತಿಯನ್ನು ಕುರಿತು ನಡೆದ ಹಲವು ಸಂದರ್ಶನಗಳನ್ನು ಗ್ರಂಥರೂಪದಲ್ಲಿ ಪ್ರಕಟಿಸುವ ಕಾರ್ಯ 'ಕವಿ ಕಣವಿ ಸಂದರ್ಶನ'ದ ಮೂಲಕ ಆರಂಭವಾಯಿತು. ಚೆನ್ನವೀರ ಕಣವಿ ಅವರ ವ್ಯಕ್ತಿತ್ವದ ವಿಭಿನ್ನ ನೆಲೆಗಳನ್ನು ಕನ್ನಡಲೋಕ ಆಸ್ವಾದಿಸುವಂತಾಗಲು ಈ ಕವಿ ಸಂದರ್ಶನ ಲೇಖನಗಳ ಸಂಚಯ ನೆರವಾಗುತ್ತದೆಂದು ನಾನು ಆಶಿಸುತ್ತೇನೆ.

೨೮ ಜೂನ್ ೨೦೧೮ — **ಡಾ. ಜಿ.ಎಂ. ಹೆಗಡೆ**

ಧಾರವಾಡ

## ಪರಿವಿಡಿ

### ಭಾಗ - ೧



### ಭಾಗ - ೨

# ಸಮಕಾಲೀನ ಪ್ರಜ್ಞೆಯ ಕವಿ

● ಜಯಸುದರ್ಶನ

ಕಣ ಕಣದ ಗತಿ-ಮತಿಯ ಗುರುತಿಸು, ಆದರೀಗಲೆ
ಅದರ ಇತಿವೃತ್ತವನು ಬರೆಯದಿರು, ನೀನಾಗಿ
ಕೊರೆಯದಿರು ದಾರಿಯನು, ಬಯಲ ಬಿಡುಗಡೆ ನುಂಗಿ
ನೀರು ಹಿಡಿಯಲಿ, ವಿಶ್ವವೆಲ್ಲವು ತೆರೆದ ಬಾಗಿಲೆ.

* * *

ಕೋಟಿ ಮೈಲಂತರದ ನೀಹಾರಿಕೆಯ ನಾಡಿ
ಮಿಡಿತ ತಟ್ಟಿತು ಕಿವಿಗೆ; ನಾದದ ಕೂದಲೆಳೆಯಲಿ
ಪೃಥ್ವಿ ತೂಗಿರೆ, ಸೂರ್ಯ ಚಂದ್ರರಿಗೂ ಜೋಕಾಲಿ
ಪಾತಾಳಗವಿಗೆ, ತೆರೆದವು ನೂರು ಬೆಳಕಿಂಡಿ.

- ಚೆನ್ನವೀರ ಕಣವಿ

ಧಾರವಾಡದಲ್ಲಿರುವ ಮಹಾನ್ ವಿದ್ಯಾಸಂಸ್ಥೆಗಳು ಮೂರು. ಮೊದಲನೆಯದು ಡಾ.ದ.ರಾ. ಬೇಂದ್ರೆ; ಎರಡನೆಯದು ಕರ್ನಾಟಕ ವಿಶ್ವವಿದ್ಯಾಲಯ ಮತ್ತು ಮೂರನೆಯದು ಶ್ರೇಷ್ಠ ಕವಿ ಶ್ರೀ ಚೆನ್ನವೀರ ಕಣವಿ. ಮೊದಲಿನೆರಡು ವಿದ್ಯಾಸಂಸ್ಥೆಗಳಿಗೆ ತಮ್ಮ ಮೆಹನತ್ತಿನ ಅರಿವು ಇದ್ದೀತು; ಆದರೆ ಕಣವಿಯವರಿಗೆ ತಮ್ಮ ಪ್ರಾಮುಖ್ಯತೆಯ ಬಗ್ಗೆ ಲಕ್ಷ್ಯವಿದ್ದಂತಿಲ್ಲ. ಹಿಮಾಲಯಕ್ಕೆ ತನ್ನ ಮಹತಿಯ ಅರಿವು ಹೇಗೆ ಇದ್ದಿರಲಾರದೋ ಹಾಗೆ.

'ಮಾತು ಕಾವ್ಯವಾಗುವುದೇ ಒಂದು ಸೋಜಿಗ' ಎಂದು ಬೆರಗುಪಡುವ ಕಣವಿಯವರನ್ನು ಕವಿಯೆಂದಲ್ಲದೆ ಬೇರಿನ್ನಾವ ರೀತಿಯಲ್ಲೂ ಗುರುತಿಸುವುದು ದುಸ್ಸಾಧ್ಯವಾಗುತ್ತದೆ. ಅವರು ಎಲ್ಲಕ್ಕಿಂತ ಮೊದಲು ನೂರಕ್ಕೆ ನೂರು ಕವಿ; ಅನಂತರ ಇತರ. ಕೆಲವರು ಕವಿಗಳ ಬದುಕೇ ಕಾವ್ಯವಾಗುತ್ತದೆ ಎಂಬ ಅಗ್ಗಳಿಕೆಯ ಮಾತುಂಟು. ಆದರೆ ತಾವು ಕವಿಯಾಗಿರುವುದು ಕಣವಿಯವರಿಗೆ ವಿಶೇಷವೆಂದು ಕಾಣುವುದಿಲ್ಲ

ಎನಿಸುತ್ತದೆ. ಪ್ರಾಯಶಃ ಅವರು ಕವಿಯಾಗದೆ ಉಳಿದಿದ್ದಲ್ಲಿ ಆಶ್ಚರ್ಯ ಪಡಬೇಕಾಗುತ್ತಿತ್ತು. ಕನ್ನಡ ಕಾವ್ಯಕ್ಷೇತ್ರದಲ್ಲಿ ಕಣವಿಯವರು ಬರೆದಿರುವ ಕಾವ್ಯಕ್ಕೆ ಇರುವ ಮಹತ್ವವನ್ನು ಗಮನಿಸುವಾಗ ಅವರು ಒಂದು ವೇಳೆ ಇರದಿದ್ದಲ್ಲಿ ಅಂತಹ ಬೇರೊಬ್ಬ ಕವಿಯನ್ನು ಹುಡುಕಲೇಬೇಕಾಗಿತ್ತು ಎನ್ನಿಸದೆ ಇರದು. ಕನ್ನಡದ ಬಗ್ಗೆ ಪ್ರೇಮ ಬೆಳೆಯಬೇಕಾದರೆ ಕಣವಿಯವರ ಕಾವ್ಯವನ್ನು ಒಮ್ಮೆ ಓದಿದರೆ ಸಾಕು ಎನಿಸುವಂತಿದೆ ಅವರ ಪದ್ಯಗಳ ಚೆಲುವು.

ಇವತ್ತು ಕನ್ನಡ ಕಾವ್ಯವು ಒಂದು ಸಂದಿಗ್ಧದಲ್ಲಿರುವಾಗ ಬದುಕಿನ ಹಾಗೂ ಕಾವ್ಯದ ಉದ್ದೇಶಗಳ ಮತ್ತು ಪ್ರಯೋಜನಗಳ ಬಗ್ಗೆ ಅತ್ಯಂತ ಶ್ರದ್ಧೆ ಹಾಗೂ ಉತ್ಸಾಹವನ್ನು ತಾಳಿರುವ ಕಣವಿಯವರು 'ನವೋದಯ' ಹಾಗೂ 'ನವ್ಯ' ಮಾರ್ಗಗಳೆರಡರಲ್ಲೂ ಕಂಡುಕೊಂಡ ಸಿದ್ಧಿ ಬೆರಗುಗೊಳಿಸುವಂಥದ್ದು. ಅವರ ನವ್ಯಕಾವ್ಯವು 'ನವೋದಯ'ದ ಸುಕೋಮಲ ಹಾಗೂ ಭಾವನಾಪ್ರಧಾನ ಗುಣಗಳನ್ನು ಉಳಿಸಿಕೊಂಡಿದೆ ಎಂಬ ಆರೋಪವಿದ್ದರೂ, ಮಾರ್ಗಗಳ ಪರಿಮಿತಿಗಳನ್ನು ಮೀರುವ ಪ್ರಥಮ ದರ್ಜೆಯ ಕಾವ್ಯ ಪ್ರತಿಭೆಯುಳ್ಳ ಕಣವಿಯವರು ಸಕಲವನ್ನೂ ತಮ್ಮ ಕಾವ್ಯಾಭಿವ್ಯಕ್ತಿಯ ಸಮರ್ಪಕತೆಯತ್ತ ದುಡಿಸಿಕೊಳ್ಳುತ್ತಾರೆ. ಮೇಲ್ಕಂಡ ಆರೋಪವನ್ನು ಅವರೊಪ್ಪುವುದಿಲ್ಲ. "ಅದು ಮುಂಗಾಲ ಪುಟಿಗೆಯ ಅಭಿಪ್ರಾಯ (ಆರೋಪ). ಅಂಥವರಿಗೆ ನನ್ನ ಕಾವ್ಯವನ್ನು ಪೂರ್ವಗ್ರಹ ಪೀಡಿತರಾಗದೆ ಅಭ್ಯಾಸ ಮಾಡಬೇಕೆಂದು ಹೇಳಬಯಸುತ್ತೇನೆ; ಅಷ್ಟೇ" ಎಂದವರು ನುಡಿಯುತ್ತಾರೆ.

ಒಂಬತ್ತು ಕವನ ಸಂಕಲನಗಳನ್ನು (ಕೆಲವಾರು ಗ್ರಂಥಗಳನ್ನು ಸಂಪಾದಿಸಿರುವ ಮತ್ತು ವಿಮರ್ಶಾ ಪುಸ್ತಕಗಳನ್ನು ಬರೆದಿರುವ) ಹೊರತಂದಿರುವ ಕಣವಿಯವರಿಗೆ ಕಾವ್ಯ ಬರವಣಿಗೆ ವೃತ್ತಿಯಾಗದೆ, ಉಸಿರಾಟದಂತೆ ಪ್ರವೃತ್ತಿಯಾಗಿದೆ. ಅವರ ಕಾವ್ಯದ ಹಾಗೂ ಬದುಕಿನ ಕಾಳಜಿಗಳು ಒಂದೇ ಆಗಿವೆ. ನಿಸರ್ಗ, ಋತುಮಾನ, ಜೀವನಾನುಭವಗಳ ವೈವಿಧ್ಯಗಳನ್ನು ಚಿತ್ರಿಸುತ್ತ ಬಂದ ಕಣವಿ (ಹುಟ್ಟು : ೧೯೨೮) ತಮ್ಮ ವಸ್ತುವಿನಿಂದ ವ್ಯಕ್ತಿತ್ವ ಬೇರೆಯಲ್ಲ ಎಂಬಷ್ಟು ಗಾಢವಾದ ರೀತಿಯಲ್ಲಿ ತಾದಾತ್ಮ್ಯವನ್ನು ಸಾಧಿಸಿದ್ದಾರೆ. ಬೇಂದ್ರೆಯವರ ಚೆಲುವಾದ ನಿಸರ್ಗ ಕವನಗಳಲ್ಲೂ 'ನೋಡುವಾತ' ಇರುತ್ತಾನೆ. ಆದರೆ ಕಣವಿಯವರು ಬರೆದ ಅನೇಕ ಕವನಗಳಲ್ಲಿ ಕವಿ ಕೇವಲ ಕವನದ ವಸ್ತುವಿಗೆ ಕನ್ನಡಿಯಾಗಿ ನಿಂತು, ಅವರ ವ್ಯಕ್ತಿತ್ವ ಮರೆಯಲ್ಲಡಗುತ್ತದೆ. ಬದುಕನ್ನು ಕಣವಿ ಅದರ ಕಾರಣಕ್ಕಾಗಿಯೇ (ಅದು ಇದೆ) ಮೆಚ್ಚಿ, ಅದರಲ್ಲಿ ಒಂದಾಗುತ್ತಾರೆನಿಸುತ್ತದೆ.

ಯಾವ ಮಂದಿರದ ಆಧಾರಸ್ತಂಭಕೋ ಕಾಣೆ
ಇಂತು ಜೀವಸ್ತಂಭ ಸಿದ್ಧವಾಗಿ
ನಿಂತಿಹುದು ಕರ್ತವ್ಯ ಬದ್ಧವಾಗಿ.
ಹೊತ್ತ ತಲೆಭಾರದಲಿ
ಕತ್ತು ತತ್ತರಿಸದೊಲು
ಯಾವ ಶಕ್ತಿಯು ನೆರವು ನೀಡಲಿಹುದೋ
ಇಲ್ಲ, ಬೇರೆಯ ತೆರವು ಬೇಡಲಿಹುದೋ!

ಎಂದು ವ್ಯಷ್ಟಿಯು ತನ್ನನ್ನು ಸಮಷ್ಟಿಗೆ ಅರ್ಪಿಸಿಕೊಳ್ಳುತ್ತದೆ ಅವರ ಮೊದಲಿನ ಒಂದು ಪದ್ಯದಲ್ಲಿ.

ಕಣವಿಯವರ ಕಾವ್ಯ ಬರೇ ನಿಸರ್ಗದ ವರ್ಣನೆಯಲ್ಲ ಅಥವಾ ಬದುಕಿನ ವಿವಿಧ ಅನುಭವ ಮತ್ತು ಸಂಬಂಧಗಳ 'ಕ್ಯಾಟಲಾಗ್' ಅಲ್ಲ; ಅದು ತನ್ನ ಹರಹಿನಲ್ಲಿ ಇವುಗಳೆಲ್ಲವನ್ನೂ ಒಳಗೊಂಡು ಇನ್ನೂ ಆಚೆಗೆ ಚಾಚುತ್ತದೆ. ವ್ಯಷ್ಟಿ-ಸಮಷ್ಟಿಯ ಕೊಡುಕೊಳ್ಳುವಿಕೆಯಲ್ಲಿ ವ್ಯಷ್ಟಿಯೇ ಸಮಷ್ಟಿಯ ಅಭಿವ್ಯಕ್ತಿ ಆಗುವಂತೆಯೇ ಸಮಷ್ಟಿಯು ವ್ಯಕ್ತಿಯ ಕಾರ್ಯರಂಗವಾಗುತ್ತದೆ. ಎಂತಲೇ ಇವೆರಡೂ ಪರಸ್ಪರ ಪೂರಕ. 'ಮಣ್ಣಿನ ಮೆರವಣಿಗೆ'ಯಲ್ಲಿ ಕಣವಿ ಹೇಳುವಂತೆ:

ತಿರುಗುತ್ತಿದೆ; ಎಂದೊ ಸಿಡಿದಾರಿದ ಆಗ್ನಿಯ ಪಿಂಡಃ
ಆರಿದೆಯೆಂದವರಾರೋ, ಇನ್ನೂ ನಿಗಿ ನಿಗಿ
ಉರಿಯುತ್ತಿದೆ ಅದರೆಯಾಳದ ಕುಂಡ,
ಹರಿಯುತ್ತಿದೆ ಬೆಂಕಿಯ ಹೊಳೆ
ತಣ್ಣನೆ ಕಡಲೊಳಗೆ;
ಹೊಗೆಯಾಡುತ್ತಿದೆ ಸುಮ್ಮನೆ ನುಣ್ಣನೆ ಬಾನೊಳಗೆ,
ಬಿದ್ದಿವೆ, ಒಡಮುರಿದೆದ್ದಿವೆ ಗಿರಿ ಗಹ್ವರ-
ಯುಗ ಯುಗಗಳ ನೋವು!
ದರಿಕಂದರದೊಳಗಿನ್ನೂ ಹರಿದಾಡಿದೆ ಸಂಶಯವೆ.

ಇಂಥ 'ಮಣ್ಣ ಮನೆಯೊಳು ಮಗುವು ಕಣ್ಣು ತೆರೆದಿತ್ತು.' ಆದ್ದರಿಂದಲೇ ' ಓ ಜೀವನವೆ ಶುಭಮಸ್ತು ನಿನಗೆ' ಎನ್ನುವುದು ಹಾರೈಕೆಯೂ, ಕಾಣ್ಕೆಯೂ ಆಗುತ್ತದೆ.

ಕನ್ನಡ ಭಾಷಾ ಸತ್ವವನ್ನು ಅತ್ಯಂತ ಎಚ್ಚರದಿಂದ ದುಡಿಸಿಕೊಳ್ಳುತ್ತಿರುವ ಕೆಲವೇ ಮಂದಿ ಕವಿಗಳಲ್ಲಿ ಕಣವಿ ಒಬ್ಬರು. ಅವರ ಕವನಗಳಲ್ಲಿ ಶಿಲ್ಪವು ಕವನದ ತಿರುಳಿನಷ್ಟೇ ಆಕರ್ಷಕವಾಗಿರುವುದಕ್ಕೆ ಈ ಕವಿಯ ಭಾಷಾ ಶ್ರದ್ಧೆ ಕಾರಣ. ಮುಖ್ಯವಾಗಿ 'ಸುನೀತ' (ಸಾನೆಟ್)ಗಳ ರಚನೆಯಲ್ಲಿ ಪ್ರಾಯಶಃ ಕಣವಿಯವರಿಗೆ ಸರಿದೊರೆಯಾಗಿರುವವರು

ಅವರ ತಲೆಮಾರಿನ ಮತ್ತು ಅನಂತರದ ಪೀಳಿಗೆಯ ಕವಿಗಳಲ್ಲಿ ಯಾರೂ ಇಲ್ಲ. ಕನ್ನಡದ ಕಸುವಿನ ಒಂದು ನಿದರ್ಶನವಾಗಿ ಹಾಗೂ ಭಾಷೆಯ ಲಾಲಿತ್ಯದ ಒಂದು ಅಭಿವ್ಯಕ್ತಿಯಾಗಿ ಅವರ ಸುನೀತಗಳು ಉಳಿದು ಕೊಳ್ಳುತ್ತವೆ. ಕನ್ನಡದಲ್ಲಿ 'ಸುನೀತ'ಗಳಿಗೆ ಭದ್ರ ಆಸ್ತಿಬಾರ ಹಾಕಿದವರು ಶ್ರೀ 'ಶ್ರೀನಿವಾಸ' ಅವರು. ಅನಂತರ ಬೇಂದ್ರೆ ಮೊದಲಾಗಿ ಅನೇಕರು ಸುನೀತಗಳನ್ನು ಬರೆದರು. ಆದರೆ ಕಣವಿಯವರ ಸುನೀತಗಳದೇ ಒಂದು ತೂಕ ಎನ್ನುವಷ್ಟರಮಟ್ಟಿಗೆ ಸುನೀತ ರಚನೆಯಲ್ಲಿ ಕಣವಿ ಅಸಾಧಾರಣ ಯಶಸ್ಸು ಪಡೆದಿದ್ದಾರೆ.

ಕಣವಿಯುವರ ಕಾವ್ಯ-ಜೀವನವನ್ನು ಗಮನಿಸುತ್ತ ಬಂದವರಿಗೆಲ್ಲ ಸ್ಪಷ್ಟವಾಗುವುದು ಈ ಕವಿಗೆ ಜೀವನದ ಬಗ್ಗೆ ಇರುವ ಆಶಾವಾದಿತ್ವ ಹಾಗೂ ಶ್ರದ್ಧೆ. ಜೀವನಕ್ಕೆ ತತ್ವ, ತರ್ಕ, ಅಧ್ಯಾತ್ಮ ಇತ್ಯಾದಿ ಬೇರಾವ ಉಪಾಧಿಗಳು ಇಲ್ಲದಿದ್ದರೂ ಬದುಕು ಬಾಳಲು ಯೋಗ್ಯವಾದುದೆಂಬ ನೆಲದ ಪ್ರಜ್ಞೆಯು ಅವರ ಕಾವ್ಯದಲ್ಲಿ ಹೊಮ್ಮುತ್ತಿರುತ್ತದೆ. ಅವರೇ ಒಂದು ಕಡೆ ಬರೆಯುತ್ತಾ: "....ವಿಸ್ತಾರವಾದ ಪ್ರಕೃತಿಯ ಮಧ್ಯದಲ್ಲಿ ಸಾಗುತ್ತಿರುವ ಜೀವನವೇ ನನಗೆ ಸ್ಫೂರ್ತಿಯ ಸೆಲೆಯಾಗಿದೆ. ವ್ಯಕ್ತಿಯ ಅಂತರಂಗ ಬಹಿರಂಗಗಳಲ್ಲಿ ನಡೆಯುವ ಘರ್ಷಣೆ ಜೀವನದ ರಹಸ್ಯವನ್ನು ಸ್ಫೋಟಗೊಳಿಸುವಂತೆ ನನಗೆ ತೋರುತ್ತದೆ" ಎಂದು ಹೇಳಿದ್ದಾರೆ. ಕಾವ್ಯವೇ ಜೀವನಧರ್ಮವಾದ ಈ ಕವಿ ಪ್ರಸಕ್ತ ಕನ್ನಡ ಕಾವ್ಯ ಕ್ಷೇತ್ರದಲ್ಲಿ ಕಂಡು ಬರುತ್ತಿರುವ ನಿರುತ್ಸಾಹದ ಬಗ್ಗೆಯೂ ಚಿಂತಿಸಿದ್ದಾರೆ.

***"ಪ್ರಸಕ್ತ ಕನ್ನಡ 'ನವ್ಯಕಾವ್ಯ' ಕ್ಷೇತ್ರದಲ್ಲಿ ಒಂದು ರೀತಿಯ ನಿಷ್ಕ್ರಿಯತೆ ಕಂಡು ಬರುತ್ತಿದೆ ಎಂದು ಒಂದು ಅಭಿಪ್ರಾಯದ ಬಗ್ಗೆ ತಮ್ಮ ಪ್ರತಿಕ್ರಿಯೆಯೇನು?"**

"ಈ ಮಾತು ನಿಜ. ಕಳೆದ ಕಾಲು ಶತಮಾನದಿಂದ ಪ್ರವರ್ಧಮಾನ ಸ್ಥಿತಿಯಲ್ಲಿದ್ದ ನವ್ಯಕಾವ್ಯಕ್ಕೆ ಈಗ ಇಳಿಗಾಲ ಒದಗಿದೆ. ಈಚಿನ ಈ ಮಾದರಿಯ ಎಷ್ಟೋ ಪದ್ಯಗಳು ಅನುಕರಣೆಗೆ ಬಿದ್ದು ನಿಸ್ತೇಜವಾಗಿರುವುದನ್ನು ಕಾಣುತ್ತಿದ್ದೇವೆ. ಬಹುಶಃ ಈ ಕಾವ್ಯದ ಸಾಧ್ಯತೆಗಳು ಮುಗಿದು ಹೋಗಿರುವುದೇ ಇದಕ್ಕೆ ಕಾರಣ. ಅದರ ಅಭಿವ್ಯಕ್ತಿಯಲ್ಲಿಯ ನಾವೀನ್ಯವೂ ಈಗ ಮಾಸಿ ಹೋಗಿದೆ. ಕಾವ್ಯಗುಣವನ್ನು ಮುಖ್ಯವಾಗಿ ಭಾವಿಸಿದ ಒಬ್ಬಿಬ್ಬರ ಕವಿತೆಗಳಲ್ಲಿ ಲವಲವಿಕೆ ಇನ್ನೂ ಜೀವಂತವಾಗಿದೆಯೇನೋ ನಿಜ. ಆದರೆ ಒಟ್ಟಿನಲ್ಲಿ ಕನ್ನಡ ಕಾವ್ಯ ಇನ್ನೊಂದು ಬದಲಾವಣೆಗೆ, ತಿರುವಿಗೆ ಕಾದಿದೆ ಎಂದರೆ ತಪ್ಪಾಗದು."

ನವ್ಯ ಕಾವ್ಯಕ್ಕೆ ಹೊಸ ಸ್ವರೂಪವನ್ನು ನೀಡಬೇಕೆನ್ನುವ ಕಣವಿ ಸ್ವತಃ

'ನವೋದಯ'ದಿಂದ 'ನವ್ಯ'ಕ್ಕೆಬಂದವರು. "ಒಂದು ಕಾವ್ಯಮಾರ್ಗ ಹೆಚ್ಚಿನದನ್ನು ಸಾಧಿಸಲು ಶಕ್ತವಾಗದಾಗ ಕಾವ್ಯಸತ್ವದ ಪುನರವತಾರಕ್ಕಾಗಿ, ಹೊಸತೊಂದು ಕಾವ್ಯಮಾರ್ಗವನ್ನು ಕಂಡುಕೊಳ್ಳುವ ಹೊಸ ರೂಪ, ಆವಿಷ್ಕಾರಗಳನ್ನು ತಂದುಕೊಳ್ಳುವ, ಬದುಕನ್ನು ಕುರಿತ ತೀವ್ರವಾದ ಸಂವೇದನೆಯೊಂದಿಗೆ ಸ್ವತಂತ್ರವಾದ ಮನೋಧರ್ಮವನ್ನು ವ್ಯಕ್ತಪಡಿಸುವ ಕಾವ್ಯ 'ನವ್ಯಕಾವ್ಯ'. ಅದು ಯಾವುದೋ ಒಂದು ಅವಧಿಗೆ ಮಾತ್ರ ಸೀಮಿತವಾದದ್ದಲ್ಲ. ಕಾಲಧರ್ಮಕ್ಕೆ ತಕ್ಕಂತೆ ಕಾವ್ಯದಲ್ಲಿ ಬದಲಾವಣೆಯಾದಾಗ ಅದು ತನ್ನ ಹಿಂದಿನದಕ್ಕೆ 'ನವ್ಯ' ಎನಿಸುತ್ತದೆ"ಎನ್ನುವ ಕಣವಿಯವರು ನವ್ಯವೆಂದರೆ ಸದಾ ಬದಲಾಗುತ್ತಿರುವುದೇ ಎಂಬ ನಿಲುವನ್ನುಳ್ಳವರಾಗಿದ್ದಾರೆ ಎನಿಸುತ್ತದೆ. ಇದಕ್ಕೆ ನಿದರ್ಶನವಾಗಿ ಅವರ ಕಾವ್ಯ ಬೆಳೆದು ಬಂದ ಬಗೆಯೇ ನಮ್ಮ ಮುಂದೆ ನಿಂತಿದೆ.

'ನವೋದಯ' ಹಾಗೂ 'ನವ್ಯ' ಮಾರ್ಗಗಳ ಕಾಲದಲ್ಲಿ ತೆರೆದ ಮನಸ್ಸಿನಿಂದ ತಾವು ಬದುಕಿರುವುದೇ ತಮ್ಮ ಕಾವ್ಯದಲ್ಲಾದ ಬದಲಾವಣೆಗೆ ಪ್ರೇರಣೆಯಾಯಿತೆಂದು ಕಣವಿ ಹೇಳುತ್ತಾರೆ. "....ಈ ಬದಲಾವಣೆಯ ಬಯಕೆ ನನ್ನನ್ನೊಳಗೊಂಡು ಹಲವರ ಮನಸ್ಸಿನಲ್ಲಿ ಆಗ ಮಿಡಿಯುತ್ತಿತ್ತು. ೧೯೪೪ರಿಂದ ೧೯೫೭ರವರೆಗಿನ ಶ್ರೀ ಅಡಿಗರೊಂದಿಗಿನ ನನ್ನ ಪತ್ರವ್ಯವಹಾರ ಇದಕ್ಕೆ ಕೆಲಮಟ್ಟಿಗೆ ಪ್ರೇರಕವಾಗಿದೆ. ಮುಂದೆ ಶ್ರೀ ಗೋಕಾಕರು ಧಾರವಾಡಕ್ಕೆ ಬಂದು ನೆಲಸಿದಾಗ ಅವರ ನಿಕಟ ಸಂಪರ್ಕದಿಂದ ನವ್ಯಕಾವ್ಯದ ಬಗೆಗೆ ಹೆಚ್ಚಿನ ಆಸಕ್ತಿಯುಂಟಾಯಿತು. ೧೯೫೭ರಲ್ಲಿ ಸ್ವಲ್ಪ ಅವಸರದಲ್ಲಿಯೇ ನಾವಿಬ್ಬರೂ 'ನವ್ಯ ಧ್ವನಿ'ಯನ್ನು ಸಂಪಾದಿಸಿ ಪ್ರಕಟಿಸಿದೆವು" ಎಂದು ಹೇಳುವ ಕಣವಿ ನಮ್ಮ 'ನವೋದಯ'ಹಾಗೂ 'ನವ್ಯ' ಕಾವ್ಯಗಳ ನಡುವಣ ವ್ಯತ್ಯಾಸಗಳನ್ನು ಗುರುತಿಸುತ್ತ ಹೀಗೆನ್ನುತ್ತಾರೆ.

"ವಾಸ್ತವ ಪ್ರಜ್ಞೆ, ಆತ್ಮ ವಿಮರ್ಶೆ, ಕಲಾಜಾಗೃತಿ, ಸೂಕ್ಷ್ಮವಾದ ವ್ಯಂಗ್ಯದಾಟಿ, ನೂತನ ಛಂದ್ರಃಪ್ರಯೋಗ- ಇವು ಕೆಲಮಟ್ಟಿಗೆ ಕಂಡುಬಂದ ವ್ಯತ್ಯಾಸಗಳು. ಜೀವನ ಪ್ರೀತಿ, ಅತಿಯಲ್ಲದ ಆಶಾವಾದ, ಪ್ರಕೃತಿ ಪ್ರೇಮ, ಅಂತಃಶ್ರದ್ಧೆ, ಶುಚಿಪರಾಯಣತೆ, ಗುಣಸ್ವೀಕಾರ ದೃಷ್ಟಿ, ದೇಸಿಯ ಬಳಕೆ ಇವು ನನ್ನ ಎರಡೂ ಬಗೆಯ ಪದ್ಯಗಳಿಗೆ ಸಮಾನವಾಗಿರತಕ್ಕ ಅಂಶಗಳು."

**"ನವ್ಯ" ಮಾರ್ಗದಲ್ಲಿ ಸಾಗಿಬಂದಿರುವ ಕಾರಣ ತಮ್ಮ ಸಂವೇದನೆ ಯಾವ ರೀತಿ ಬದಲಾವಣೆಗೊಂಡಿತು ಎಂಬುದನ್ನು ತಿಳಿಸುವಿರಾ?"**

"ಮೇಲೆ ಸೂಚಿಸಿದ ವ್ಯತ್ಯಾಸಗಳಲ್ಲಿಯೇ ಇದಕ್ಕೆ ಉತ್ತರವಿದೆ. ಸಂಯಮ,

ಸಮಗ್ರದ ದೃಷ್ಟಿ, ಸತತ ಪರಿಶ್ರಮದ ಅಗತ್ಯಗಳನ್ನು ಕಂಡುಕೊಂಡ ಮನಸ್ಸು ತನ್ನ ಸಂವೇದನೆಯನ್ನು ಮೊಂಡುಗೊಳಿಸದೆ ಸದಾ ಜಾಗ್ರತವಾಗಿಟ್ಟುಕೊಳ್ಳಲು ಹವಣಿಸಿತು. ಅಲ್ಲದೆ ಭಾವಗೀತೆ ಹಾಗೂ ನವ್ಯಕಾವ್ಯ ಇವುಗಳ ಸಮನ್ವಯವನ್ನು ಸಾಧಿಸುವ ಪ್ರಯತ್ನ ನನಗರಿವಿಲ್ಲದೆಯೇ, ತನ್ನಷ್ಟಕ್ಕೇ ತಾನೇ ನಡೆಯಿತು."

ಆದರೆ ನವ್ಯ ಕಾವ್ಯದಿಂದ ಏನಾಗಬೇಕಾಗಿತ್ತೋ ಅದೆಲ್ಲವೂ ಈಗ ಆಗಿಹೋಗಿರುವುದರಿಂದ ಇನ್ನೂ ಹೆಚ್ಚಿನದನ್ನು ಅದರಿಂದ ಅಪೇಕ್ಷಿಸಬಾರದು. ಅದು ತನ್ನ ಕೆಲವು ಒಳ್ಳೆಯ ಗುಣಗಳನ್ನು ಮುಂಬರುವ ಕಾವ್ಯಕ್ಕೆ ಧಾರೆಯೆರೆದು, 'ಜನಪ್ರಿಯತೆ'ಯನ್ನು ಕಡೆಗಣಿಸಿದೆ. ಬದುಕಿನ ಸವಾಲುಗಳನ್ನು ಸ್ವೀಕರಿಸುವ ಹೊಸ ಕಾವ್ಯವನ್ನು ಹಸನ್ಮುಖದಿಂದ ಬರಮಾಡಿಕೊಳ್ಳಬೇಕೆಂದು ಕಣವಿ ಅಭಿಪ್ರಾಯ ಪಡುತ್ತಾರೆ. ಈ ಬದಲಾವಣೆಯ ಅಂಗವಾಗಿ ಕಾವ್ಯವನ್ನು ಇನ್ನೂ ಸ್ವಲ್ಪ ಹೆಚ್ಚಿನ ರೀತಿಯಲ್ಲಿ ಜನ ಸಂಪರ್ಕಕ್ಕೆ ಯತ್ನಿಸಬೇಕೆಂಬುದು ಕಣವಿಯವರ ಆಶೆ. ಯಾವ ಕಾವ್ಯವೂ ಸಂಪೂರ್ಣವಾಗಿ ಅರ್ಥವಾಗಬೇಕಾಗಿಲ್ಲವಾದರೂ ಹೇಳುವ ರೀತಿಯಲ್ಲಿ ಕ್ಲಿಷ್ಟತೆ ಇರಬಾರದು ಎಂದು ಈ ಕವಿ ಬಯಸುತ್ತಾರೆ.

ಅಲ್ಲದೆ ಸಮಾಜದಲ್ಲಿ ಇತರ ಕಲೆಗಳಿಗೆ ಯಾವ ಸ್ಥಾನವಿದೆಯೋ ಅದೇ ಸ್ಥಾನ ಕಾವ್ಯಕ್ಕೂ ಇರಬೇಕು ಎಂದವರು ಹೇಳುತ್ತಾರೆ. ಆದರೆ, "ನಮ್ಮ ಜನತೆಯ ನಿರಕ್ಷರತೆಯನ್ನು ಹೋಗಲಾಡಿಸದೆ ಅದಕ್ಕೆ(ಕಾವ್ಯಕ್ಕೆ) ಯಾವ ಸ್ಥಾನವನ್ನು ಕೊಟ್ಟರೂ ಏನು ಪ್ರಯೋಜನ?" ಈ ಸಂದರ್ಭದಲ್ಲಿ ಕಾವ್ಯವು 'ಸಾಮಾಜಿಕ ಅಭಿವ್ಯಕ್ತಿ' ಯಾಕಾಗಬಾರದು? ಎಂದು ಕಣವಿ ಕೇಳುತ್ತಾರೆ. "ಕವಿಯೂ ಸಮಾಜದ ಒಂದು ಘಟಕವಾಗಿರುವುದರಿಂದ ಹಾಗೂ ನಿತ್ಯವೂ ಅದರ ಒಡನಾಟದಲ್ಲಿರುವುದರಿಂದ ಅದರ ಸಮಸ್ಯೆಗಳನ್ನು, ವ್ಯವಸ್ಥೆಯನ್ನು, ಲೋಪದೋಷಗಳನ್ನು ವಿವೇಚಿಸಬೇಕಾಗುತ್ತದೆ. ರಾಜಕೀಯವೂ ಅದಕ್ಕೆ ಹತ್ತಿರದಲ್ಲಿಯೇ ಇರುವುದನ್ನು ಗಮನಿಸಬೇಕಾಗುತ್ತದೆ. 'ಸಾಮಾಜಿಕ ಅಭಿವ್ಯಕ್ತಿ' ಕವಿಯ 'ಸಾಮಾಜಿಕ ಪ್ರಜ್ಞೆ'ಯನ್ನು ಅವಲಂಬಿಸಿದೆ. ಈ ಅಭಿವ್ಯಕ್ತಿ ಸಹಾನುಭೂತಿಯ ಮಟ್ಟದ್ದಾಗಿರಬಹುದು. ಸಾಮೂಹಿಕ ಸ್ಥಿತಿಯ ತೀವ್ರಾನುಭವ ಹಾಗೂ ಆ ಬಗ್ಗೆ ವಿಶೇಷ ಕಾಳಜಿಯುಳ್ಳ ಕವಿಯಿಂದ ಮಾತ್ರ ಇದು ಸಾಧ್ಯ" ಎನ್ನುವ ಕಣವಿಯವರು 'ನವ್ಯ ಕಾವ್ಯ'ವನ್ನು ಬದಲಾಯಿಸುವಾಗ ಅದಕ್ಕೆ ಹೊಸತನ ನೀಡುವಲ್ಲಿ ಮೇಲ್ಕಂಡ ಅಂಶಗಳೂ ಸಹಕಾರಿಯಾಗಬಹುದೆಂಬುದನ್ನು ಸೂಚಿಸುತ್ತಾರೆ.

**"ಜನಸಾಮಾನ್ಯರಿಗಾಗಿಯೇ ಉದ್ದೇಶ ಪೂರ್ವಕವಾಗಿ ಅವರಿಗರ್ಥವಾಗುವ ಹಾಗೆ ಕವಿ ಬರೆಯಲೇಬೇಕು?ಕಾವ್ಯ ಯಾರಿಗಾಗಿ?" ಎಂದು ನಾನು ಪ್ರಶ್ನಿಸಿದೆ.**

ಕಣವಿ ಹೇಳಿದರು : ಕವಿ ಹೀಗೆ ಬರೆಯಲೇಬೇಕು ಎನ್ನುವ ಒತ್ತಾಯ ಸಲ್ಲದು. ಕಾವ್ಯರಚನೆಗೆ ಮುಖ್ಯವಾದುದು ತನ್ನ ಅನುಭವದ ಆಂತರಿಕ ಒತ್ತಡ. ಆದರೆ ಯಾವ ಬದುಕಿನ ಪರಿಸರದಲ್ಲಿ ಆತನ ಕಾವ್ಯ ನಿರ್ಮಾಣಗೊಂಡಿರುತ್ತದೆಯೋ ಆ ಜನಕ್ಕೆ ಅದು ಹೋಗಿ ಮುಟ್ಟಿದಾಗ ಅದಕ್ಕೆ ಹೆಚ್ಚಿನ ಸಾರ್ಥಕತೆ. ನಿಜವಾದ ಕಾವ್ಯ ತನ್ನ ಓದುಗರ ವಲಯವನ್ನು ವಿಸ್ತರಿಸುತ್ತ ಹೋಗಬಲ್ಲುದು.

'ಜನಸಾಮಾನ್ಯರು' ಎಂಬ ಪದಕ್ಕೆ ನೀವು ಯಾವ ಅರ್ಥವನ್ನು ಇಟ್ಟುಕೊಂಡಿದ್ದೀರೋ ಗೊತ್ತಿಲ್ಲ. ಅವರಿಗೂ ಅರ್ಥವಾಗುವ ಹಾಗೆ ಕಾವ್ಯ ಬಂದರೆ ಅದಕ್ಕಿಂತ ಹೆಚ್ಚಿನ ಸಿದ್ಧಿ ಯಾವುದಿದೆ? ಆದರೆ ಕವಿ ಆ 'ಜನಸಾಮಾನ್ಯ'ಸರಿಯಾಗಿ ಅರ್ಥಮಾಡಿಕೊಂಡಿರಬೇಕಾದುದು ಅಷ್ಟೇ ಮುಖ್ಯ. ಉತ್ತಮ ಕಾವ್ಯ ಎಲ್ಲರಿಗೂ ಎಲ್ಲ ಕಾಲಕ್ಕೂ ತನ್ನ ಸಂಪೂರ್ಣ ಅರ್ಥವನ್ನು ಬಿಟ್ಟು ಕೊಡುತ್ತದೆಂದು ಹೇಳಲುಬಾರದು. ಈ ಸಂದರ್ಭದಲ್ಲಿ ಕೋಲರಿಜ್‌ನ ಮಾತೊಂದು ನೆನಪಿಗೆ ಬರುತ್ತದೆ: 'ಪೋಯೆಟ್ರಿ ಗಿವ್ಸ್ ಮೋಸ್ಟ್ ಪ್ಲೆಜರ್ ವೆನ್ ಓನ್ಲಿ ಜನರಲಿ ಅಂಡ್ ನಾಟ್ ಪರ್‌ಫೆಕ್ಟಲಿ ಅಂಡರ್‌ಸ್ಟುಡ್.'

"ಕಾವ್ಯ ಜೀವನದ ವಿಕಾಸವನ್ನು, ಸಭ್ಯತೆ ಸಂಸ್ಕೃತಿಯನ್ನು ಬಯಸುವ ಎಲ್ಲರಿಗಾಗಿ. ಅದು ಪರಸ್ಪರ ಸಂವಾದಿಯಾದದ್ದಷ್ಟೇ ಹೊರತು ತನ್ನಷ್ಟಕ್ಕೆ ನಿರಪೇಕ್ಷವಾದದ್ದಲ್ಲ. ಕಾವ್ಯದ ಒಟ್ಟಾರೆ ಉದ್ದೇಶ ಜೀವನ ಪ್ರಜ್ಞೆಯನ್ನು ಹೆಚ್ಚಿಸುವುದು, ಮನಸ್ಸು ಹೃದಯಗಳನ್ನು ಸಂಸ್ಕಾರಗೊಳಿಸುವುದು, ಇಡಿಯ ವ್ಯಕ್ತಿತ್ವವೇ ವಿಶ್ವತತ್ತ್ವವನ್ನು ಎದುರಿಸಿ ನಿಲ್ಲುವಂತೆ ಮಾಡುವುದು."

ಕಾವ್ಯ ಬದುಕಿಗೆ ನಿಷ್ಠವಾಗಿರಬೇಕು ಎಂಬ ನಿಲುವಿನ ಕಣವಿಯವರು ತಮ್ಮ ಕಾವ್ಯದಿಂದ ಇನ್ನೂ ಮಹತ್ತರವಾದುದನ್ನು ನಿರೀಕ್ಷಿಸಿರುವಂತಿದೆ; ಅವರ ಕಾವ್ಯದ ಪರಿಚಯವುಳ್ಳವರಿಗೂ ಈ ನಿರೀಕ್ಷೆ ಇದ್ದೇ ಇದೆ. ಕಣವಿಯವರ ಮಟ್ಟಿಗೆ ಈ ನಿರೀಕ್ಷೆ ತಮ್ಮ ಬರವಣಿಗೆಯನ್ನು ಸುಧಾರಿಸಿಕೊಳ್ಳುವ ಹಂಬಲದ ಪ್ರತೀಕವಾಗಿದ್ದರೆ, ಅದರ ಓದುಗರಿಗೆ ಇರುವ ನಿರೀಕ್ಷೆ ಇದುವರೆಗೆ ಇಷ್ಟು ಉತ್ತಮ ಕಾವ್ಯ ನೀಡಿದ ಈ ಕವಿ ಮುಂದೆ ಇನ್ನೂ ಮಹತ್ತರವಾದುದನ್ನು ನೀಡುತ್ತಾರೆ. ಎಂಬ ವಿಶ್ವಾಸವನ್ನು ಧ್ವನಿಸುತ್ತದೆ. ಕಣವಿಯವರಿಗಾದರೋ, "ನನ್ನ ಕಾವ್ಯ ಕೃಷಿ ನನಗೆ ಸಂತೋಷವನ್ನು ನೀಡಿದೆಯೆನ್ನುವುದರಲ್ಲಿ ಸಂದೇಹವಿಲ್ಲ. ಅಲ್ಲಲ್ಲಿ ಸಹೃದಯ ಓದುಗರು ಅದನ್ನು ಮೆಚ್ಚಿಕೊಂಡಾಗ ಆ ಸಂತೋಷ ಸಾರ್ಥಕವಾದುದು ಎನಿಸುತ್ತದೆ. ನನ್ನ ಮಟ್ಟಿಗೆ ಕಾವ್ಯ ಪ್ರಾರಂಭದಲ್ಲಿ ವೈಯಕ್ತಿಕವಾಗಿದ್ದು ಅನಂತರ ಸಾರ್ವತ್ರಿಕತೆಯನ್ನು ಪಡೆಯುವಂಥದ್ದು, ಜೀವನವನ್ನು ಬಿಟ್ಟರೆ ಕಾವ್ಯಕ್ಕೆ ಬೇರೆ ಗತಿಯಿಲ್ಲ. ಕಾವ್ಯ ಬದುಕಿಗೆ ಪರ್ಯಾಯವಾಗಿ

(ಆಲ್ಟರ್‌ನೆಟಿವ್) ಆಗಿರುವ ಸುಂದರ ವಸ್ತುವೆಂದು ನಾನು ಭಾವಿಸುವುದಿಲ್ಲ. ಕಂಡುದನ್ನು, ಉಂಡುದನ್ನು ಮಾತ್ರ ಹೇಳುವುದು ಒಂದು ಗುಣವೆನ್ನಿಸಿದಲ್ಲಿ ಅದಕ್ಕೆ ನನ್ನ ಕಾವ್ಯದಲ್ಲಿ ಯಾವ ಕೊರತೆಯೂ ಇಲ್ಲ. ಆದರೆ ಬದುಕಿನ ಸಮಗ್ರಾನುಭವದ ದೃಷ್ಟಿಯಿಂದ ಅದು ನನ್ನಷ್ಟಕ್ಕೇ ಕೊಂಚ ಅತೃಪ್ತಿಯನ್ನು ಉಂಟು ಮಾಡಿದೆ. ಕಾವ್ಯರಚನೆ ಕಷ್ಟದ್ದು. ಹೊಣೆಗಾರಿಕೆಯದು ಎನ್ನುವುದು ಈಚೆಗೆ ಹೆಚ್ಚು ಹೆಚ್ಚಾಗಿ ನನ್ನ ಅನುಭವಕ್ಕೆ ಬರುತ್ತಿದೆ."

ಈ ಒಂದು ದೃಷ್ಟಿಕೋನವನ್ನು ಹೊಂದಿರುವ ಕಣವಿ ಎತ್ತಲಿಂದಲೂ ನಮ್ಮತ್ತ ಬೆಳಕು ಬರಲಿ ಎಂಬ ಉದಾರವಾದಿಗಳು. 'ನವ್ಯಕಾವ್ಯ'ಕ್ಕೆ ಮೂಲ ಪ್ರೇರಣೆ ವಿದೇಶೀ ಕಾವ್ಯದಿಂದ ಆಯಿತೆಂಬುದನ್ನು ಒಪ್ಪಿದರೂ ಕಣವಿ-ಈ ಅಂಶವೇ ಈಗ ಜಗತ್ತು ಹೆಚ್ಚು ಹೆಚ್ಚು ಹತ್ತಿರಕ್ಕೆ ಬರುತ್ತಿರುವುದನ್ನು ತೋರಿಸುತ್ತಾರೆ. ವಿದೇಶಗಳಲ್ಲಿಯ ಪ್ರಭಾವಗಳೂ, ವಿದ್ಯಮಾನಗಳೂ ನಮ್ಮಲ್ಲೂ ಕಂಡು ಬರುತ್ತಿರಬಹುದು. ಆದರೆ ಅವರ ಪ್ರೇರಣೆಗಳೇ ನಮ್ಮವೂ ಎಂದು ನಾವೀನ್ಯತೆಗಾಗಿ ಮಾತ್ರ ಭಾವಿಸಿದರೆ ನಮ್ಮ ಕವಿತೆ ಇಲ್ಲಿಗೆ ಅಸಹಜವಾಗುತ್ತದೆ. ಭಾರತೀಯನ, ಹಾಗೆಯೇ ಕನ್ನಡಿಗನ ಬದುಕಿನ ಪರಿಸರದ ಅನುಭವಕ್ಕೆ, ಸಾಂಸ್ಕೃತಿಕ ವಾತಾವರಣಕ್ಕೆ, ಸಾಮಾಜಿಕ ಪರಿಸ್ಥಿತಿಗೆ ನಾವು ಪ್ರಾಮಾಣಿಕರಾಗಿರಬೇಕಾದದ್ದು ಅತ್ಯಂತ ಮುಖ್ಯವಾದದ್ದು. ಬೇರೆ ಬೇರೆಯ ಪ್ರೇರಣೆಗಳಿಂದ ಪ್ರಚೋದನೆ ಪಡೆಯುವುದು ತಪ್ಪಲ್ಲ; ಆದರೆ ತನ್ನ ಪರಂಪರೆಯ ಪ್ರಜ್ಞೆಗೆ ಅದು ವಿಮುಖವಾಗಿರಬಾರದು ಎಂದು ಕಣವಿ ಅಭಿಪ್ರಾಯ ಪಡುತ್ತಾರೆ.

ಸಮನ್ವಯ, ಕಣವಿಯವರಿಗೆ ಅತ್ಯಂತ ಇಷ್ಟವಾದ ನಿಲುವೆಂದು ತೋರುತ್ತದೆ. ಈ ಸಮನ್ವಯವು ವಿಚಾರಗಳಲ್ಲಿ ಮಾತ್ರವಲ್ಲದೆ ಒಳ-ಹೊರಗೆ, ನುಡಿ-ನಡೆಗಳಲ್ಲಿ ಮತ್ತು ವ್ಯಕ್ತಿ-ಸಮಷ್ಟಿಗಳ ನಡುವೆ ಒಡಮೂಡಬೇಕೆನ್ನುವುದು ಅವರ ವಿಚಾರವಾಗಿರಬಹುದು. ಆಗ ಸತ್ಯವೆಂಬುದು ಅಂಗೈಯ ನೆಲ್ಲಿಯ ಹಾಗೆ ಅನುಭವಕ್ಕೆ ಬರಬಹುದು. ಸದ್ದುಗದ್ದಲವಿಲ್ಲದೆ ತಮ್ಮ ಕಾವ್ಯ ಬರವಣಿಗೆಯನ್ನು ಮುಂದುವರಿಸಿಕೊಂಡು ಹೋಗುತ್ತಿರುವ ಚೆನ್ನವೀರ ಕಣವಿಯವರನ್ನು ಕನ್ನಡ ಕಾವ್ಯದ ಬದಲಾಗುತ್ತಿರುವ ಸಂವೇದನೆಗಳ ಒಂದು ಉತ್ತಮ ಉದಾಹರಣೆ ಎಂದು ಹೇಳಬಹುದು. ನಿನ್ನೆಗಾಗಿ ಪಶ್ಚಾತ್ತಾಪ ಪಡದೆ ಮತ್ತು ನಾಳೆಗೆ ಬೆದರದೆ ಇಂದನ್ನು ಎದುರಿಸುತ್ತಿರುವ ಕಣವಿ ಬದುಕು ಹಾಗೂ ಕಾವ್ಯಗಳೆರಡೂ ಅವರ ಓದುಗರಿಗೆ ಪ್ರಿಯವಾಗಿದ್ದಲ್ಲಿ ಅದು ಕನ್ನಡದ ಅತ್ಯಂತ ಮನೋಜ್ಞ ಪ್ರಸಂಗಗಳಲ್ಲಿ ಒಂದಾಗುತ್ತದೆ.

'ಉದಯವಾಣಿ', ಜನವರಿ ೧೦ ೧೯೭೯.

*

# 'ಚೆಂಬೆಳಕಿ'ನಲ್ಲೊಂದು ಸಂಜೆ

● ಕಮಲ ಹೆಮ್ಮಿಗೆ

ಇದೇ ಜೂನ್ ಇಪ್ಪತ್ತೆಂಟಕ್ಕೆ ಅರವತ್ತರ ಅಂಚಿನಲ್ಲಿರುವ ಸಾಹಿತಿ, ಶ್ರೀ ಚೆನ್ನವೀರ ಕಣವಿಯವರನ್ನು ಸಂದರ್ಶಿಸಲು ಹೋದಾಗ-ಧಾರವಾಡದ ಅಡ್ಡಮಳೆಯ ಆರ್ಭಟ.

ಕಲ್ಯಾಣನಗರದ ಅವರ ಮನೆ 'ಚೆಂಬೆಳಕು'ವಿನಲ್ಲಿ ಅವರು ವಾತ್ಸಲ್ಯದಿಂದ ಬೆಳೆಸಿದ ಹೂವಿನ ಗಿಡಗಳು, ಹಾಗೆ–ಹೀಗೆ ತಲೆಯಾಡಿಸುತ್ತಿದ್ದವು.

ಕೊಕ್ಕರೆ ಗರಿಯಂತೆ ಬೆಳ್ಳಗಿನ ಜುಬ್ಬಾ, ಪೈಜಾಮ ಧರಿಸಿದ್ದ ಕಣವಿಯವರು ತಮ್ಮ ಸಾಹಿತಿ ಪತ್ನಿ ಶ್ರೀಮತಿ ಶಾಂತಾದೇವಿ ಕಣವಿಯವರೊಂದಿಗೆ, ಎಂದಿನ ಸೌಜನ್ಯತೆಯೊಂದಿಗೆ ಬರಮಾಡಿಕೊಂಡರು.

ಕಿಟಿಕಿಯೊಳಗೆ ಕೋಲ್ಮಿಂಚು ಸುಳಿಯುತ್ತಿದ್ದಂತೆ, ವಿದ್ಯುತ್ ಕಣ್ಣು ಮುಚ್ಚಾಲೆಯಾಡ ತೊಡಗಿತು. ಕವಿ 'ಮಳೀ ನೋಡಿದ್ರ ಮಾತೇ ಬ್ಯಾಡ ಅನಿಸ್ತದ' ಎಂದರು. ಕವಿಪತ್ನಿ ಮೇಣದ ಬತ್ತಿ ಹಚ್ಚಿದಾಗ, ಒಂದು ಬಗೆಯ ತೀವ್ರ ಆಪ್ತಪ್ರಭಾವ ಎಲ್ಲರನ್ನೂ ಆವರಿಸಿತು. 'ವಿದ್ಯುದ್ದೀಪಕ್ಕಿಂತ ತಂಪದ ನೋಡ್ರಿ. ಹೆಚ್ಚು ವಿಚಾರ ಮಾಡ್ಲಿಕ್ಕೆ ಹಚ್ತದ' ಎಂದರು ಕಣವಿ. 'ಬಹುಶಃ ಕವಿತೆ ಕೊಡುವ ಆಪ್ತ, ಖಾಸಗೀ ಅನುಭವದ ಹಾಗೆ?' ಎಂದೆ ಮುಗುಳ್ನಕ್ಕು 'ನೋಡ್ರಿ, ಬೇಂದ್ರೆಯವರನ್ನ ಶ್ರಾವಣದ ಕವಿ ಅಂದಂಗ ನನ್ನನ್ನೂ ಮಳೆಗಾಲದ ಕವಿ ಅಂತ ಮಿತ್ರರೊಬ್ಬರು ಕರದಾರ' ಎಂದರು. (ನಿಜವೇ, ಧಾರವಾಡದ ಮಳೆ, ತನ್ನೆಲ್ಲ ಭವ್ಯತೆಯೊಂದಿಗೆ ಅವರ ಕಾವ್ಯದಲ್ಲಿ ಚಿತ್ರಿತವಾಗಿದೆ.)

ಸಂದರ್ಶನ, ಮಾತುಕತೆ ಮುಗಿಯಿತು. ಚಹಾಪಾನ ಇತ್ಯಾದಿಯ ನಂತರ, ತೋಟಕ್ಕೆ ಹೋದೆವು. ಮಳೆ ಸಣ್ಣಗಿತ್ತು. ಮಾವಿನ ಗಿಡ, ಹೆಚ್ಚಿನ ಹನಿಗಳು ತಳಿಯುತ್ತಿತ್ತು. ಮಾವಿನ ಕಾಯಿಗಳು, ಹುಳಿಯ ಸೊಕ್ಕಿನಿಂದ ತೂಗುತ್ತಿದ್ದವು. ಎಟುಕುತ್ತಿದ್ದರಿಂದ ಕೈಯಲ್ಲಿ ಹಿಡಿದೆ. ಕಣವಿಯವರು 'ಹಣ್ಣಾದ ಮೇಲೆ ನೀವು ಇನ್ನೊಮ್ಮೆ ಬರಬೇಕು' ಎಂದರು. 'ಒಗರು ಒಳ್ಳೆಯದಲ್ಲ' ಎಂದು ತಮ್ಮದೇ ಶೈಲಿಯಲ್ಲಿ ಸೂಚ್ಯವಾಗಿ ತಿಳಿಸಿದ್ದರು! ಅಲ್ಲೇ ಅಶೋಕದ ಗಿಡವಿತ್ತು. ಚಿಗುರುಗಳನ್ನು

ಸೂಚಿಸುತ್ತ 'ಎಣ್ಣೆ ಬಳಿದು ಕೊಂಡಂಗನಿಸ್ತದಲ್ಲ?' ಎಂದರು. ('ಯುಗಾದಿಯ ಕವಿತೆ' ಎಂಬ ಸಾನೆಟ್ಟಿನಲ್ಲಿ ಅವರು ಇದೇ ಉಪಮೆ ಬಳಸಿದ್ದು ನೆನಪಾಯಿತು.)

ಆಮೇಲೆ ಒಳಗೆ ಬಂದೆವು. ಶ್ರೀಮತಿ ಕಣವಿಯವರೂ ಹಾಡುವಂತೆ ಮಾಡಿದೆವು.

ಮಳೆ ನಿಂತಿತು, ವಾತಾವರಣ ತಂಪಾಗಿತ್ತು. ನಾನು ವಾಪಸು ಬಂದೆ. ಚೆಂಬೆಳಕು ಮನಸ್ಸನ್ನು ತುಂಬಿಕೊಂಡಿತ್ತು. ನಮ್ಮ ಸಂದರ್ಶನ ಕೆಳಗಿನ ಅಂಶಗಳನ್ನು ಒಳಗೊಂಡಿತ್ತು.

**ಕಣವಿಯವರೇ, ನಿಮ್ಮದು 'ಸಮನ್ವಯ ಕಾವ್ಯ ಮಾರ್ಗ' ಎನ್ನಿಸಿಕೊಂಡಿದೆ. 'ಮಧ್ಯಮ ಮಾರ್ಗದ್ದು' ಎಂದೂ ಹಲವರು ಕರೆದಿದ್ದಾರೆ. ನಿಮ್ಮ ಇಂಥ ಸಮನ್ವಯತೆ, ಅನಿವಾರ್ಯವಾಗಿ ಒಡಮೂಡಿದ್ದೇ?ಇಲ್ಲ.....ಪ್ರಯೋಗಶೀಲ ಮೂಲವಾದದ್ದೆ-ಅಥವಾ ನವ್ಯದಿಂದಾದ ನಿರಾಶೆ ಏನಾದರೂ...?**

ನೋಡ್ರಿ ಈ ಪದ ಹೀಗೆ ಬಳಕೆಯಲ್ಲಿ ಬರಲಿಕ್ಕೆ ಒಂದು ಸಂದರ್ಭ ಬಹುಶಃ ನಿಮಿತ್ತವಾಗಿರಬಹುದು. ಅದೇನು ಅಂದರೆ, ೧೯೬೭ನೆಯ ಇಸ್ವಿ, ನವೆಂಬರ್‌ನಲ್ಲಿ ಗೋಕಾಕರು ಬೆಂಗಳೂರಿನಿಂದ 'ಸಮನ್ವಯ' ಎಂಬ ತ್ರೈಮಾಸಿಕವೊಂದನ್ನು ಪ್ರಾರಂಭಿಸಿದರು. ನಾಲ್ಕೈದು ವರ್ಷ ಚೆನ್ನಾಗಿಯೂ ನಡೀತು. ಅದರ ಸಂಪಾದಕ ಸಮಿತಿಯಲ್ಲಿ ನಾನೂ ಇದ್ದೆ. ಶಿವರುದ್ರಪ್ಪನವರೂ ಇದ್ದರು. ನಮ್ಮನ್ನು ಸಮನ್ವಯ ಕವಿಗಳೆಂದು ಕರೆಯಲು ಕೆಲವರಿಗಾದರೂ  ಇದು ಪ್ರೇರಣೆ ನೀಡಿರಬಹುದಲ್ಲವೇ? ಆದರೆ ಆ ಪತ್ರಿಕೆಯ ಧ್ಯೇಯ ವಾಕ್ಯದಲ್ಲಿರುವ ಒಂದು ಮಾತನ್ನು ಹಲವರು ಗಮನಿಸಿದಂತಿಲ್ಲ. ಅದೇನೆಂದರೆ "ಸಮನ್ವಯ ದೃಷ್ಟಿ ಎಂದು ಸಮಸ್ತ ವೈವಿಧ್ಯಗಳೆನ್ನೆಲ್ಲಾ ಒಂದು ಏಕತಾನತೆಗೆ ತರುವ ಪ್ರಯತ್ನವಲ್ಲ; ಅಥವಾ ಎಲ್ಲವನ್ನೂ ಸದ್ದಿಲ್ಲದೆ ಒಪ್ಪಿಕೊಂಡು ಸಂತೈಸಿಕೊಳ್ಳುವ ಸುಲಭ ಸಮಾಧಾನ ತಂತ್ರವೂ ಅಲ್ಲ."

೧೯೫೮ರಲ್ಲಿ ಪ್ರಕಟವಾದ ನನ್ನ 'ದೀಪಧಾರಿ'ಕವನ ಸಂಗ್ರಹದ ಮುನ್ನುಡಿಯಲ್ಲಿ ಈ ಕವಿತೆಗಳ ಬಗ್ಗೆ ಹೇಳುತ್ತ 'ಆಧುನಿಕ ಭಾವಗೀತೆ ಹಾಗೂ ನವ್ಯ ಮಾರ್ಗಗಳ ನಡುವೆ ನಿರ್ಮಾಣಗೊಂಡಿರುವ ಕಂದರಕ್ಕೆ ಇದು ಸೇತುವೆಯಾದೀತು'ಎಂಬ ಭಾವನೆ ವ್ಯಕ್ತಪಡಿಸಿದ್ದೆ. ಮುಂದೆಯೂ ನನ್ನ ರೀತಿಯಲ್ಲಿ ನಾನು, ಕಾವ್ಯ ರಚನೆಯನ್ನು ಮುಂದುವರಿಸಿಕೊಂಡು ಬಂದೆ. ಕನ್ನಡ ಕಾವ್ಯ ಪರಂಪರೆಯಲ್ಲಿಯ ನನ್ನ ಶ್ರದ್ದೆ ಹಾಗೂ ಹೊಸದರ ಬಗೆಗಿನ ನನ್ನ ಗುಣಸ್ವೀಕಾರ  ದೃಷ್ಟಿ ಇವು ಸ್ವಾಭಾವಿಕವಾಗಿಯೇ ಸಮನ್ವಯತೆಗೆ ಕಾರಣ. ಆದ್ದರಿಂದ ಅದು ಕೇವಲ ಪ್ರಯೋಗಮೂಲವಾದದ್ದಲ್ಲ.

**ಅಂದ ಹಾಗೆ, 'ಒಂದು ತಲೆಮಾರಿನ ಕಣ್ಣು ತೆರೆಸಿದ ಕವಿ' ಅಡಿಗರ ಸಂಪರ್ಕ ನಿಮಗೆ ಆಗ ಬಂದಿತ್ತೆ?**

ಬಂದಿತ್ತು. ತುಂಬ ಆತ್ಮೀಯವಾಗಿಯೇ. (ಈಗಲೂ ಅಷ್ಟೇ) ೧೯೫೦ರಿಂದಲೇ ಅಡಿಗರೊಡನೆ ನನ್ನ ಪತ್ರ ವ್ಯವಹಾರ ಪ್ರಾರಂಭವಾಗಿತ್ತು. ತಡೀರಿ, ನಿಮಗೂ ಅಷ್ಟು ತೋರಿಸ್ತೇನೆ (ಇಷ್ಟೆಂದು, ಒಳಗೆ ಹೋಗಿ ಹಳೆಯ ಪತ್ರಗಳ ಒಂದು ಕಟ್ಟನ್ನೇ ತಂದರು. ಒಂದಿಷ್ಟೂ ಜೀರ್ಣವಾಗಿಲ್ಲದ, ಜತನವಾಗಿಟ್ಟಂಥ ಪತ್ರಗಳು ಅವು ಎಂಬುದನ್ನು ನಾನು ಗಮನಿಸಿದೆ)

ಇದು ನೋಡ್ರೀ, ಅಡಿಗರು ಅವರು ನನ್ನ ಮೊದಲೆರಡು ಕವನ ಸಂಕಲನಗಳನ್ನೋದಿ (ಕಾವ್ಯಾಕ್ಷಿ, ಭಾವಜೀವಿ) ಬರೆದ ಪತ್ರ:

"ನಿಮ್ಮಲ್ಲಿ ಕಾಣುವ ಒಂದು ದೊಡ್ಡ ಗುಣ: ಯಥಾರ್ಥತೆ–ಸಿನ್ಸಿಯಾರಿಟಿ. ಈ ನಿಮ್ಮ ಕವನಗಳಲ್ಲಿ ಯಾವ ವಿಧವಾದ ನಾಟಕೀಯತೆ, ಪೋಸಿಂಗ್ ಕೊಂಚವೂ ಇಲ್ಲ. ಕಂಡುದನ್ನು ಉಂಡುದನ್ನು ಮಾತ್ರ ಹೇಳುವ ದೊಡ್ಡ ಕಲೆಗಾರನ ದೊಡ್ಡ ಗುಣ ಇಲ್ಲಿ ಕಂಡು ಬರುತ್ತದೆ."

ಇಷ್ಟೇ ಅಲ್ಲ ಎಚ್ಚರಿಕೆಯ ಸಲಹೆಯೂ ಇರುತ್ತಿತ್ತು. "ಕಲೆಯ ಇದಿರು ವಿನಯವನ್ನು ಬಿಡಬೇಡಿ. ಈ ವಿನಯದ ಹಿಂದೆ ಇರಬೇಕಾದುದು ಚಿರಂತನವಾದ ಅತೃಪ್ತಿ.... ನಾವು ಕವಿಗಳೆನ್ನಿಸಿಕೊಳ್ಳುವವರು ಸದಾ ಆತ್ಮ ವಿಮರ್ಶೆಯ ಶಕ್ತಿಯನ್ನು ಬೆಳೆಸಿಕೊಳ್ಳಬೇಕಾಗುತ್ತದೆ. ಇಲ್ಲವಾದರೆ ನಮ್ಮ ಕಲೆ ಕೆಡುತ್ತದೆ."

ಇವೆಲ್ಲ ಮಾತುಗಳು ಆಗ ನನಗೆ ಮಾರ್ಗದರ್ಶಕವಾಗಿದ್ದವೆಂಬುದನ್ನು ಸ್ಮರಿಸದೇ ಇರಲಾರೆ.

**ನಿಮ್ಮ ಕಾವ್ಯವನ್ನು ಅಭ್ಯಾಸ ಮಾಡಿದಾಗ ಅಲಂಕಾರಿಕತೆ, ನಾದಮಯತೆಗಳಿಗೆ ವಿರುದ್ಧವಾಗಿ ಸರಳತೆ, ವರ್ಣಕತೆಗಳು ಸ್ಥಾನ ಪಡೆದಿರುವುದನ್ನು ಗುರ್ತಿಸಿದ್ದೇನೆ. ಇದಕ್ಕೆ ನಿಮ್ಮದೇ ಆದ ಉದ್ದೇಶ ಕಾರಣಗಳು ಇವೆಯೇ? ಹೇಳಿ.**

ಸರಳತೆ ನನ್ನ ಕಾವ್ಯದ ಸಹಜ ಗುಣ ಅಷ್ಟೇ. ವರ್ಣಕತೆಯಿಂದ ಓದುಗರು ಆಕರ್ಷಿತರಾಗುವುದಿಲ್ಲವೇ? ಆಮೇಲೆ ಅದರ ಆಳಕ್ಕೆ ಕರೆದೊಯ್ಯಲಿಕ್ಕೆ ಸುಲಭ. ಕಾವ್ಯ ಆಡುವ ಮಾತಿನಲ್ಲೇ ಅಲಂಕಾರವಿದೆ; ಹೊರಗಲ್ಲ. ಇನ್ನು 'ನಾದಮಯತೆ' ನನ್ನ ಕಾವ್ಯದಲ್ಲಿ ಕಾಣದು ಎಂದಿರಿ. ನಾನು ಕಾವ್ಯದಲ್ಲಿ ಬಯಸುವುದು ಭಾವನಾದಗಳ ಪರಿಣತಿಯನ್ನು.

**ನಿಮ್ಮ ಕಾವ್ಯ ಜೀವನದ ಮೇಲೆ ಕರ್ನಾಟಕ ಸಂಸ್ಕೃತಿಯ ಕೇಂದ್ರಗಳಲ್ಲೊಂದಾದ ಧಾರವಾಡ ಬಹಳ ಗಾಢವಾಗಿ ಅಚ್ಚೊತ್ತಿದೆಯಲ್ಲವೆ? ಈ ಬಗ್ಗೆ ಸ್ವಲ್ಪದರಲ್ಲಿ ಹೇಳ್ರಿ.**

ಓಹೋ ಖಂಡಿತವಾಗಿ. ನಾನು ಧಾರವಾಡಕ್ಕೆ ಹಾಯಸ್ಕೂಲ ಶಿಕ್ಷಣಕ್ಕೆ ಬಂದಿದ್ದು

೧೯೪೮ರಲ್ಲಿ. ಅಂದಿನಿಂದಲೂ ಧಾರವಾಡ ನನ್ನೂರೇ ಎನ್ನಿಸಿತು. ನಗರವಾಗಿದ್ದೂ ಆಗ ಇಲ್ಲಿ ಹಳ್ಳಿಯ ವಾತಾವರಣ. ಹೀಗಾಗಿ ಇದು ಪರಕೀಯ ಅನ್ನಿಸಲಿಲ್ಲ. ಬಯಲು ಸೀಮೆ ಹಾಗೂ ಮಲೆನಾಡು ಎರಡರ ಸೆರಗಿನಂತಿರುವ ಇಲ್ಲಿ ನಿಸರ್ಗ ತುಂಬ ಚೇತೋಹಾರಿಯಾಗಿತ್ತು. ಆಗ ಮೇಲಿಂದ ಮೇಲೆ ನಡೆಯುತ್ತಿದ್ದ ವಿದ್ವಾಂಸರ ಭಾಷಣಗಳು. ಸಾಹಿತ್ಯಕ ಸಭೆ ಸಮಾರಂಭಗಳು, ಕಾವ್ಯಗಾಯನ ಕಾರ್ಯಕ್ರಮಗಳು, -ಬೇಂದ್ರೆಯವರ 'ಶ್ರಾವಣ ಬಂತು', 'ಆನಂದ ಕಂದ'ರ 'ಜಯ ಜಯ ಫಾಲ್ಗುಣಾ' ನರಸಿಂಹ ಸ್ವಾಮಿಗಳ 'ರಾಯರು ಬಂದರು' ಮೊದಲಾದ ಕವಿತೆಗಳನ್ನು ಭಾಗವತ ಮಾಸ್ತರರು ಹಾಡಿದಾಗ ನಾನು ಪುಲಕಗೊಳ್ಳುತ್ತಿದ್ದೆ. ಸ್ವತಃ ಬೇಂದ್ರೆಯವರೇ ತಮ್ಮ ಕವಿತೆಗಳನ್ನು ತಮ್ಮದೇ ಧಾಟಿಯೊಳಗೆ ಅಂದು, ಹೊಸ ಬಗೆಯ ಅನುಭವ ತಂದು ಕೊಡುತ್ತಿದ್ದರು.

ಇನ್ನು ಮುರುಘಾಮಠದ ಉಚಿತ ಪ್ರಸಾದ ನಿಲಯದ ಮೃತ್ಯುಂಜಯ ಸ್ವಾಮಿಗಳು ವೀ.ರು. ಕೊಪ್ಪಳ ಮಾಸ್ತರು, ಕರ್ನಾಟಕ ಕಾಲೇಜದ ಪ್ರೊ. ಮಾಳವಾಡ. ಪ್ರೊ. ಮೆನೆಜಸ್, ಕರ್ನಾಟಕ ವಿದ್ಯಾವರ್ಧಕ ಸಂಘದ ಸಭೆ-ಸಮಾರಂಭಗಳಲ್ಲಿ ಪ್ರಮುಖರಾಗಿರುತ್ತಿದ್ದ ಪ್ರೊ. ಬಸವನಾಳ, ಬೆಟಗೇರಿ ಕೃಷ್ಣ ಶರ್ಮ, ಶಂಬಾ ಜೋಶಿ, ಉತ್ತಂಗಿ ಚೆನ್ನಪ್ಪ, ಡಾ. ಪಾವಟೆ, ಶ್ರೀ ರಂಗರು ಮೊದಲಾದವರನ್ನ ಸ್ಮರಿಸಲೇಬೇಕು.

ನಾವು ಕೆಲವು ಗೆಳೆಯರು-ಶಿವೇಶ್ವರ ದೊಡ್ಡಮನಿ, ಕೀರ್ತಿನಾಥ ಕುರ್ತಕೋಟಿ, ಶಂಕರ ಮೊಕಾಶಿ, ವಸಂತ ಕವಲಿ, ಚಿದಂಬರ ದೀಕ್ಷಿತ ಮುಂತಾದವರು 'ಕಾವ್ಯಾನುಭವ ಮಂಟಪ' ಕಟ್ಟಿಕೊಂಡು, ವಾರಕ್ಕೊಮ್ಮೆ, ನನ್ನ ರೂಮಿನಲ್ಲಿಯೇ ನಮ್ಮ ನಮ್ಮ ಕವಿತೆಗಳ ವಾಚನ-ವಿಮರ್ಶೆ ನಡೆಸುತ್ತಿದ್ದೆವು. ಬಸವರಾಜ ಕಟ್ಟೀಮನಿ, ಆಗಿನಿಂದಲೇ ನಮಗೆ ಹಿರಿಯ ಸ್ನೇಹಿತರಾಗಿ ಪ್ರೋತ್ಸಾಹಿಸುತ್ತಿದ್ದರು.

**ನೀವು ಕನ್ನಡಕ್ಕಾಗಿ ಮೊದಲಿಂದ ದುಡಿದವರು. ಗೋಕಾಕ್ ಚಳುವಳಿಯಲ್ಲಿ ಮುಂಚೂಣಿಯಲ್ಲಿದ್ದಿರಿ. ಕೇಂದ್ರ ಕನ್ನಡ ಕ್ರಿಯಾಸಮಿತಿಯಲ್ಲಿ ಅಗ್ರರಿದ್ದೀರಿ. ಸದ್ಯ, ಬೆಳಗಾವಿ ಗಡಿಸಮಸ್ಯೆಯ ಬಗ್ಗೆ ನಿಮ್ಮ ದೃಷ್ಟಿಯಲ್ಲಿ ಏನು ಪರಿಹಾರವಿದೆ?**

ಬೆಳಗಾವಿ ಗಡಿ ಸಮಸ್ಯೆ, ಎಂದೋ ಮುಗಿದು ಹೋಗಿದೆ, ಏನ್ರೀ... ಅಲ್ಲಿರುವ ಕನ್ನಡಿಗರೂ ಮರಾಠಿಗರೂ ಇಂದಿಗೂ ಬಂಧುಗಳಂತೇ ಸಹಜೀವನ ನಡೆಸುತ್ತಿದ್ದಾರೆ. ಆದರೆ ಅದನ್ನೊಂದು ಸಮಸ್ಯೆಯಾಗಿ ಭ್ರಮಿಸಿರುವವರು, ಮಹಾರಾಷ್ಟ್ರದ ಕೆಲವು ಸ್ವಾರ್ಥ ರಾಜಕಾರಣಿಗಳು ಹಾಗೂ ಅವರ ಕಾರಸ್ಥಾನದ ಕೆಲವು ಪತ್ರಿಕೆಗಳು ಇದಕ್ಕೆ ಕೆಲವೊಮ್ಮೆ ಕೆಲಮಟ್ಟಿಗೆ ಹೊಣೆಗಾರ ಎನ್ನಬಹುದು. ಮಹಾಜನ ವರದಿ ಬಂದಾಗಲೇ, ಮೊದಲೇ ಒಪ್ಪಿಕೊಂಡಂತೆ ಅದನ್ನು ತಕ್ಷಣ ಜಾರಿಗೆ ತಂದು, ತನ್ನ ಕರ್ತವ್ಯವನ್ನು ಅದು

ಈಡೇರಿಸಬೇಕಿತ್ತು. ಈಗಾದರೂ ಯಾರ ಮರ್ಜಿಯನ್ನೂ ಕಾಯದೇ ಕೇಂದ್ರ ತನ್ನ ತಪ್ಪನ್ನು ತಿದ್ದಿಕೊಂಡು ಕಟ್ಟುನಿಟ್ಟಿನ ಧೋರಣೆ ತಳೆಯುವದೊಂದೇ ಇದಕ್ಕೆ ಪರಿಹಾರ...

**ಮತ್ತೆ ಕಾವ್ಯದ ಕಡೆಗೆ ಹೊರಳೋಣ್ರಿ ಕಣವಿಯವರೆ, ಈಗಿನ ಪರಿಸ್ಥಿತಿ ನೋಡಿದರೆ ಕವಿಗಣವೂ ಸಹಿತ 'ಬಂದ ದಾರಿಯ ಕಡೆಗೆ ಕಣ್ಣು ಹೊರಳಿಸುತ್ತಿದೆ'- ಯೇನೋ ಅನಿಸ್ತದೆ. ನವೋದಯ ನವ್ಯಗಳಲ್ಲಿ ಸಾಕಷ್ಟು ಕೃಷಿ ಮಾಡಿದ ನಿಮಗೆ, ಇಂದಿನ ಸ್ಥಿತಿಯೊಳಗೆ ಯಾವ ಮಾರ್ಗ ಸರಿ ಎಂದು ಕಾಣಿಸಿದೆ?**

ನಡೆದು ಬಂದ ದಾರಿಯನ್ನು ಅವಲೋಕಿಸುವುದು ಒಳ್ಳೇದು. ಅಂದರೆ, ನಾವು ಹಿಡಿದ ದಾರಿ ಸರಿ ಇದೆಯೋ ಇಲ್ಲವೋ ಹೊಳೀತದೆ! ಇಂದಿನ ಜೀವನದ ಸಮಸ್ಯೆಗಳು, ಸವಾಲುಗಳು, ಕವಿಯ ಸಾಕ್ಷ್ಮಸಂವೇದನೆಗೆ ಒಳಪಟ್ಟು ತಕ್ಕ ವಿಚಾರಪ್ರಣಾಲಿ ಯೊಂದಿಗೆ, ಕಾವ್ಯದ ರೂಪವನ್ನು ಮರೆಯದೆ ಪ್ರಸ್ತುತಕ್ಕೂ ಸಲ್ಲಬಹುದಾದ ಹಿಂದಿನ ಕಾವ್ಯ ಮಾರ್ಗಗಳ ಒಳ್ಳೆಯ ಅಂಶಗಳನ್ನು ಮೈಗೂಡಿಸಿಕೊಂಡು, ಆದಷ್ಟು ಜನಕ್ಕೆ ಮುಟ್ಟುವ ರೀತಿಯಲ್ಲಿ ಮುಂದುವರೆಯುವುದು ಇಂದಿನ ಸ್ಥಿತಿಯಲ್ಲಿ ಸರಿಯಾದ ಮಾರ್ಗವೆಂದು ತೋರುತ್ತದೆ. ಪಂಥಗಳಾವುದೇ ಇರಲಿ ಕವಿ, ತನ್ನ ನಿಜವನ್ನು ತಾನು ತಿಳಿದಿರಬೇಕು.

**ಓದುವ ಕವಿತೆ, ಕೇಳುವ ಕವಿತೆ, ಹಾಡುವ ಕವಿತೆ, ಕಡೆಗೆ ನೋಡುವ ಕವಿತೆ (ಗೀತ ಚಿತ್ರ) ಕೂಡ ಬಂದಿರುವ ಈ ಕಾಲದಲ್ಲಿ ಕವಿತೆಗಿರುವ ಸಾಧ್ಯತೆಗಳು ಹೆಚ್ಚಾಗಿವೆ ಎನಿಸುತ್ತದೋ, ಇಲ್ಲ ಕವಿತೆಯ ಗೂಢತೆ, ತೀವ್ರತೆಗಳು ಕಡಿಮೆ ಆಗುತ್ತಿವೆ ಎನಿಸುತೋ?**

ಇವೆಲ್ಲದರಿಂದ ಕಾವ್ಯ, ಜನಪ್ರಿಯವಾಗುವ ಅಥವಾ ಬಹಳ ಜನಕ್ಕೆ ಹೋಗಿ ಮುಟ್ಟುವ ಸಾಧ್ಯತೆಗಳು ಹೆಚ್ಚಾಗಿರುವುದರಲ್ಲಿ ಸಂದೇಹವಿಲ್ಲ. ಹಾಡುವ ಹಾಗೂ ನೋಡುವ ಕವಿತೆಗಳು, ಗೇಯತೆ ಮತ್ತು ದೃಶ್ಯಗಳಿಂದ ಕಿವಿಗೂ ಕಣ್ಣಿಗೂ ಹಿತವಾಗಿ, ಪರಿಣಾಮಕಾರಿಯಾಗಬಲ್ಲವು. ಈ ಸಾಧ್ಯತೆಗಳಿಂದ ಕವಿತೆಯ ಗೂಢತೆ ತೀವ್ರತೆಗಳು ಕಡಿಮೆಯಾಗದಂತೆ ನೋಡಿಕೊಳ್ಳುವುದು ಅವನ್ನು ಬಳಸುವ ಕಲಾವಿದರ ಸಾಮರ್ಥ್ಯವನ್ನವಲಂಬಿಸಿದೆ. ಅಲ್ಲದೆ, ಅದು, ಕೇಳುಗರ, ಅಥವಾ ನೋಡುಗರ ಕಲ್ಪನಾಶಕ್ತಿಯನ್ನು ಕುದುರಿಸುವಂತಿರಬೇಕು!

**ಗೇಯ ಕವನಗಳು ಜನಪ್ರಿಯವಾಗಿವೆ, ಮತ್ತೆ ಭಾವಗೀತೆಗಳ ಯುಗಬಂದಿದೆ. ನೀವೂ ಈಚೆಗೊಂದು ಗೇಯ ಕವಿತೆಗಳ ಸಂಕಲನ, 'ಹೂವು ಹೊರಳುವವು ಸೂರ್ಯನ ಕಡೆಗೆ' ಹೊರತಂದಿದ್ದೀರಿ. ಈ ಬದಲಾವಣೆಗಳ ಮೂಲ ಏನಿದ್ದೀತು? ಸಂವಹನ ಸುಲಭವಾಗಲೆಂಬ ಕವಿಯ ಹಂಬಲೆ? ಅಥವಾ ಪ್ರೊಸೈಕ್ ಆಗುತ್ತಿರುವ ಬದುಕಿಗೊಂದಿಷ್ಟು ಚೈತನ್ಯ ಹುಟ್ಟಲೆಂಬ ಉದ್ದೇಶವೇ?**

ಮತ್ತೆ ಭಾವಗೀತೆಗಳ ಕಾಲ ಬಂದಿರುವುದು ಖಂಡಿತಕ್ಕೂ ಒಳ್ಳೆಯದು. ಅಲ್ಲದೆ, ಕಾವ್ಯ ತೀರ ಉಸಿರು ಕಟ್ಟಿಸುವ ಕೆಲಸವಾಗಬಾರದಲ್ಲವೇ? ತಂತ್ರ ಶಿಲ್ಪ ಎಂದು ನವ್ಯರು ಭಾವಗೀತೆ, ಮಕ್ಕಳ ಕವಿತೆಗಳನ್ನು ಸಂಪೂರ್ಣ ನಿರ್ಲಕ್ಷಿಸಿದ್ದು, ಅಷ್ಟು ಮಟ್ಟಿಗೆ ಜನರ ಸಂತೋಷಕ್ಕೆ ಚ್ಯುತಿ ಒದಗಿಸಿದಂತಾಯ್ತು. ನಮ್ಮ ಕಾವ್ಯ ಪರಂಪರೆಯಲ್ಲಿ ಹಾಡು, ಒಂದು ಮುಖ್ಯ ಅಂಶವಾಗಿರುವುದನ್ನು ಅಲ್ಲಗಳೆಯೋದು ಹೇಗೆ ಹೇಳ್ರಿ? ಇದನ್ನನುಲಕ್ಷಿಸಿ, 'ನವ್ಯ'ರಾಗಿದ್ದ ಹಲವರೂ ಮತ್ತೆ ಭಾವಗೀತೆಗಳನ್ನ ಬರೆಯ ತೊಡಗಿರುವುದು ಒಳ್ಳೆಯ ಲಕ್ಷಣ. ನೀವಂದ ಹಾಗೆ ಈ ಬದಲಾವಣೆಗಳ ಮೂಲ, ಸಂವಹನ ಸುಲಭವಾಗಲೆಂಬ ಹಂಬಲದ್ದು. ಅಲ್ಲದೇ ಭಾವಗೀತೆ ಅಥವಾ ಹಾಡು, ಜೀವನದ ಪ್ರೀತಿಯಿಂದ ಹೊರಹೊಮ್ಮುವುದರಿಂದ ಕೇಳುಗರ ಮನಸ್ಸನ್ನು ಬೇಗ ಆರ್ದ್ರಗೊಳಿಸುತ್ತದೆ. ಗಟ್ಟಿ ನೆಲವನ್ನು ಅಗೆಯ ಬೇಕಾದಾಗಲೂ, ಅದಕ್ಕೆ ಮೊದಲು ಸ್ವಲ್ಪ ನೀರುಣ್ಣಿಸಿ ಮೃದುಗೊಳಿಸಿಕೊಳ್ಳುವುದಿಲ್ಲವೇ? ಯಾವುದೇ ಉತ್ತಮ ಕಾವ್ಯ ಭಾವಗೀತಾತ್ಮಕತೆಯನ್ನು ಸಂಪೂರ್ಣ ನಿರಾಕರಿಸಿ ನಿಲ್ಲುವುದಾಗಲೀ, ಗೆಲ್ಲುವುದಾಗಲೀ ಸಾಧ್ಯವಿಲ್ಲವೆಂದೇ ನನ್ನ ಅನಿಸಿಕೆ. 'ಗೀತರೂಪ'ವೂ ಕಾವ್ಯದ ಒಂದು ಪ್ರಕಾರ ತಾನೆ? ಆದರೆ ಅದೇ ಹೊತ್ತಿಗೆ ಕಾವ್ಯ ಗುಣವನ್ನೂ ಅದು ಕಾಪಾಡಿಕೊಂಡಿರಬೇಕಾದ್ದು ಅಗತ್ಯ. ಅಂಥ ಕೆಲವು ಉತ್ತಮ ಗೀತೆಗಳನ್ನು ನೀವೂ ಈಚೆಗೆ ಬರೆದಿದ್ದೀರಿ.

**ನೀವು ಗದ್ಯ ಕೃತಿಗಳನ್ನು ರಚಿಸಿದ್ದಿದೆಯಲ್ಲವೆ? ಆದರೂ ಪದ್ಯದ ಬಗ್ಗೆ ನಿಮ್ಮ ಒಲವು ಹೆಚ್ಚೇ ಅನಿಸುತ್ತದೆ. ಕಾರಣಗಳನ್ನು ಹೇಳುತ್ತೀರಾ?**

ಭಾವಗಳು, ಕವಿತೆಯಲ್ಲಿ ಒಂದು ಪೂರ್ಣಾವಸ್ಥೆಯ ರೂಪವನ್ನು ತಾಳಿ ನಿಲ್ಲುವುದರಿಂದ, ಕಾವ್ಯ ರಚನೆಯಲ್ಲಿಯ ಸುಖ ಗದ್ಯದ ಬರವಣಿಗೆಯಲ್ಲಿ ನನಗೆ ಅಷ್ಟು ಮಟ್ಟಿಗೆ ಸಿಕ್ಕಿಲ್ಲವೆನಿಸುತ್ತದೆ. ಮಳೆಯಿಂದ ಸುರಿದ ನೀರು, ನೆಲದ ಮೇಲೆ, ಸಳಸಳ ಹರಿದು ಹೋಗುವುದಕ್ಕೂ, ಅದೇ ನೀರು ನೆಲದಲ್ಲಿ ಇಂಗಿ ಮುಂದೆ ಒಂದೆಡೆಯಲ್ಲಿ ಚಿಲುಮೆಯಾಗಿ ಪುಟಿಯುವುದಕ್ಕೂ ಇರುವ ಅಂತರವೇ ಗದ್ಯ ಹಾಗೂ ಪದ್ಯಗಳ ಬರವಣಿಗೆಗಿರುವ ಅಂತರವೆಂದು ತೋರುತ್ತದೆ.

**ಅಂದ ಹಾಗೆ, ನೀವೊಂದು ಕವಿತೆಯಲ್ಲಿ ಅಂದಿರುವ 'ಬರೆದ ಕವಿತೆಯ ಭಾರ ಬರೆಯದ ಕವಿತೆಗಿಂತ ಹೆಚ್ಚಲ್ಲ' ಎಂಬ ಮಾತು ನನಗೆ ತುಂಬ ಪ್ರಿಯವಾದುದು. ಇಂತ ಎಷ್ಟೋ ಕವಿತೆಗಳನ್ನ ನೀವು ನಿಮ್ಮೊಳಗೆ ಇಟ್ಟುಕೊಂಡಿರಲಿಕ್ಕೆ ಸಾಕು. ಕವಿತೆ ಬರಯೆ ಬೇಕೆನ್ನಿಸಿ, ಆದರೂ ಬರೆಯದ ವಿಚಿತ್ರಾನುಭವದ ಬಗ್ಗೆ, ನಿಮಗೇನಾದರೂ ಹೇಳಬೇಕೆನಿ ಸುತ್ತದೆಯೇ? ಇದು, ಅಭಿವ್ಯಕ್ತಿಯ ಕಷ್ಟಕ್ಕೆ ಸಂಬಂಧಿಸಿದ್ದರಿಂದ ಕೇಳಬೇಕೆನ್ನಿಸಿದೆ.**

(ನಗು) ನೋಡ್ರಿ ಹೆಮ್ಮಿಗೆ, ಕವಿತೆ ಬರೆದ ಆ ಕ್ಷಣಕ್ಕೆ ನಮ್ಮ ಎದೆಯ ಭಾರ

ಇಳಿದಂತಾಗಬಹುದು. ಆದರೆ ಆಮೇಲೆ ನಾವೇನು ಹೇಳಬಯಸಿದ್ದೇವೋ ಅದೆಲ್ಲವೂ ಅದರಲ್ಲಿ ಬರಲಿಲ್ಲ ಎಂಬ ಅರಕೆ, ಉಳಿದೇ ಉಳಿಯುತ್ತದೆ. ಉಳಿದ ಅನುಭವಗಳೊಟ್ಟಿಗೆ ಅದೂ ಕೂಡಿಕೊಂಡು, ಮತ್ತೆ ಆಕಾರ ತಳೆವ ಸಂದರ್ಭಕ್ಕಾಗಿ ನಾವು ಕಾಯಬೇಕಾಗುತ್ತದೆ. ನೆನೆದಾಗಲೆಲ್ಲ ಮನಸ್ಸಿನಲ್ಲಿ ಅದು ಸುಳುಹುದೋರಿ ಹೊಳಹು ಹಾಕುತ್ತಿರುತ್ತದೆ. ಆ ಸಂವೇದನೆಯೇ ನೀವಂದ ವಿಚಿತ್ರಾನುಭವ! ಹೀಗೆ ಬರೆಯದ ಕವಿತೆಯ ಭಾರ, ಬರೆದ ಕವಿತೆಗಿಂತ ಹೆಚ್ಚು ಎನಿಸುತ್ತದೆ.

**ನೀವು ಕವಿತೆ ಬರೆದ ನಂತರದ ಕ್ಷಣಗಳು ಹೇಗಿರುತ್ತವೆ? ತಿಳಿವ ಕುತೂಹಲ ನನಗೆ...**

ತುಂಬ ಉಲ್ಲಾಸಮಯವಾಗಿರುತ್ತದೆ. ಮನಸ್ಸು ಗರಿ ಹಗುರವಾಗಿರುತ್ತದೆ. ಹಾಗೆಯೇ ಬರೆದದ್ದನ್ನು ಪುನಃ ಓದಿ ನನ್ನಷ್ಟಕ್ಕೇ ಖುಷಿ ಪಡುತ್ತೇನೆ.

**"ಕವಿ ಓರ್ವ ವ್ಯಕ್ತಿಯಾಗಿ ತನ್ನ ಸುತ್ತಣ ಅನುಭವ ಜೀವನದ ಬೆಳವಣಿಗೆಗಳಲ್ಲಿ ಆಸಕ್ತಿ ತಳೆದಷ್ಟೂ ಅವನ ಕಾವ್ಯಕ್ಕೆ ಹೊಸ ಆಯಾಮ ದೊರೆಯುತ್ತದೆ" ಎಂಬುದು ನಿಮ್ಮ ಮಾತು. ಆದರೆ ಅದು, ಅವನ ಕಾವ್ಯಕ್ಕೆ ಹೊಸ ಆಯಾಮ ದೊರಕಿಸುತ್ತದೆಂಬುದಷ್ಟೇ ಸೀಮಿತವೇ? ಅಥವಾ ಅದು ಅವನ ಸಾಮಾಜಿಕ ಹೊಣೆಯನ್ನೂ ಹೆಚ್ಚಿಸುವುದೇ?**

ಅದು ಅಷ್ಟಕ್ಕೇ ಸೀಮಿತವಾಗಿರಬೇಕಿಲ್ಲ. ಸಾಮಾಜಿಕ ಹೊಣೆಯಲ್ಲಿ ಕವಿಯೂ ಪಾಲುಗಾರನೆ. ಅವು ಪರಸ್ಪರ ಪೂರಕವಾದಾಗಲೇನೇ ಅರ್ಥಪೂರ್ಣ.

**ನಿಮ್ಮ ಹೆಚ್ಚಿನ ಕವಿತೆಗಳು ಸಾಮಾಜಿಕ ಪ್ರತಿಕ್ರಿಯೆಯಾಗಿ ಬಂದಂಥವು ಉದಾ: 'ಯಾರು ಕೇಳುತ್ತಾರೆ ಹೇಳಿರಣ್ಣಾ' ಹಾಗೂ ತುರ್ತು ಪರಿಸ್ಥಿತಿ ಕುರಿತ ಹಲವಾರು ಕವಿತೆಗಳು ಕಾವ್ಯ ಪ್ರತಿಕ್ರಿಯಾತ್ಮವಾಗಿರಬೇಕೋ, ಪ್ರಚೋದನಾತ್ಮಕವಾಗಿರಬೇಕೋ ಯಾವುದು ಸಾಧು ನಿಮ್ಮ ಅಭಿಪ್ರಾಯದಲ್ಲಿ?**

ಕೇವಲ ಪ್ರತಿಕ್ರಿಯಾತ್ಮಕವೂ ಇಲ್ಲವೇ ಕೇವಲ ಪ್ರಚೋದನಾತ್ಮಕವೂ ಆಗದೆ, ಬುದ್ಧಿ ಭಾವಗಳನ್ನು ಹದಗೊಳಿಸಿ ಸಂಸ್ಕಾರಗೊಳಿಸಬಲ್ಲಂತೆ, ರಸಾತ್ಮಕವಾಗಿರಬೇಕು. ಇದೊಂದಿದ್ದರೆ ಉಳಿದೆಲ್ಲವೂ ಅದರ ಜೊತೆಗೇನೇ ಬರುತ್ತವೆ.

**ತುಷಾರ, ಜುಲೈ ೧೯೮೮.**

*

# ತುಮಕೂರಿನಲ್ಲಿ ಕೂಡಿದಾಗ ಮಾತುಕತೆ....

● ಜಿ.ವಿ. ಆನಂದಮೂರ್ತಿ; ವೀಚಿ; ಕೆ.ಬಿ. ಸಿದ್ಧಯ್ಯ

ಸಾಹಿತ್ಯ-ಕಾವ್ಯ ಎಂದರೆ ಇದ್ದ ಬಿದ್ದ ಕೆಲಸವನ್ನೆಲ್ಲಾ ಮರೆತು ಒಂದು ಕೈ ಮುಂದಾಗಿಯೇ ಮಾತಾಡುವ ವೀಚಿಯವರನ್ನು ಮುಂದು ಮಾಡಿಕೊಂಡು ನಾನು ಮತ್ತು ಕೇಬಿ ಕಣವಿಯವರನ್ನು ಸಂದರ್ಶಿಸಲು ದಿನ ಗೊತ್ತು ಮಾಡಿಕೊಂಡೆವು.

ಕಣವಿಯವರ ಶಿಸ್ತಿನ ಸಾಂಪ್ರದಾಯಿಕ ಮಾತುಗಳೊಂದಿಗೆ ಮೊದಲ ಸುತ್ತಿನ ಟೀ ಕುಡಿಯುತ್ತಿರುವಾಗಲೇ ವೀಚಿಯವರು ಕಣವಿಯವರ ಬಾಲ್ಯ ಜೀವನದ ಬಗ್ಗೆ ಶುರು ಮಾಡಿ ಮಾತಿಗೆ ಎಳೆದಿದ್ದರು. ಟೀ ಎಂದರೇನೆ ಕೊಂಚ ಧ್ಯಾನಸ್ಥನಾಗುವ ಕೇಬಿ ಮತ್ತು ನಾನು ಕಣವಿಯವರ ಮಾತಿನತ್ತ ಕಣ್ಣು ತಿರುಗಿಸಿ ಅವರ ಬಾಲ್ಯದ ಬಗ್ಗೆ ಕೇಳಿದೆ.

**ಕಣವಿ :** ನಾನು ಹುಟ್ಟಿದ್ದು ಗದುಗಿನ ಹೊಂಬಳ ಗ್ರಾಮದಲ್ಲಿ, ನಾನು 'ಭಾವಜೀವಿ' ಆಗೋದಕ್ಕೆ ಕಾರಣವಾದ ಪರಿಸರ ಅಲ್ಲಿತ್ತು. ನಮ್ಮ ಹಳ್ಳಿಯ ಕಪಿಲೆ ಬಾವಿಯ ಲಯ, ಬಾವಿಯ ರಾಟೆಯ ಶಬ್ದ, ನವಿಲುಗಳ ಲಾಸ್ಯ ನನ್ನಲ್ಲಿದ್ದ ಕವಿ ಮನಸ್ಸನ್ನು ಎಚ್ಚರಗೊಳಿಸಿದವು. ನಮ್ಮ ಹಳ್ಳಿಯ ಆಚೀಚೆ ಇದ್ದ ಲಂಬಾಣಿ ತಾಂಡದ ಜನಗಳು, ಎಲ್ಲಕ್ಕಿಂತ ಹೆಚ್ಚಾಗಿ ಕಮ್ಮಾರನ ಕುಲುಮೆ, ಕುಂಬಾರನ ತಿಗುರಿ ಈ ಎರಡೂ ಪ್ರಥಮ ಬಾರಿಗೆ ಹಾಗೂ ಇಂದಿಗೂ ನನ್ನ ಮನಸ್ಸಿನಲ್ಲಿ ಉಳಿದು ಬಂದಿವೆ. ನಿಜವಾದ ಸೃಜನಶೀಲತೆಯ ಶಕ್ತಿ ನನಗೆ ಅರಿವಾದದ್ದು ಆಗಲೆ.

**ಕೇಬಿ : ನಿಮ್ಮಲ್ಲಿದ್ದುದನ್ನು ನೀವು ಕಂಡದ್ದರಿಂದ ನಿಮಗೆ ಆಶ್ಚರ್ಯ ಉಂಟಾಯಿತೋ!**

**ಕಣವಿ :** ಇವತ್ತಿಗೂ ಆ ಅಚ್ಚರಿ ನನ್ನನ್ನು ಕಾಡುತ್ತಿದೆ.

**ಕೇಬಿ: ಕೆಲವು ವೃತ್ತಿಗಳು, ಕಲೆಗಳು ಒಬ್ಬರಲ್ಲಿ ಇಲ್ಲದಿದ್ದು ಅದು ಇನ್ನೊಬ್ಬರಲ್ಲಿದ್ದಾಗ ಆಶ್ಚರ್ಯ ಉಂಟು ಮಾಡಬಹುದೇನೊ! ಇದು ನಮ್ಮ Cultureನ ಸೈಕಾಲಜಿ**

ಇರಬಹುದು.

**ವೀಚಿ : ನಿಮ್ಮ ತಂದೆ-ತಾಯಿಗಳ ಪ್ರಭಾವ ನಿಮ್ಮ ಮೇಲೆ ಆಗಿದೆಯೇ?**

ನನ್ನ ತಾಯಿ ಕಷ್ಟ ಸಹಿಷ್ಣು ಜೀವಿ. ಹಾಗೆ ನೋಡಿದರೆ ನನ್ನ ತಂದೆಯ ಪ್ರಭಾವ ಬರಹದ ದೃಷ್ಟಿಯಿಂದ ನನಗೆ ಈಗಲೂ ಇದೆ. ನಮ್ಮ ತಂದೆ ಶಾಲಾ ಮಾಸ್ತರರಾಗಿದ್ದವರು. ಅವರು ನಸುಕಿನಲ್ಲಿ ಎದ್ದು ಕಾವ್ಯಾವಾಚನ ಮಾಡುತ್ತಿದ್ದರು. ಇದರೊಟ್ಟಿಗೆ ನಮ್ಮ ಹಳ್ಳಿಯ ಶಾಲಾ ಮಾಸ್ತರರ ಪ್ರಭಾವವೂ ನನ್ನ ಮೇಲೆ ಆಗಿದೆ. ಶಿರಹಟ್ಟಿಯ ಜಾತ್ರೆ, ಅಲ್ಲಿನ ಹಿಂದೂ-ಮುಸ್ಲಿಂ ಬಾಂಧವ್ಯ ಇವೆಲ್ಲ ನನಗೆ ಇಂದಿಗೂ ಕಾಡುತ್ತಿದೆ. ನಾನು ಶಾಲೆಯಲ್ಲಿ ಜಾಣನಾಗಿದ್ದೆ. ಹೈಸ್ಕೂಲಿನಲ್ಲೇ ನನ್ನ ಮೊದಲ ಬರಹಗಳು ಶುರುವಾದದ್ದು. ನನ್ನ ಮೊದಲ ಕವಿತೆಗಳು ಪ್ರಕಟವಾದದ್ದು ಶಾಲಾ ಹೊತ್ತಿಗೆಯಲ್ಲಿಯೇ. ಈವೊತ್ತು ಆ ನನ್ನ ಬಾಲ್ಯದ ಜಗತ್ತನ್ನು ಕಳೆದು ಕೊಂಡಿದ್ದರ ಬಗ್ಗೆ ಹಳಹಳಿಕೆ ಇದೆ. ನನ್ನ ಎರಡನೆ ಕೃತಿ 'ಭಾವಜೀವಿ' ಒಂದು Semi Autobiographical ಕೃತಿ, ನನ್ನ ಬಾಲ್ಯದ ದಿನಗಳೆಲ್ಲಾ ಇಲ್ಲಿವೆ.

**ಆನಂದಮೂರ್ತಿ: ಸಾರ್, ಕರ್ನಾಟಕದ ಸಾಂಸ್ಕೃತಿಕ ಇತಿಹಾಸದಲ್ಲಿ ಧಾರವಾಡದ ಮಹತ್ತರವಾದ ಪಾತ್ರ ವಹಿಸುತ್ತಾ ಬಂದಿದೆ. ಅಲ್ಲೇ ಇದ್ದ ನಿಮಗೂ ಏನಾದರೂ ನೆರವಾಯಿತೆ?**

ಆಗಲೆ ಧಾರವಾಡದ ಕರ್ನಾಟಕದ ಸಾಂಸ್ಕೃತಿಕ ಕೇಂದ್ರವಾಗಿತ್ತು. ಅಲ್ಲಿನ ಕರ್ನಾಟಕ ವಿದ್ಯಾವರ್ಧಕ ಸಂಘ ಪ್ರಸಿದ್ಧಿಯಾಗಿತ್ತು. ಅವೆಲ್ಲಾ ನನ್ನ ಕಾವ್ಯ ಜೀವನದ ಮೇಲೆ ಪ್ರಭಾವ ಬೀರಿವೆ. ಆಗಿನ ಧಾರವಾಡವೂ ಒಂದು ಹಳ್ಳಿಯಂತೆಯೇ ಇದ್ದುದರಿಂದ ನನಗೆ ಅಪರಿಚಿತ ಎನಿಸಲಿಲ್ಲ. ಆಗ ಧಾರವಾಡದಲ್ಲಿ ಎಷ್ಟು ಜನ ಕವಿಗಳಿದ್ದರು ಎನ್ನುವುದಕ್ಕೆ ಒಂದು ಮಾತು ಚಾಲ್ತಿಯಲ್ಲಿತ್ತು, 'ಧಾರವಾಡದಲ್ಲಿ ಯಾರಾದರೂ ಕಣ್ಮುಚ್ಚಿ ಒಂದು ಕಲ್ಲೆಸೆದರೆ, ಅದು ಯಾವುದಾದರೂ ಒಬ್ಬ ಕವಿಯ ತಲೆಯ ಮೇಲೆಯೇ ಬೀಳುತ್ತದೆ.' ಒಂದು ಮುಖ್ಯ ಸಂಗತಿ ಎಂದರೆ ನಾನು ಒಂದು ಹಂತಕ್ಕೆ ಬರುವವರೆಗೆ ನನಗೆ ಬೇಂದ್ರೆಯವರ ಪರಿಚಯವಾಗಿರಲಿಲ್ಲ. ನನ್ನ 'ಕಾವ್ಯಾಕ್ಷಿ'ಗೆ ಮುನ್ನುಡಿ ಬರೆದ ನಂತರ ೧೯೫೬ರಲ್ಲಿ ಅವರು ಧಾರವಾಡಕ್ಕೆ ಬಂದು ನೆಲೆಸಿದರು. ನನ್ನ 'ದೀಪಧಾರಿ' ಸಂಕಲನ ಅವರಿಗೆ ಅರ್ಪಿಸಿದೆ.

ಜೋಷಿಯವರ ಮನೋಹರ ಗ್ರಂಥಮಾಲೆ ಹೆಸರು ಮಾಡಿದ ಕಾಲ ಅದು. ಆದರೆ ಗ್ರಂಥಮಾಲೆಯವರು ನನ್ನನ್ನು ಎಂದೂ 'ಕಾವ್ಯ' ಕೊಡಿ ಎಂದು ಕೇಳಿದವರಲ್ಲ. ಅವರು ನನ್ನನ್ನು ಕಾದಂಬರಿ ಕೊಡಿ ಅಂತ ಮಾತ್ರ ಕೇಳುತ್ತಿದ್ದರು. ಅದರ ಕಾರಣ

ನನಗೂ ಗೊತ್ತಿಲ್ಲ. ಇಷ್ಟಾದರೂ ಜೋಷಿಯವರ 'ಅಟ್ಟದ' ಚರ್ಚೆಗೆ ನಾವೆಲ್ಲಾ ಹೋಗುತ್ತಿದ್ದೆವು. ಅಡಿಗರ ಪರಿಚಯ ೫೦ರಲ್ಲಾಯಿತು. ನನ್ನ ಮೊದಲ ಸಂಕಲನ ಪ್ರಕಟಿಸಿದವರು ಹಿರೇಮಲ್ಲೂರು ಈಶ್ವರನ್ ಅವರು. 'ಭಾವಜೀವಿ' ಪ್ರಕಟ ಮಾಡಿದವರು ಕಟ್ಟೀಮನಿ ಅವರು. ನಾನು ಸ್ನೇಹಜೀವಿ. ಧಾರವಾಡದಲ್ಲಿಯೂ ಗುಂಪುಗಾರಿಕೆ ಇತ್ತು. ಆದರೆ ನಾನು ಅದಾವುದಕ್ಕೂ ಒಳಗಾಗಲಿಲ್ಲ. ಅಲ್ಲದೆ ನನ್ನ ಸ್ವಭಾವ ಎಂದರೆ ಎಲ್ಲಾ ಕಡೆ ಇರುವ ಒಳ್ಳೆಯದನ್ನು ಸ್ವೀಕರಿಸುವುದಷ್ಟೇ. ಅದು ನನ್ನ ಕಾವ್ಯ ಜೀವನದ ವಿಶಿಷ್ಟತೆ. ನಾನು ಯಾವಾಗಲೂ ಒಳ್ಳೆಯದರ ಪರವಾಗಿರೋನು. ಅಂದರೆ ನನ್ನದು ಮಾಸ್ತಿಯವರ ದೃಷ್ಟಿಕೋನ ಅನಿಸುತ್ತೆ; ಒಳ್ಳೆಯದು ಒಳ್ಳೆಯದಲ್ಲದ್ದು.

**ವೀಚಿ : ಸಹೃದಯ ದೃಷ್ಟಿಯಿಂದ ಬೇಂದ್ರೆ ಅಥವಾ ಬೆಟಗೇರಿ ಕೃಷ್ಣಶರ್ಮರಲ್ಲಿ ಯಾರ ಪ್ರಭಾವ ನಿಮ್ಮ ಮೇಲಿದೆ?**

ನನ್ನ ಮಟ್ಟಿಗೆ ಇಬ್ಬರನ್ನೂ ನಾನು ಮೆಚ್ಚಿಕೊಂಡವನು. ಆದರೂ ಬೇಂದ್ರೆ ಪ್ರಭಾವ ನನ್ನ ಮೇಲೆ ಇದೆ.

**ಆನಂದಮೂರ್ತಿ : ನಿಮ್ಮ ಬರವಣಿಗೆಯ ದೃಷ್ಟಿಯಿಂದ ನಿಮ್ಮ ಮೇಲೆ ಪ್ರಭಾವ ಬೀರಿದ ಕವಿಗಳಾರು?**

ಮೊದಲಿಗೆ ಬೇಂದ್ರೆಯವರ ಕಾವ್ಯದ ಪ್ರಭಾವ ಆಯಿತು. ಹಾಗೆಯೇ ಅದರಿಂದ ಬಿಡಿಸಿಕೊಂಡು ಪಾರಾಗಿದ್ದೇನೆ ಅನಿಸಿದೆ. ಮದುರಚೆನ್ನರ ಅನುಭಾವ, ಕುವೆಂಪು ನಿಸರ್ಗಪ್ರೇಮ (ಅವರ ರೀತಿಯಲ್ಲಿ) ನನ್ನ ಮೇಲೆ ಪ್ರಧಾನವಾಗಿ ಪ್ರಭಾವ ಬೀರಿವೆ. ಬೇಂದ್ರೆಗೆ ಸರಿಸಮನಾಗಿ ಕಾವ್ಯ ರಚಿಸಿದವರು ಮಧುರಚೆನ್ನರೆ. ನನ್ನ 'ಭಾವಜೀವಿ'ಯನ್ನು ಮಧುರಚೆನ್ನರಿಗೆ ಅರ್ಪಿಸಿದ್ದೇನೆ.

**ವೀಚಿ : ಅಡಿಗ, ಬೇಂದ್ರೆಯವರಲ್ಲಿದ್ದ ಹಾಗೆ ಸಂಘರ್ಷದ ಧ್ವನಿ ನಿಮ್ಮಲ್ಲಿ ಬಂದರೂ ಅದು ಎಲ್ಲೊ ತೇಲಿಹೋದ ಹಾಗೆ ಅನಿಸುತ್ತೆ!**

ಇರಬಹುದು, ಅದು ನನ್ನ ಕಾವ್ಯಜೀವನದ ವಿಷಿಷ್ಟತೆ. ನವೋದಯದ ಭಾವಗೀತಾತ್ಮಕತೆಯನ್ನೂ ನಾನು ಇನ್ನೂ ಉಳಿಸಿಕೊಂಡಿದ್ದೇನೆ. ಬಹುಶಃ ಉತ್ತಮವಾದ ಕವಿತೆ ಭಾವಗೀತಾತ್ಮಕತೆಯನ್ನು ಉಳಿಸಿಕೊಳ್ಳುತ್ತದೆ.

**ಆನಂದಮೂರ್ತಿ : ಈಗ ಬರಿತಿರೋ ನಮ್ಮ ಕವಿಗಳ ಬಗ್ಗೆ....**

ವೆಂಕಟೇಶಮೂರ್ತಿ, ಲಕ್ಷ್ಮಣರಾವ್, ಶಿವಪ್ರಕಾಶ್ ಚೆನ್ನಾಗಿ ಬರೆಯುತ್ತಿದ್ದಾರೆ.

ಸಿದ್ಧಲಿಂಗಯ್ಯ ತಮ್ಮ ಕಾವ್ಯದ ಜಾಡನ್ನು ಬದಲಿಸಿಕೊಂಡಿದ್ದಾರೆ. ಇದೆಲ್ಲಾ ನೋಡಿದರೆ ಇವರಿಗೆಲ್ಲಾ ಒಂದು ಕೇಂದ್ರದೊಂದಿಗೆ ಬೆಸೆದುಕೊಳ್ಳುವ ಹಂಬಲ ಬೆಳೆಯಬೇಕೆಂದು ಅನ್ನಿಸುತ್ತೆ!

ಇಷ್ಟು ಹೇಳಿದ ಕಣವಿಯವರು 'ಇವರುಗಳ ಬಗ್ಗೆ ನಿಮಗೆ ಏನನ್ನಿಸುತ್ತದೆ?' ಎಂದು ನಮಗೆ ಮರು ಪ್ರಶ್ನೆ ಎಸೆದರು. ಟೀ ಕುಡಿದು ಎತ್ತೆತ್ತಲೊ ಕುಳಿತಿದ್ದರೂ ಚರ್ಚೆಯಲ್ಲಿ ಪಾಲ್ಗೊಳ್ಳುತ್ತಿದ್ದ ಕೇಬಿ ಸಿದ್ಧಯ್ಯನು ರೆಡಿಯಾಗಿ ಕುಳಿತ.

**ಆನಂದಮೂರ್ತಿ : ಲಕ್ಷ್ಮಣರಾವ್, ಎಚ್.ಎಸ್. ವೆಂಕಟೇಶಮೂರ್ತಿಯವರೇನೋ ಒಳ್ಳೇ ಪದ್ಯಾ ಬರೀತಿದ್ದಾರೆ, ಆದರೆ ಅವರ ಕವಿತೆಗಳು ಅಷ್ಟು ಸೀರಿಯಸ್ಸಾಗಿರೋದಿಲ್ಲ. ವೆಂಕಟೇಶಮೂರ್ತಿಯವರು ಮಹತ್ವಾಕಾಂಕ್ಷೆಯ ಕಡೆ ಹೋಗುವ ಪ್ರಯತ್ನಶೀಲ ಕವಿಯೇನೋ ಹೌದು. ಹಿಂದಿನ ಕನ್ನಡ ಕಾವ್ಯದ ರೂಪಗಳನ್ನು ಪುನರಾವರ್ತಿಸುತ್ತಿರುವ ವೆಂಕಟೇಶಮೂರ್ತಿಯವರ ಕವಿತೆಗಳು ಆ ಮೂಲಕ ಹೊಸದಾಗಿ ಏನು 'ಕಾಣಿಸಿವೆ'** ಎಂಬ ಪ್ರಶ್ನೆ ಇಲ್ಲಿಂದಲೇ ಏಳುತ್ತದೆ.

**ವೀಚಿ :** ವೆಂಕಟೇಶಮೂರ್ತಿಯವರ ಕವಿತೆಯ ಸಾಧನಗಳು ಅವರ ಚಿಕ್ಕ ಚಿಕ್ಕ ಪದ್ಯಗಳ ಮೂಲಕ ವ್ಯಕ್ತವಾಗಿವೆ. ಇದರಲ್ಲಿ ಅವರ ಬೆಳವಣಿಗೆ ಇದೆ. ಆದರೆ ಲಕ್ಷ್ಮಣರಾವ್ ಕಾವ್ಯವನ್ನು ಗಂಭೀರವಾಗಿ ತಗೊಂಡಿಲ್ಲ ಅನ್ನಿಸುತ್ತೆ. ಅವರ ಕವಿತೆಗಳು ನಮ್ಮನ್ನು 'ನಿಲೆಹಾಕಿ' ಕೆಣಕೋದಿಲ್ಲ.

**ಕಣವಿ :** ವೆಂಕಟೇಶಮೂರ್ತಿಯವರ ಕಥನ ಕವನಗಳು ನಿಜಕ್ಕೂ ಒಳ್ಳೆಯ ಪ್ರಯೋಗಗಳೇ, ಅವರ ಕಾವ್ಯದ ಸಾಧನೆಗಳು ನಿಜವಾಗಿಯೂ ಅಲ್ಲಿವೆ.

**ಕೇಬಿ :** ಲಕ್ಷ್ಮಣರಾವ್ ಮತ್ತು ವೆಂಕಟೇಶಮೂರ್ತಿಯವರ ಕವಿತೆಗಳ Value ಬದಲಾಗದೆ ಬರಿ Craftmanship ಮಾತ್ರ ಬದಲಾಗಿದೆ ಎನ್ನಬಹುದು. ಆದ್ದರಿಂದ ಇವರ ಕಾವ್ಯದಲ್ಲಿ ಗಂಭೀರವಾದದ್ದು ಇರಲು ಸಾಧ್ಯವೇ ಇಲ್ಲವೇನೋ. ಇವರ ಕವಿತೆಗಳು Renaissanceನೊಂದಿಗೆ ಕೊಂಡಿ ಹಾಕಿಕೊಂಡಿಲ್ಲ. ಕೇವಲ Revival ಆಗಿ ಉಳಕೊಂಡಿದೆ. ಆದ್ದರಿಂದ ಇವು ಹಿಂದೂ ಯಥಾಸ್ಥಿತಿವಾದದ ಸಾಹಿತ್ಯ ರೂಪಗಳಷ್ಟೆ.

ಇದೇ ಚರ್ಚೆಗೆ ವೀಚಿಯವರು ರಾಮಾನುಜನ್, ಕಂಬಾರರ ಕವಿತೆಗಳನ್ನು ಎಳೆದು ಚರ್ಚಿಸುತ್ತಾ, "ರಾಮಾನುಜನ್ ಅವರ ಕಾವ್ಯ ನಮ್ಮ ಸಂಸ್ಕೃತಿಯ ಮಹತ್ವದ ಯಾವ ಅಂಗವಾಗಿಯೂ ನಿಲ್ಲದೆ ಲಘುವಾಗಿ ವ್ಯವಹರಿಸುವುದರಿಂದ ಅದು ಶ್ರೇಷ್ಠವಾದ

ಕಾವ್ಯವೇನೂ ಅಲ್ಲ. ಎಷ್ಟೋ ಸಾರಿ ಕಾವ್ಯವೆಂದು ಒಪ್ಪಲಾಗುವುದಿಲ್ಲ" ಎಂದು ಸೂಕ್ಷ್ಮವಾಗಿ ಬಿಡಿಸುತ್ತಿರುವಾಗ್ಗೆ ಕಣವಿಯವರೇ ಆ ಚರ್ಚೆಗೆ ತೆರೆ ಎಳೆದು ಕವಿಯತ್ರಿಯವರ ಬಗ್ಗೆ ಪ್ರಸ್ತಾಪಿಸುತ್ತಾ;

ಕಣವಿ : ಶಶಿಕಲಾ ವಸ್ತ್ರದ, ಪ್ರತಿಭಾ, ಸವಿತಾ ನಾಗಭೂಷಣ್ ಇನ್ನೂ ಅನೇಕರು ಚೆನ್ನಾಗಿಯೇ ಬರೆಯುತ್ತಿದ್ದಾರೆ. ಈ ಕಾಲ ನಿಜವಾಗಿಯೂ ವಚನಕಾರರ ಕಾಲದಂತೆಯೇ ಇದೆ. ಏಕೆಂದರೆ ಇಷ್ಟೊಂದು ಜನ ಬರೆಯುತ್ತಿದ್ದಾರಲ್ಲ ಇದು ನಿಜವಾಗಿಯೂ ಸಂತೋಷ.

**ವೀಚಿ : ಈ ಮಟ್ಟಿಗೂ ನಮಗೂ ಸಂತೋಷವೆ. ಆದರೆ ಒಂದು ಪ್ರಧಾನ ಕೊರತೆ ಇವರಲ್ಲಿದೆ ಎನಿಸುತ್ತೆ. ಇವರುಗಳ ಕಾವ್ಯಕ್ಕೆ ಅನುಭವದ ವೈವಿಧ್ಯ ಇಲ್ಲ ಮತ್ತು ಭಾಷೆಯ ಸೂಕ್ಷ್ಮತೆ ಕಡಿಮೆ.**

**ಕೇಬಿ : ಸಾರ್ ದಲಿತರು ಇದ್ದಾರೆ ಅನ್ನೊ ನಂಬಿಕೆ ಇಟ್ಕೊಂಡೆ ದಲಿತ ಸಾಹಿತ್ಯವನ್ನು ನೋಡಬೇಕಾಗುತ್ತಲ್ಲ! ಇದನ್ನ Overcome ಮಾಡೋದು ಹೇಗೆ? ಈ ವರ್ಗೀಕರಣ ಅಗತ್ಯವೆ?**

ಕಣವಿ : ಚಾರಿತ್ರಿಕವಾಗಿ ಈ ವರ್ಗೀಕರಣ ಅಗತ್ಯ.

ಇದೇ ಮಾತು ಮುಂದುವರೆಯುತ್ತಿದ್ದ ಹಾಗೆ ಎರಡನೆ ಸುತ್ತಿನ ಟೀಯನ್ನು ಮುಗಿಸಿ, ನಮ್ಮ ಸಂದರ್ಶನದ ಕೊನೆಯ ಅಂಚಿಗೆ ತಲುಪಲು ನಾವೇ ದಾರಿಮಾಡಿ ಕೊಂಡು ಮಾತು ಕೂಡಿಸುತ್ತಿದ್ದೆವು, ಕಣವಿಯವರಾದರೋ ಇನ್ನೂ ಉತ್ಸಾಹದಿಂದಲೇ ದೇವನೂರ ಮಹಾದೇವ, ಕುಂವೀರಯವರನ್ನು ಕುರಿತು ಹೇಳುತ್ತಿದ್ದರು;

ಕುಂವೀ, ಮಹಾದೇವ ನಿಜವಾಗಿಯೂ ದಲಿತ ಸಾಹಿತ್ಯವನ್ನು ಬೆಳೆಸುತ್ತಿರುವವರು. ಇವರು ಎಲ್ಲಾ ವಿಧದಲ್ಲೂ ದಲಿತ ಜನಾಂಗದ ಹತ್ತಿರ ಹೋಗಿ, ಅವರದೇ ಭಾಷೆಯಲ್ಲಿ ಬರೆಯುತ್ತಿದ್ದಾರೆ. ನನಗಂತೂ ಇದೇ ಹೆಚ್ಚು ಇಷ್ಟ.

**ಆನಂದಮೂರ್ತಿ : ಹಾಗೇನೆ ಕಾಳೇಗೌಡ ನಾಗವಾರ, ಬೆಸಗರಹಳ್ಳಿ ರಾಮಣ್ಣ ಕೂಡ ಜವಾಬ್ದಾರಿಯಿಂದ ಬರೀತಿದಾರೆ. ಚಾರಿತ್ರಿಕವಾಗಿ ಇವರು ಗಮನಿಸಬೇಕಾದ ಬರಹಗಾರರು.**

ಕಣವಿ : ನಿಜ, ನಾಗವಾರ, ರಾಮಣ್ಣ ಅವರು, ಅವರ ಜನಾಂಗಕ್ಕೆ ಹತ್ತಿರವಾಗಿ ಬರೆಯುತ್ತಿದ್ದಾರೆ. ಆದರೆ ಇವರ ಭಾಷೆ ಸ್ವಲ್ಪ ಸಂಸ್ಕರಣವಾಗಿದೆಯೋ ಎನಿಸುತ್ತದೆ. ಆದರೂ ಕಾಳೇಗೌಡರು ಒಳ್ಳೆ ಕಥೆಗಳನ್ನೇ ಬರೆದಿದ್ದಾರೆ.

**ಆನಂದಮೂರ್ತಿ : ಸಾರ್, ತುಮಕೂರು ಏನನಿಸುತ್ತದೆ?**

**ಕಣವಿ :** ಊರು ಬಹಳ ಚೆನ್ನಾಗಿದೆ. ಹಿಂದಿನ ನೀಲಿ ಬೆಟ್ಟಗಳ ಸಾಲು ಕೈಬೀಸಿ ಕರೆಯುತ್ತಿವೆ. ನಿಮ್ಮೊಂದಿಗೆ ಮಾತನಾಡಿದ್ದರಿಂದ ಇಲ್ಲಿದ್ದ ಕೊರತೆಯೂ ಕೂಡ ಹೋಯಿತು. ಚಿಕ್ಕವೀರಯ್ಯನವರು ರೈತರಾಗಿಯೇ ಕಾವ್ಯದ ಬಗ್ಗೆ ಅವರಿಗಿರುವ ಓದು, ತಿಳುವಳಿಕೆ ನಿಜವಾಗಿಯೂ ದೊಡ್ಡದು. ಆದ್ದರಿಂದ ಅವರು ನಿಜವಾಗಿಯೂ ದೊಡ್ಡ ವೀರಯ್ಯನವರೇ.

ಕೊನೆಯದಾಗಿ ಕೇಬಿ **'ಹೊಸ ಬರಹಗಾರರಿಗೆ ಏನು ಹೇಳ್ತೀರಿ'!** ಎಂದು ಸಾಂಪ್ರದಾಯಿಕ ಪ್ರಶ್ನೆ ಎಸೆದ.

**ಕಣವಿ :** (ನಗುತ್ತಾ) ನಾನೇನೂ ಜಗದ್ಗುರು ಅಲ್ಲ ನೋಡ್ರಿ ಸಂದೇಶಕೊಡಲಿಕ್ಕೆ. ಆದರೂ ನಿಮ್ಮ ಅನುಭವವನ್ನೇ ಬರೆಯಿರಿ ಅಂತ ಮಾತ್ರ ಹೇಳಬಹುದು. ಒಂದು ವ್ಯತ್ಯಾಸ ಎಂದರೆ ನಮಗಿಂತ ಈಗಿನವರಿಗೆ ಹೆಚ್ಚು Social Awarenceಇದೆ. ಇದು ಒಳ್ಳೆಯದು. ಈಗ ಬರೆಯೋರಿಗೆ ಆಂತರಿಕ ಒತ್ತಡ ಬೇಕು, ಇಲ್ಲವಾದರೆ ಅನುಕರಣೆಯೂ ಶುರುವಾಗಬಹುದು, ಅದರ ಬಗ್ಗೆಯೂ ಎಚ್ಚರ ವಹಿಸೋದು ಒಳ್ಳೆಯದು.

**ಪ್ರಶ್ನೆ:**

**ನವೋದಯ ಹಾಗೂ ನವ್ಯ ಕಾವ್ಯ ಮಾರ್ಗಗಳ ನಡುವೆ ಸೇತು ಬಂಧವಾಗಿರುವ ನಿಮ್ಮ ಕವಿತೆಗಳು ಈಗಿನ ಬಂಡಾಯ ಕಾವ್ಯದೊಡನೆ ಯಾವ ಬಗೆಯಲ್ಲಿ ಸಂಬಂಧವನ್ನು ಬೆಳೆಸಿಕೊಂಡಿವೆ?**

**ಕಣವಿ :** ನನ್ನ ಕಾವ್ಯ ನವೋದಯ ಹಾಗೂ ನವ್ಯ ಕಾವ್ಯ ಮಾರ್ಗಗಳ ಸೇತುಬಂಧ ಎಂದಿರಿ. ಅಷ್ಟೇ ಅಲ್ಲ ಎರಡೂ ಮಾರ್ಗಗಳ ಸತ್ವವನ್ನು ಬೆಸೆದು ರೂಪಗೊಂಡಿದ್ದು. ಸಾಮಾಜಿಕ ಕಳಕಳಿಯ ಮೂಲಕ ನನ್ನ ಕವಿತೆ ಬಂಡಾಯ ಕಾವ್ಯದೊಡನೆ ಕೆಲಮಟ್ಟಿಗೆ ಸಂಬಂಧ ಪಡೆದುಕೊಂಡಿದೆ. ಜೀವನದ ಎಲ್ಲಾ ಮೂಲಗಳಿಂದ ಬಂದ ಕಾವ್ಯದಲ್ಲಿ ನಾನು ಆಸ್ಥೆಯುಳ್ಳವನಾದ್ದರಿಂದ ಬಂಡಾಯ ಕಾವ್ಯವನ್ನೂ ನಾನು ಸಹಾನುಭೂತಿಯಿಂದಲೇ ಕಂಡಿದ್ದೇನೆ. ಶೋಷಣೆ, ಅನ್ಯಾಯ, ಅಸಮತೆ, ಸಾಮಾಜಿಕ ವಿಷಮತೆಗಳ ವಿರುದ್ಧ ಪ್ರತಿಭಟನೆಯ ಅಂಶಗಳು ವಚನಕಾರರಲ್ಲಿ ಸರ್ವಜ್ಞರಲ್ಲಿ ಸಾಕಷ್ಟಿರುವುದರಿಂದ ಇಂದಿನ ಬಂಡಾಯ ಕಾವ್ಯ ಪರಂಪರೆಗೆ ಹೊರತಾಗಿದೆ ಎಂದು ನನಗನಿಸುವುದಿಲ್ಲ.

**ಪ್ರಶ್ನೆ : ಬಂಡಾಯ ಚಳುವಳಿಯಿಂದ ನಿಮ್ಮ ಜೀವನ ದೃಷ್ಟಿ, ಕಾವ್ಯ ದೃಷ್ಟಿಯ ಮೇಲೆ ಯಾವ ರೀತಿ ಪರಿಣಾಮ ಉಂಟಾಗಿದೆ?**

ಕಣವಿ : ಬಂಡಾಯ ಚಳುವಳಿಯ ಪೂರ್ವದಲ್ಲಿಯೂ ನನ್ನ ಸಾಮಾಜಿಕ ಪ್ರಜ್ಞೆ ವಿಡಂಬನೆಯ ಮೂಲಕ ಅಭಿವ್ಯಕ್ತಗೊಂಡಿರುವುದನ್ನು ನನ್ನ ಕವಿತೆಗಳಲ್ಲಿ ಕಾಣಬಹುದು. ಕೆಳವರ್ಗದ ಜನರಲ್ಲಿ ಜಾಗೃತಿಯನ್ನುಂಟು ಮಾಡಿ, ಅನ್ಯಾಯ, ಶೋಷಣೆಗಳನ್ನು ಪ್ರತಿಭಟಿಸುವ ಧೈರ್ಯವನ್ನು ಆ ಜನಾಂಗಕ್ಕೆ ತಂದುಕೊಟ್ಟುದಲ್ಲದೆ ಅವರ ಬದುಕಿನ ನೋವು ಸಂಕಷ್ಟಗಳನ್ನು ಉಳಿದವರೂ ಅರಿಯುವಂತೆ ಮಾಡಿರುವುದು ಬಂಡಾಯ ಚಳುವಳಿಯ ಒಂದು ಪ್ರಧಾನ ಅಂಶವಾಗಿರುವುದರಿಂದ ಈ ಚಳುವಳಿಯ ಪರಿಣಾಮ ನನ್ನ ದೃಷ್ಟಿಯಲ್ಲಿ ಸ್ವಾಗತಾರ್ಹ.

**ಪ್ರಶ್ನೆ: ಸಂಘರ್ಷಗಳು, ತಳಮಳಗಳು ಇಲ್ಲದ, ಅಂದರೆ ಬೇಂದ್ರೆ ಕಂಡ 'ಕಂಗೆಡಿಸುವ ಕೆಂಪು ಹಿಂದೆ, ಕಂಗೊಳಿಸುವ ಮಂಜು ಮುಂದೆ' ಈ ಸ್ಥಿತಿಯ ಅರಿವು ನಿಮ್ಮ ಕಾವ್ಯದಲ್ಲಿ ಇಲ್ಲವೆಂಬುದು ನಮ್ಮ ತಿಳುವಳಿಕೆ, ನಿಮ್ಮ ಪ್ರತಿಕ್ರಿಯೆ ಏನು?**

ಕಣವಿ : ನಿಮ್ಮ ತಿಳುವಳಿಕೆ ತಪ್ಪು. ನನ್ನ ಕಾವ್ಯವನ್ನು ಅಭ್ಯಾಸ ಮಾಡಿದವರಿಗೆ ಜೀವನೋತ್ಸಾಹದಂತೆಯೇ ತಳಮಳಗಳನ್ನೂ, ವಿಷಾದಗಳನ್ನೂ ಅಲ್ಲಲ್ಲಿ ಕಾಣಬಹುದು. ಉದಾಹರಣೆಗೆ : 'ಜಗದ ತುಂಬಿದ ಬೆಳಕು ನಮಗೇಕೋ ಸಾಲದಿದೆ| ಎನಿತು ಮಾನವನೆದೆಯ ಆಳ, ಆಗಲ| ಬಂದಷ್ಟು ಇಂಗುತಿದೆ ಮತ್ತೆ ಬರಿದಾಗುತಿದೆ| ಎಷ್ಟು ಸೆಲೆಯೊಡೆದರೂ ವಿಫಲ ವಿಫಲ' (ಚಿರಂತನದಾಹ) ಇಂಥ ಸಂದರ್ಭಗಳು ಇಲ್ಲದಿಲ್ಲ.

**ಪ್ರಶ್ನೆ : ಕನ್ನಡ ಕಾವ್ಯ ವಿಮರ್ಶೆಗೆ ಪಾಶ್ಚಾತ್ಯ ಮಾನದಂಡದ ಅಗತ್ಯವಿದೆಯೆ?**

ಕಣವಿ : ಹೊಸಗನ್ನಡ ಕಾವ್ಯದ ಮೇಲೆ ಇಂಗ್ಲೀಷ್ ಕಾವ್ಯದ ಪ್ರಭಾವ ದಟ್ಟವಾಗಿದೆ. ಹಲವಾರು ಕಾವ್ಯ ರೂಪಗಳನ್ನು ಅಲ್ಲಿಂದ ಪಡೆದಿದ್ದೇವೆ. ಈ ಸಂಬಂಧದಲ್ಲಿ ಕನ್ನಡ ಕಾವ್ಯ ವಿಮರ್ಶೆಗೆ ಪಾಶ್ಚಾತ್ಯ ವಿಮರ್ಶೆಯ ಮಾನದಂಡ ಕೆಲಮಟ್ಟಿಗೆ ಬೇಕಾಗಬಹುದು. ಜೊತೆಗೆ ಕನ್ನಡ ಕಾವ್ಯ ಪರಂಪರೆಯ ಪ್ರಜ್ಞೆ ಹಾಗೂ ಭಾರತೀಯ ಕಾವ್ಯಮಿಮಾಂಸೆಯ ಪರಿಜ್ಞಾನವೂ ಅತ್ಯಗತ್ಯ.

**ಪ್ರಶ್ನೆ : ಬೇಂದ್ರೆ-ಅಡಿಗರ ಕಾವ್ಯದ ಜೊತೆಗೆ ನಿಮ್ಮ ಕಾವ್ಯವನ್ನು ಕಾವ್ಯದ ವಸ್ತು ಮತ್ತು ರಚನೆಯ ದೃಷ್ಟಿಯಿಂದ ನೋಡಿದಾಗ ಏನನ್ನಿಸುತ್ತದೆ ತಿಳಿಸುವಿರಾ?**

ಕಣವಿ : ವಸ್ತುವೈವಿಧ್ಯ ಹಾಗೂ ರಚನಾ ಸ್ವಾತಂತ್ರ್ಯದಲ್ಲಿ ಬೇಂದ್ರೆ ನಿಸ್ಸೀಮರು,

ಹಾಗೆ ಛಂದೋವೈವಿಧ್ಯದಲ್ಲಿ ಕೂಡ. ಅಡಿಗರ ಕಾವ್ಯ ವಸ್ತುವಿನಲ್ಲಿ ವೈವಿಧ್ಯ ಕಡಿಮೆ. ಆದರೆ ರಚನೆ ಹೆಚ್ಚು ಕಲಾತ್ಮಕ. 'ಕಾವ್ಯ ಶಿಲ್ಪ' ಅದರ ವಿಶೇಷ ಕೊಡುಗೆ. ಇವರಿಬ್ಬರ ಕಾವ್ಯದ ಜೊತೆಗೆ ನನ್ನ ಕಾವ್ಯವನ್ನು ನಾನೇ ಹೇಗೆ ಹೋಲಿಸಿ ನೋಡುವುದು? ಅದು ಬೇರೆಯವರ ಕೆಲಸ.

**ಪ್ರಶ್ನೆ : ಕಾವ್ಯ ರಚನೆಗೆ ನಿಮ್ಮನ್ನು ತೊಡಗಿಸಿದ ಅಂಶಗಳಾವುವು?**

**ಕಣವಿ :** ನಮ್ಮ ಭಾವನೆಗಳನ್ನು ಕವಿತೆಯ ರೂಪದಲ್ಲಿ ಕಟ್ಟುವುದರಿಂದ ಒದಗುವ ಸಂತೋಷವೇ ಮೂಲತಃ ನಮ್ಮನ್ನು ಕಾವ್ಯ ರಚನೆಗೆ ತೊಡಗಿಸುವುದು ಅಲ್ಲವೇ! ನಿಸರ್ಗೋಪಾಸನೆಯಿಂದ ಮನುಷ್ಯ ಪಡೆಯುವ ಚೈತನ್ಯ, ಅಚ್ಚರಿ, ಸಮಾಜದ ಏರುಪೇರುಗಳು, ಬಾಳುವೆಯ ಆಳದಲ್ಲಿರುವ ರಸವಂತಿಕೆ, ಪ್ರೀತಿ ಅಂತಃಕರಣಗಳಿಂದ ಮನುಷ್ಯ ಸಂಬಂಧಗಳಿಗೆ ಒದಗುವ ಸಾರ್ಥಕ್ಯ ಭಾವ, ನಮಗೆ ಅರಿವಿಲ್ಲದೆಯೇ ಬಾಳನ್ನು ಬೆಳಗಿಸುವ ಲೋಕೋತ್ತರ ಕರುಣೆ, ನಾಡು ನುಡಿಯ ಅಭಿಮಾನ ಇವೇ ಮೊದಲಾದವು ನನ್ನ ಕಾವ್ಯದ ಮೂಲ ಪ್ರೇರಣೆಗಳು.

**ಪ್ರಶ್ನೆ : ನಿನ್ನೆ ನಿಮ್ಮ ಭಾಷಣದಲ್ಲಿ ಹೇಳಿದಂತೆ, ಒಬ್ಬ ಕವಿ ಎಷ್ಟು ಕಾವ್ಯ, ಸಾಹಿತ್ಯ ರಚನೆ ಮಾಡಿದ್ದರೂ, ಅದರಲ್ಲಿ ಯಾವುದೋ ೮-೧೦ ಕವಿತೆಗಳು ಮಾತ್ರ ಶ್ರೇಷ್ಠವಾಗಿರಬಹುದು ಎಂದು ನೀವು ಹೇಳಿದ್ದರ ಅರ್ಥವನ್ನು ವಿವರಿಸುವಿರಾ.**

**ಕಣವಿ :** ಕವಿ ತನ್ನ ಹೃದಯದ ಭಾರವನ್ನು, ಅಥವಾ ಮನಸ್ಸಿನ ಒತ್ತಡಗಳನ್ನು ಕವಿತೆಯ ರೂಪದಲ್ಲಿ ಇಳಿಸುವಾಗ ಯಾವದೋ ಒಂದು ಸನ್ನಿವೇಶ, ಭಾವನೆ ವಿಚಾರ ನಿಮಿತ್ತವಾಗಿರುತ್ತದೆ. ಅದಕ್ಕೆ ಸಂಬಂಧಪಟ್ಟ ಅನುಭವ ಹಾಗೂ ಚಿಂತನೆ ಅದಕ್ಕೆ ಹಿನ್ನೆಲೆಯಾಗಿರುತ್ತದೆ. ಈ ಸಮಾಜದ ಸ್ಫೂರ್ತಿಯ ಆವರಣದಲ್ಲಿ ಕಾವ್ಯ ರಚನೆ ಕೈಗೂಡಿದಾಗ ಒಂದು ತೃಪ್ತಿ ಉಂಟಾಗುತ್ತದೆ ಎನ್ನೋಣ. ಅದನ್ನು ಪರಿಭಾವಿಸಿದಾಗ ತಾನು ಹೇಳಬೇಕಾದುದನ್ನೆಲ್ಲಾ ಹೇಳಿಲ್ಲಾ, ಅಥವಾ ಹೇಳಬೇಕಾದ ರೀತಿಯಲ್ಲಿ ಹೇಳಿಲ್ಲ ಎಂದು ಎಷ್ಟೋ ಸಲ ಅನ್ನಿಸುತ್ತದೆ, ಈ ಕೊರತೆ, ಅತೃಪ್ತಿ ಕವಿಯ ಒಳಗೆ ಉಳಿದುಕೊಂಡು ಇನ್ನೊಂದು ಕವಿತೆ ಬರೆಯುವಾಗ ಅದನ್ನು ತುಂಬಿಕೊಳ್ಳುತ್ತದೆ. ಹೀಗೆ ಎಷ್ಟೇ ಪ್ರಯತ್ನ ಪಟ್ಟರೂ ಒಂದೇ ಕವಿತೆಯಲ್ಲಿ ತನ್ನನ್ನು ಇಡಿಯಾಗಿ ಅಭಿವ್ಯಕ್ತಿಸಿಕೊಳ್ಳುವುದು ಸಾಧ್ಯವಾಗದೆ ಹೋಗುತ್ತದೆ. ಅನುಭವದಿಂದ ಪ್ರಯೋಗಕ್ಕೆ ಅಲ್ಲಿಂದ ಮತ್ತೆ ಹೊಸ ಅನುಭವಕ್ಕೆ ಅವನ ಕಲಾಯಾತ್ರೆ ನಡೆದೇ ಇರುತ್ತದೆ. ಈ ಅರ್ಥದಲ್ಲಿ ನಾನು ಈ ಮಾತನ್ನು ಹೇಳಿದ್ದು.

**ಪ್ರಶ್ನೆ : ಸಾಹಿತ್ಯ ಜನಕ್ಕೆ ತಲುಪಬೇಕೆಂಬ ಆಶಯದಿಂದ ಸೃಷ್ಟಿಸುವ ಸಾಹಿತಿಯ ಎದುರಿಗೆ ನಿಲ್ಲುವ ಸವಾಲುಗಳಾವುವು?**

**ಕಣವಿ :** ಅನುಭವ ತೆಳುವಾಗದಂತೆ, ಅಭಿವ್ಯಕ್ತಿ ಸಡಿಲವಾಗದಂತೆ ನೋಡಿಕೊಳ್ಳಬೇಕಾಗುತ್ತದೆ. ಜನಕ್ಕೆ ಹಿಡಿಸುವಂತೆ, ಅವರ ಮನಸ್ಸನ್ನು ಆಕರ್ಷಿಸುವಂತೆ ಹೊಸ ತಂತ್ರವನ್ನು ರೂಪಿಸಿಕೊಳ್ಳಬೇಕಾಗುತ್ತದೆ.

**ಪ್ರಶ್ನೆ : ಕಾವ್ಯದಲ್ಲಿ ಜನಪರ, ಜನವಿರೋಧಿ ಕಾವ್ಯ ಎಂಬುದುಂಟೆ? ಈ ಹಿನ್ನೆಲೆಯಲ್ಲಿ ನಿಮ್ಮ ಕಾವ್ಯದ ಗುರಿ ಏನು?**

**ಕಣವಿ :** ತನಗೂ ತನ್ನ ಸುತ್ತಮುತ್ತಿನ ಜಗತ್ತಿಗೂ ಭಾವನಾತ್ಮಕ ಸಂಬಂಧ ಇಟ್ಟುಕೊಂಡಿರುವ ಕವಿಯ ಮಾತು ವಿಚಾರ ಅವನಲ್ಲಾಗಿರುವಂತೆಯೇ ಜನತೆಗೂ ಸೇರಿದವುಗಳಾಗಿರುತ್ತವೆ. ಅಭಿವ್ಯಕ್ತಿಯಲ್ಲಿಯೂ ಅವರ ಭಾಷೆಯನ್ನೇ ತನ್ನ ರೀತಿಯಲ್ಲಿ ಬಳಸಿಕೊಂಡಿರುತ್ತಾನೆ. ಅವರ ನೋವು-ನಲಿವು ಆಶೋತ್ತರಗಳಿಗೆ ಅಲ್ಲಿ ಪ್ರತಿಸ್ಪಂದನವಿರುತ್ತದೆ. ಹೀಗಿರುವಾಗ ಕಾವ್ಯವನ್ನು 'ಜನಪರ', 'ಜನವಿರೋಧಿ' ಎಂದು ಹೇಗೆ ವಿಂಗಡಿಸುತ್ತಾರೋ ನನಗೆ ತಿಳಿಯದು. ಕಾವ್ಯ ಯಾವುದೇ ರಾಜಕೀಯ ಪಕ್ಷದ ಪ್ರಣಾಳಿಕೆಯಲ್ಲ. ನಮ್ಮಲ್ಲಿ ಜನಸಾಮಾನ್ಯರಕವಿ, ಪಂಡಿತಕವಿ ಎಂಬ ಭೇದವಿತ್ತೇ ಹೊರತು ಪರ, ವಿರೋಧ ಎಂಬ ಮಾತಿಲ್ಲ. 'ಜನವಿರೋಧಿ ಕಾವ್ಯ' ಎಂಬುದನ್ನು ನಾನು ಕಲ್ಪಿಸುವುದೂ ಕೂಡ ಸಾಧ್ಯವಿಲ್ಲ ಎನಿಸುತ್ತದೆ.

ನನ್ನ ಕಾವ್ಯದ ಗುರಿ ಏನೇ ಇದ್ದರೂ ಓದುಗರನ್ನು, ಸಹೃದಯರನ್ನು, ಜನ ಸಾಮಾನ್ಯರನ್ನು ಅದು ಗೌರವದಿಂದ ಕಾಣುತ್ತದೆಂದು ಮಾತ್ರ ಹೇಳಬಲ್ಲೆ.

**ಶೂದ್ರ, ಜುಲೈ ಆಗಸ್ಟ್ ೧೯೮೮.**

*

# 'ಚೆಂಬೆಳಕಿ'ನ ಅಂಗಳದಲ್ಲಿ

● ಸಿದ್ಧರಾಜ ಪೂಜಾರಿ

ಕವಿ ಶ್ರೀ ಚೆನ್ನವೀರ ಕಣವಿಯವರ ಮನೆ 'ಚೆಂಬೆಳಕು' ಸಮೀಪಿಸಿದಾಗ ವೈಶಾಖದ ಸಂಜೆಯ ಹೊಂಬೆಳಕು, ಬಿಸಿಲಿನ ಪ್ರಖರತೆಯ ಮಧ್ಯದಲ್ಲೂ ಸಂಜೆ, ಉದಾಸವಾಗಿರಲಿಲ್ಲ, ಪ್ರಪುಲ್ಲಿತವಾಗಿತ್ತು. ಅಲ್ಲಿಯ ಪರಿಸರವೇ ಹಾಗೆ! ಸುಂದರ ಹೂದೋಟದ ಮಧ್ಯೆ ಅವರ ಮನೆಯಿದೆ. ಬಾಗಿಲು ತೆರೆದಾಗ ಕಣವಿಯವರ ತೆರೆದ ಹೃದಯದ ಸ್ವಾಗತ ಕಾದಿತ್ತು. "ಒಳಗೆ ಬನ್ನಿ" ಎಂದು ಹೇಳುವಾಗ ಕಣ್ಣಂಚಿನಲ್ಲೂ ತುಳುಕುವ ಮೃದು ಮಾತು; ನಿರ್ಮಲ ಅಂತಃಕರಣ ಸೂಸುವ ಮುಗುಳುನಗೆ. ಒಳಗೆ ಕಾಲಿಟ್ಟಾಗ ಭಯ ಸಂಕೋಚಗಳು ಮಾಯವಾಗಿ ಕವಿ ನಮ್ಮವರಾಗಿ ಬಿಡುತ್ತಾರೆ, ಹಾಗೆಯೇ 'ಚೆಂಬೆಳಕು' ನಮ್ಮದಾಗುತ್ತದೆ.

ಇಂದಿನ ಬೌದ್ಧಿಕ ಜಗತ್ತು ಹಾಗೂ ಕನ್ನಡ ಕಾವ್ಯ ಪರಿಸರವನ್ನು ಹಿನ್ನೆಲೆಯಾಗಿಟ್ಟು ಕೊಂಡು ಅದರ ಜೊತೆ ಮಾತಿಗಿಳಿದಾಗ ಹೊಮ್ಮಿದ ವಿಚಾರಗಳು ಮನನೀಯವಾಗಿದ್ದವು.

*** ನವೋದಯ ಕಾವ್ಯ ಪರಿಸರದ ಹಿನ್ನೆಲೆಯಲ್ಲಿ ಕಾವ್ಯಕೃಷಿಗೆ ತೊಡಗಿ ಕನ್ನಡದ ಮಹತ್ತ್ವದ ಹಾಗೂ ಪ್ರಜ್ಞಾವಂತ ಕವಿಯಾಗಿ ಉಳಿದ ನೀವು ಇತ್ತೀಚಿನ ಕಾವ್ಯಗಳನ್ನು ಹೇಗೆ ಗ್ರಹಿಸುತ್ತೀರಿ?**

ಇತ್ತೀಚಿನ ಕಾವ್ಯ ಎಂದು ಕರೆದಾಗಲೂ ಕನ್ನಡ ಕಾವ್ಯದ ಒಟ್ಟು ಪರಂಪರೆಯ ಹಿನ್ನೆಲೆಯಲ್ಲಿಯೇ ಅದು ಮೂಡಿ ಬಂದದ್ದು ಎಂಬುದನ್ನು ಮರೆಯಬಾರದು. ಪರಂಪರೆಯ ಸಾರವನ್ನು ಹೀರಿಕೊಂಡು ಸಮಕಾಲೀನ ಪ್ರಜ್ಞೆಯಿಂದ ಹೊಸತನ್ನು ನೀಡಬಲ್ಲ ಕಾವ್ಯ ನನಗೆ ಗಮನಾರ್ಹವೆನಿಸುತ್ತದೆ. ಪಂಥ, ಧೋರಣೆ, ಬದ್ಧತೆ ಇತ್ಯಾದಿ ವಿಚಾರಗಳೆಲ್ಲ ಅದು ಕವಿತೆಯಾಗಿ ನಮ್ಮ ಮನಸ್ಸನ್ನು ಹಿಡಿದ ಮೇಲೆ ಅಲ್ಲವೆ? ಇತ್ತೀಚಿನ ಕವಿಗಳಲ್ಲಿ ಕೆಲವರಾದರೂ ಇದನ್ನು ಲಕ್ಷ್ಯದಲ್ಲಿಟ್ಟಿರುವುದು ಸಂತೋಷದ ಸಂಗತಿ.

*** ನವೋದಯ ಕಾವ್ಯದ ಪರಂಪರೆ ಪೂರ್ಣಗೊಂಡು ಮನ್ವಂತರ ಕಾಲವನ್ನು**

**ದಾಟಿ ಬರಬೇಕಾದ ಸಂದರ್ಭದಲ್ಲಿ ನಿಮಗಾದ ವಿಶಿಷ್ಟ ಅನುಭವ ಎಂಥದು?**

ನವೋದಯ ಕಾವ್ಯ ಪರಂಪರೆ ಪೂರ್ಣಗೊಳ್ಳುವ ಹೊತ್ತಿಗೆ ನನ್ನ ಆಸಕ್ತಿಗಳು ವಿಸ್ತಾರಗೊಳ್ಳತೊಡಗಿದ್ದವು. ಜೀವನದ ವಾಸ್ತವದ ಅರಿವು ರಮ್ಯತೆಯನ್ನು ಭೇದಿಸತೊಡಗಿದ್ದರೂ ಆದರ್ಶಪ್ರಿಯತೆಗೆ ಭಂಗವುಂಟಾಗಿರಲಿಲ್ಲ. ಪ್ರಗತಿಶೀಲತೆಯ ತೆರೆಯೊಂದು ರಭಸದಿಂದ ಹಾಯ್ದು ಹೋದದ್ದನ್ನು ಗಮನಿಸಿದ್ದೆ. ನವ್ಯದೊಡನೆ ಸಂಘರ್ಷಕ್ಕೆ ತೊಡಗಿದಾಗಲೂ ನವೋದಯದೊಡನೆ ನನ್ನ ಸಂಬಂಧ ಆತ್ಮೀಯವಾಗಿತ್ತು. ಅನುಭವದ ಸಮಗ್ರ ಶೋಧನೆ ಜೀವಂತ ಭಾಷೆಯ ನುಡಿಗಟ್ಟು, ಆಡು ಮಾತಿನ ಲಯ, ಮುಂತಾದವು ನವ್ಯರಲ್ಲಿ ನಾನು ಒಪ್ಪಿಕೊಂಡ ಗುಣಗಳು. ಆದರೆ ಅವರ ತೀವ್ರ ನಿರಾಶೆ, ಒಬ್ಬಂಟಿತನ, ಕಾಮೋತ್ಸಾಹಗಳು ನನ್ನಂಥವರನ್ನು ಕಾಡಲಿಲ್ಲ. ಕಾಲವನ್ನು ದಾಟಿ ಬರೆದ ಮೇಲೂ ಸ್ನೇಹ, ಪ್ರೀತಿ, ಮಾನವೀಯತೆ ಮೌಲ್ಯಪ್ರಜ್ಞೆಗಳನ್ನು ನಾನು ಜತನವಾಗಿ ಕಾಪಾಡಿಕೊಂಡಿದ್ದೇನೆಂದೇ ಹೇಳಬಹುದು.

*** ಸ್ವಾತಂತ್ರ್ಯೋತ್ತರ ಭಾರತದಲ್ಲಿ ಇಂದಿನ ಲೇಖಕ ನಿಜವಾದ ಅರ್ಥದಲ್ಲಿ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಅನುಭವಿಸುತ್ತಿದ್ದಾನೆಯೇ? ವೈಯಕ್ತಿಕವಾಗಿ ನಿಮ್ಮ ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ಎಂದಾದರೂ ಕುತ್ತು ಬಂದೊದಗಿದೆಯೆ?**

ಹಾಗೆ ನೋಡಿದರೆ ಪ್ರಜಾಪ್ರಭುತ್ವದಲ್ಲಿ ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ಧಕ್ಕೆ ಬರಬಾರದು. ಆದರೆ ನಮ್ಮ ಜೀವನ ರಾಜಕೀಯಮಯವಾಗಿ ಬಿಟ್ಟಿರುವುದರಿಂದ ಜಾತಿ, ಧರ್ಮ, ನೈತಿಕತೆ, ರಾಷ್ಟ್ರೀಯತೆ ಇತ್ಯಾದಿಗಳ ನೆವದಲ್ಲಿ ಅದಕ್ಕೆ ಆಗಾಗ ಆತಂಕ ಒದಗಿದ್ದುಂಟು. ನಮ್ಮ ವಿಚಾರಗಳೇ ಪ್ರಸಾರಗೊಳ್ಳದಂತೆ ವ್ಯವಸ್ಥೆ ಉಪಾಯಗಳನ್ನು ಯೋಜಿಸಬಲ್ಲದು.

ಸಂಶೋಧಕರೊಬ್ಬರ ವಿವಾದಕ್ಕೀಡಾದ ಲೇಖನಗಳ ಮುಕ್ತ ಚರ್ಚೆಗೆಂದು ಧಾರವಾಡದಲ್ಲಿ ಇತ್ತೀಚೆಗೆ ವಿಚಾರವಾದಿಗಳ ಸಭೆಯೊಂದನ್ನು ಏರ್ಪಡಿಸಿದಾಗ ಅದು ನಡೆಯದಂತೆ ನೋಡಿಕೊಳ್ಳಲಾಯಿತು. ಇಂಥ ಅನೇಕ ಉದಾಹರಣೆಗಳನ್ನು ಕೊಡಬಹುದು.

*** ಸಲ್ಮಾನ್‌ರಶ್ದೀ ಪ್ರಕರಣ ಸಾಂಸ್ಕೃತಿಕ ಜಗತ್ತಿನಲ್ಲಿ ಎಬ್ಬಿಸಿರುವ ಮೂಲಭೂತ ಪ್ರಶ್ನೆ. ಲೇಖಕನ ಅಭಿವ್ಯಕ್ತಿ ಸ್ವಾತಂತ್ರ್ಯದ ಇತಿಮಿತಿಗಳಿಗೆ ಸಂಬಂಧಿಸಿದ್ದು. ಇದು ಈ ಸ್ವಾತಂತ್ರ್ಯದ ಸೀಮಾರೇಖೆ ಎಂದು ನಿಶ್ಚಿತವಾಗಿ ಹೇಳುವುದು ಹೇಗೆ?**

ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೂ ಇತಿಮಿತಿಗಳಿವೆ, ಇಲ್ಲವೆಂದಲ್ಲಾ. ಸೃಜನಾತ್ಮಕ ಕೃತಿಗಳಲ್ಲಿ ಅದರ ಉಲ್ಲಂಘನೆಯನ್ನು ಗುರುತಿಸುವುದು ಬಹಳ ಕಷ್ಟ. ಇಂದಿನ ಸಮಾಜ ವ್ಯವಸ್ಥೆಯಲ್ಲಿ ಅಭಿವ್ಯಕ್ತಿ ಸ್ವಾತಂತ್ರ್ಯ ತನ್ನ ಅರ್ಥವನ್ನೇ ಕಳೆದುಕೊಂಡಂತಿದೆ.

ಆದರೆ ಹೆದರಿಕೆ ಬೆದರಿಕೆಗಳಿಂದ ಲೇಖಕನಿಗೆ ಮಾನಸಿಕ ಹಿಂಸೆಯನ್ನುಂಟು ಮಾಡುವುದು ಅತ್ಯಂತ ಅನಾಗರಿಕವಾದದ್ದು.

*** ನವೋದಯ ಹಾಗೂ ನವ್ಯ ಈ ಎರಡೂ: ಕಾವ್ಯ ಪರಂಪರೆಗಳ ಸಮನ್ವಯ ಸಿದ್ಧಿಯಲ್ಲಿ ನಿಮಗೆ ಸಮಾಧಾನ ದೊರಕಿದೆಯೆ? 'ಇನ್ನೊಂದು ಸಾಧನೆಯ ಸಿದ್ಧತೆ'ಯ ದೃಷ್ಟಿಯಿಂದ ಸದಾ ಸೃಜನಶೀಲ ಹಾಗೂ ಪರಿವರ್ತನಶೀಲ ಕವಿಯಾದ ನೀವು ಕೇವಲ ಸಮನ್ವಯ ಕವಿಯಾಗಿ ಉಳಿಯಬಾರದಲ್ಲವೇ?**

ಹಳತು, ಹೊಸತು, ಕೂಡಿ ಪಾಕಾವಾಗಿ ಮುಂದುವರಿಯುವ ಪ್ರಯತ್ನ ನನ್ನ ಜಾಯಮಾನಕ್ಕೆ ಒಗ್ಗುವಂಥದು. 'ಸಿದ್ಧಿ'ಯ ಮಾತು ಬೇರೆ. ಹಾಗೆ ನೋಡಿದರೆ ಕನ್ನಡ ಕಾವ್ಯ ಕಾಲಕಾಲಕ್ಕೆ ಸಮನ್ವಯಕ್ಕೆ ಹಾತೊರೆಯುತ್ತಲೇ ಬಂದಿದೆ. ನವೋದಯವೂ ಒಂದು ದೃಷ್ಟಿಯಿಂದ ಸಮನ್ವಯ ಕಾವ್ಯವೇ. ಆದ್ದರಿಂದ 'ಸಮನ್ವಯ'ವನ್ನು ಸಂಕುಚಿತ ಅರ್ಥದಲ್ಲಿ ನೋಡದೆ ಇದು ಕೂಡಾ ಗತಿಶೀಲವಾಗಿರುವುದನ್ನು ಮನಗಾಣುವುದು ಅವಶ್ಯವಾಗಿದೆ. ಬದಲಾವಣೆಯನ್ನು ಅದು ವಿರೋಧಿಸದೆ ಅದರ ಒಳ್ಳೆಯ ಅಂಶಗಳನ್ನು ತನ್ನಲ್ಲಿ ಅಳವಡಿಸಿಕೊಂಡು ಎಚ್ಚರಿಕೆಯಿಂದ ಮುಂದುವರಿಯುತ್ತದೆ.

*** ಅನುಭವ ಮತ್ತು ವೈಚಾರಿಕತೆಗಳೆರಡೂ ಕರಗಿ ಕಲಾತ್ಮಕವಾಗಿ ರೂಪಾಂತರಗೊಳ್ಳುವ ಪ್ರಕ್ರಿಯೆಯಲ್ಲಿ ಕಾವ್ಯ ಸಿದ್ಧಿಸುತ್ತದೆ. ಸಮರ್ಥವಾಗಿ ಅಭಿವ್ಯಕ್ತಿಯನ್ನು ಪಡೆದ ಅನುಭೂತಿಯಲ್ಲಿ ಇಷ್ಟು ಪಾಲು ವೈಚಾರಿಕ, ಇಷ್ಟು ಪಾಲು ಭಾವಾತ್ಮಕ ಎಂದು ವಿಂಗಡಿಸಿ ಹೇಳುವುದು ಸಾಧ್ಯವೇ ಇಲ್ಲ (ಮನ್ವಂತರ-೭ 'ಕಾವ್ಯದಲ್ಲಿ ವೈಚಾರಿಕತೆಯ ಭಾರದಿಂದ ನರಳುತ್ತಿರುವುದು ಅದರ ವೈಫಲ್ಯವೆಂದೇ ಹೇಳಬೇಕಲ್ಲವೆ?**

ನಿಮ್ಮ ಪ್ರಶ್ನೆಯ ಮೊದಲ ಭಾಗದಲ್ಲಿಯ (ನೀವು ಕಂಡಿರುವ ವೈಫಲ್ಯಕ್ಕೆ) ವಿವೇಚನೆಯೇ ತಕ್ಕ ಉತ್ತರವಾಗಬಲ್ಲದು.

*** ಗದ್ಯ ಪದ್ಯ ಪರಸ್ಪರ ವೈರಿಗಳಲ್ಲ. ಗದ್ಯದಲ್ಲಿಯ ಮಾತಿನ ಲಯ, ಸಂಭಾಷಣೆಯ ಸೊಗಸನ್ನು ಪದ್ಯ ಸ್ವೀಕರಿಸಿದರೆ ಅದರ ಗುಣ ಗೌರವ ಇನ್ನೂ ಹೆಚ್ಚುತ್ತದೆ. ಒಪ್ಪಿಕೊಳ್ಳೋಣ, ಆದರೆ ಕಾವ್ಯ ಸ್ವರೂಪಕ್ಕೆ ಇದರಿಂದ ಧಕ್ಕೆಯಾಗುವುದಿಲ್ಲವೆ?**

ನನಗೆ ಹಾಗೆ ಅನಿಸುವುದಿಲ್ಲ. ಆದರೆ ಕಾವ್ಯದ ಉಳಿದ ಲಕ್ಷಣಗಳನ್ನು ಕೈ ಬಿಡಬಾರದು ಅಷ್ಟೇ.

*** ಇತ್ತೀಚೆಗೆ ಭಾವಗೀತೆಗಳು ಮತ್ತೆ ಚಿಗುರೊಡೆಯುತ್ತಿವೆ. ಇದು ನವೋದಯ ಅಥವಾ ರೋಮ್ಯಾಂಟಿಕ್ ಪರಂಪರೆಯ ಪುನರಾವರ್ತನೆಯೆ?**

ಇತ್ತೀಚಿನ ಭಾವಗೀತೆಗಳಲ್ಲಿ ನವೋದಯ ಕಾಲದ ಭಾವೋದ್ರೇಕವನ್ನು

ಕಾಣಲಾರಿರಿ. ಸಮಕಾಲೀನತೆಯ ಸ್ಪಂದನದೊಂದಿಗೆ ನಮ್ಮ ಭಾವಲೋಕವನ್ನು ಹೊಸ ದೃಷ್ಟಿಯಿಂದ ಅವಲೋಕಿಸಿ ಅಭಿವ್ಯಕ್ತಿಗೊಳಿಸುವ ಪ್ರಯತ್ನ ಇವುಗಳಲ್ಲಿ ಕಂಡು ಬರುತ್ತದೆ. ಆದ್ದರಿಂದ ಇದು ರೋಮ್ಯಾಂಟಿಕ್ ಪರಂಪರೆಯ ಪುನರಾವರ್ತನೆಯಲ್ಲ. (ಕ್ಯಾಸೆಟ್‌ಗಳಿಗಾಗಿಯೇ ಬರೆದ ಪದ್ಯಗಳಿಗೆ ಮಾತ್ರ ಈ ಮಾತು ಅನ್ವಯಿಸುವುದಿಲ್ಲ).

*** ಕಾವ್ಯ ಜನರ ವಿಶ್ವಾಸವನ್ನು ಕಳೆದುಕೊಳ್ಳುತ್ತಿದೆಯೆ? ಕಾವ್ಯದತ್ತ ಜನರ ಒಲವು ಕಡಿಮೆಯಾಗಲು ಕಾರಣ? ಕಾವ್ಯಕ್ಕೆ ಈಗ ರಕ್ಷಣೆಯ ಅಗತ್ಯವಿದೆಯೆ?**

ಕಾವ್ಯವನ್ನು ತಾವಾಗಿಯೆ ಆಸ್ಥೆಯಿಂದ ಓದುವವರ ಸಂಖ್ಯೆ ಯಾವ ಕಾಲಕ್ಕೂ ಕಡಿಮೆಯೇ, ಆದರೆ ಅದರ ಬಗ್ಗೆ ಅಭಿರುಚಿಯುಳ್ಳವರು ಇಲ್ಲವೆಂದಲ್ಲ. ಮೊದಲಿಗಿಂತಲೂ ಈಗ ಕವಿಗೋಷ್ಠಿಗಳು ಹೆಚ್ಚಾಗಿ ನಡೆಯುತ್ತಿವೆ. ಶ್ರೋತೃಗಳ ಸಂಖ್ಯೆಯೂ ಹೆಚ್ಚಿನ ಪ್ರಮಾಣದಲ್ಲಿರುತ್ತದೆ. ಜನರ ಒಲವನ್ನುಗಳಿಸಿಕೊಳ್ಳುವುದು ಕವಿಗಳನ್ನೇ ಕೂಡಿದೆ. ಕಾವ್ಯಕ್ಕೆ ರಕ್ಷಣೆಯ ಅಗತ್ಯ ಕುರಿತು ಪ್ರಸ್ತಾಪಿಸಿದ್ದೀರಿ. ಕೆಲವು ಕವಿಗಳೆನಿಸಿ ಕೊಂಡವರಿಂದಲೇ ಅದಕ್ಕೆ ರಕ್ಷಣೆ ಬೇಕಾಗಿದೆ ಎಂದು ಅನಿಸುವುದಿಲ್ಲವೆ? (ನಗು)

ಕವಿಗಳು ತಮ್ಮ ಕವಿತೆಗಳನ್ನು ಮಾತ್ರವಲ್ಲ ಅನ್ಯ ಕವಿಗಳ ಕವಿತೆಗಳನ್ನೂ ಓದಿ ತೋರಿಸುವ ಪರಿಪಾಠ ಬೆಳೆಯಬೇಕೆನಿಸುತ್ತದೆ. ಜಿ.ಪಿ. ರಾಜರತ್ನಂ, ರಂ.ಶ್ರೀ. ಮುಗಳಿ ಅವರಂಥವರ ಆದರ್ಶವನ್ನು ಮುಂದುವರಿಸುವ ಅಗತ್ಯವಿದೆ.

*** "ಕಾವ್ಯ ಶೈಲಿಯ ಮೂಲ ಗುಣ ಅದರ ಯಾಂತ್ರಿಕತೆ, ಜೀವನವನ್ನು ಕಲೆಯಾಗಿ ಪಲ್ಲಟಿಸುವ ಪವಾಡ ಇದಿಲ್ಲದೆ ಶೈಲಿಯು ನವ್ಯವಾಗಬಹುದು. ಕಾವ್ಯವಾಗಲಾರದು." (ವಿ.ಕೃ.ಗೋಕಾಃ) ಈ 'ಮಾಂತ್ರಿಕತೆ'ವಿಮರ್ಶೆಯ ಪರಿ ಭಾಷೆಯಾಗಿ ಕೂಡ ಉಳಿದುಬಂದಿಲ್ಲ. ಬಹುಶಃ 'ಮಾಂತ್ರಿಕತೆ' ಶಬ್ದದಲ್ಲಿ ರೊಮ್ಯಾಂಟಿಕ್ ಅಂಶವಿದೆ ಎಂದು ಭಾವಿಸಲಾಗುತ್ತಿದೆಯೆ? ಹಾಗಿದ್ದಲ್ಲಿ ಈ ಪದಕ್ಕೆ ವಿಮರ್ಶೆಯ ವಿಶೇಷ ಅರ್ಥವ್ಯಾಪ್ತಿ ನೀಡಬಾರದೇಕೆ?**

* "ಮಾಂತ್ರಕತೆ" ವಿಮರ್ಶೆಯ ಪರಿಭಾಷೆಯಾಗಿ ಉಳಿದಿರದಿದ್ದರೂ ನಿಜವಾದ ವಿಮರ್ಶಕ ಕಾವ್ಯದ ಆ ಗುಣವನ್ನು ಮರೆತಿದ್ದಾನೆಂದು ಭಾವಿಸಕೂಡದು.

ಶಬ್ದ, ನಾದ, ಅರ್ಥಗಳ ಅಪೂರ್ವವಾದ ಸಂಯೋಜನೆಯಿಂದ ಕಾವ್ಯ ಪಡೆಯುವ ಮೋಡಿಯೇ ಮಾಂತ್ರಿಕತೆ. ಅದರ ಅರ್ಥವ್ಯಾಪ್ತಿಯನ್ನು ಸುಮ್ಮನೆ ಹಿಗ್ಗಿಸುವುದೇಕೆ?

*** ಅನುಭವದ ತೀವ್ರತೆಗೆ ಛಂದಸ್ಸು ಬಂಧನಕಾರಿಯಲ್ಲವೆ?**

ಎಂಥ ಅನುಭವದ ತೀವ್ರತೆಯಿದ್ದಾಗಲೂ ಕವಿತೆಯಲ್ಲಿ ಅದು ತನಗೆ ತಕ್ಕ ಛಂದೋ

ಶರೀರವನ್ನು ಪಡೆದುಕೊಂಡೇ ಹೊರ ಹೊಮ್ಮುತ್ತದೆ. ಛಂದೋಗತಿ ಯಾಂತ್ರಿಕವಾದಾಗ ಮಾತ್ರ ಅದು ಬಂಧನಕಾರಿ ಎನಿಸಬಹುದು.

*** ಕಾವ್ಯರಚನಾ ಕೌಶಲ (Workmanship) ಅಥ'ವಾ ಕಲೆಗಾರಿಕೆ (Croftmanship) ಯಿಂದಾಗಿ ಕಾವ್ಯಭಾಷೆ ಕೃತಕವೆನಿಸುವುದಿಲ್ಲವೇ?**

ಕಾವ್ಯಕ್ಕೆ ಪ್ರತ್ಯೇಕವಾದ ಭಾಷೆಯಿದೆ ಎಂದು ಭಾವಿಸುವುದೇ ತಪ್ಪು. ಆದರೆ ವಸ್ತುವಿಗೆ ತಕ್ಕಂತೆ ಅದನ್ನು ಹದಗೊಳಿಸಬೇಕಾಗುತ್ತದೆ. ನೀವು ಹೇಳುವ ರಚನಾ ಕೌಶಲ ಅಥವಾ ಕಲೆಗಾರಿಕೆಯಿಂದ ಸಹಜತೆಗೆ ಕುಂದು ಬರದಂತೆ ಕಾವ್ಯಭಾಷೆ ಅಭಿವ್ಯಕ್ತಿ ಸಾಮರ್ಥ್ಯವನ್ನು ಹೆಚ್ಚಿಸಿಕೊಳ್ಳುತ್ತದೆ.

**ಶ್ರೇಷ್ಠ ಕಾವ್ಯ ಬಿಡಿ ಕವಿತೆಗಳಲ್ಲಿ ಮಾತ್ರ ಸಂಭವಿಸುತ್ತದೆಯೆ? ಹಾಗಾದರೆ ನೀವೇಕೆ ಮಹಾಕಾವ್ಯ ರಚಿಸಲಿಲ್ಲ?**

ಹಾಗೇನಿಲ್ಲ. ಇಂದಿನ ಮುಖ್ಯ ಕಾವ್ಯ ಪ್ರಕಾರದಲ್ಲಿ ನನ್ನ ಮನಸ್ಸು ಕೇಂದ್ರೀಕೃತವಾಗಿರುವುದರಿಂದ ಕಥನಕ್ಕೆ ಹವಣಿಸಿಲ್ಲ.

**ನವ್ಯತೆ ನಿಮ್ಮ ಕಾವ್ಯದ ಆಂತರಿಕ ಅವಶ್ಯಕತೆಯಾಗಿ ಬಂದಿರದೆ ಹೊರಗಿನ ಪ್ರಭಾವವಾಗಿ ಬಂದಿದೆ ಎನ್ನುವ ಕುರ್ತಕೋಟಿಯವರ ಅಭಿಪ್ರಾಯಕ್ಕೆ ನಿಮ್ಮ ಪ್ರತಿಕ್ರಿಯೆ ಏನು?**

ನಾನು ನವ್ಯ ಕವಿ ಎಂದು ಹೇಳಿ ಕೊಂಡಿದ್ದರಲ್ಲವೆ ಆ ಪ್ರಶ್ನೆ ಏಳುವುದು?

**ನಿಮ್ಮ ಸಮಕಾಲೀನ ಕವಿಗಳಿಗಿಂತ ನೀವು ಹೇಗೆ ಭಿನ್ನ? ಓರ್ವ ಕವಿಯಾಗಿ ನಿಮ್ಮನ್ನು ನೀವು ಹೇಗೆ ಗುರುತಿಸಿಕೊಳ್ಳುತ್ತೀರಿ?**

ಪ್ರತಿಯೊಬ್ಬರ ವ್ಯಕ್ತಿತ್ವ ನಿರ್ಮಾಣದಲ್ಲಿಯೇ ಆ ಭಿನ್ನತೆಯಿದೆ. ಅದಕ್ಕನುಸರಿಸಿ ಸಮಕಾಲೀನರಾಗಿಯೂ ನಮ್ಮದು ಭಿನ್ನ ರುಚಿ. ಕನ್ನಡ ಕಾವ್ಯ ಪರಂಪರೆಯ ಒಂದು ಅಂಗವಾಗಿಯೇ ನಾನು ನನ್ನನ್ನು ಗುರುತಿಸಿಕೊಳ್ಳುತ್ತೇನೆ.

**ನಿಮ್ಮ ಹೊಸ ಕವಿತೆಗಳ ಆಶಯವೇನು?**

ವಿವಿಧ ಆಸಕ್ತಿಗಳಿಗೂ ಕವಿತೆಯಲ್ಲಿ ಅಭಿವ್ಯಕ್ತಿ ನೀಡುವುದು. ಮನುಷ್ಯತ್ವಕ್ಕೆ ವಿರೋಧವಾದದ್ದನ್ನು ಸೂಕ್ಷ್ಮವಾಗಿ ಪ್ರತಿಭಟಿಸುವುದು. ಬದುಕಿನ ನೆಮ್ಮದಿಯನ್ನು ಕಾಪಾಡಿಕೊಳ್ಳುವುದು. ಜೀವನದ ಅಗಾಧತೆಯ ಅರಿವನ್ನು ಪಡೆಯುತ್ತ ಪ್ರೀತಿಸುವುದು.

**ಕಸ್ತೂರಿ, ಜುಲೈ ೧೯೮೮**

*

# ಪ್ರೀತಿ, ಸ್ನೇಹದ ಅನನ್ಯ ಕವಿ

● ಜಿ.ಎಂ. ಹೆಗಡೆ

ಧಾರವಾಡದ ನೆಲದ ಗುಣವೇನೊ ಋಣವೇನೊ
ಕವಿಗಾಳಿ ಸವಿಗಾಳಿ ತೀಡುತಿಹುದು
ಧಾರವಾಡದ ತಾಯ ಮಡಿಲಲ್ಲಿ ಮೊರೆಯಿಟ್ಟ
ದತ್ತವಾಣಿಗೆ ಎದೆಯು ಕೊಡುತಿಹುದು

('ಭಾವಜೀವಿ')

ಕನ್ನಡ ಕಾವ್ಯಪ್ರಪಂಚಕ್ಕೆ ಧಾರವಾಡವು ನೀಡಿದ ಕೊಡುಗೆಯಲ್ಲಿ ಚೆನ್ನವೀರ ಕಣವಿ ಅವರಿಗೆ ಮಹತ್ವದ ಸ್ಥಾನ. ಕಣವಿ ಅವರು ಭಾವಜೀವಿಯಾಗಿ ಸ್ನೇಹಜೀವಿಯಾಗಿ ಪ್ರೀತಿ, ಅಂತಃಕರಣಗಳಿಂದ ಮಾನವೀಯ ಸಂಬಂಧಗಳನ್ನು ಕನ್ನಡ ಕಾವ್ಯದಲ್ಲಿ ಹೊಳೆಯಾಗಿ ಹರಿಸಿದವರು. ನವೋದಯ, ನವ್ಯ, ನವ್ಯೋತ್ತರ ಹೀಗೆ ಆಧುನಿಕ ಕನ್ನಡ ಕಾವ್ಯ ಪರಂಪರೆಯಲ್ಲಿ ಕಣವಿಯವರ ಕಾವ್ಯ ಜೀವಧ್ವನಿಯಾಗಿ ಪ್ರಕಟವಾದದ್ದು ಕನ್ನಡದ ಭಾಗ್ಯವೆನ್ನಬೇಕು. ಬತ್ತಲಾರದ ಗಂಗೆಯಂತೆ ಕಾವ್ಯವನ್ನು ನಿರಂತರವಾಗಿ ನೀಡುತ್ತಲಿರುವ ಕಣವಿಯವರ ಸೃಜನಶೀಲತೆ ಅಗಾಧವಾದದ್ದು. ನಿಸರ್ಗದ ಬಗೆಗೆ ಗಾಢವಾದ ಪ್ರೀತಿ, ಮಾನವ ಬದುಕಿನ ಉತ್ಕರ್ಷದ ಬಗೆಗೆ ಪ್ರೀತಿ ತುಂಬಿದ ಕಣವಿ ಅವರ ಕವಿತೆಗಳು ಅವರ ಸುಸಂಸ್ಕೃತ ಮನಸ್ಸಿನ ಪ್ರತಿಬಿಂಬವಾಗಿದೆ. ಕನ್ನಡ ಜನರ ಪ್ರೀತಿಯ ಕವಿ ಕಣವಿ ಹಾಸನದಲ್ಲಿ ಜರುಗಲಿರುವ ಅರವತ್ತೈದನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷರಾದದ್ದು ಕನ್ನಡಿಗರಿಗೆ ಅಪಾರ ಹರ್ಷೋಲ್ಲಾಸವನ್ನುಂಟು ಮಾಡಿದೆ.

ಕಾವ್ಯರಚನೆ ಕಣವಿ ಅವರ ಪ್ರತಿಭೆಯ ವಿಶಿಷ್ಟತೆಯಾಗಿರುವುದಾದರೂ. ಕಾವ್ಯದ ಕಸಬುಗಾರಿಕೆಯಲ್ಲಿ ಅವರ ಸಾಧನೆ ಮಹತ್ತರವಾದದ್ದು. ಸಮಕಾಲೀನ ಸಂವೇದನೆಗಳಿಗೆ, ಹೊಸ ಹೊಸ ಅನುಭವಕ್ಕೆ, ಕಾವ್ಯ ಶಿಲ್ಪ ನೀಡುವ ಕಲೆಗಾರಿಕೆ ಕಣವಿ ಕವಿತೆಗಳ ವೈಶಿಷ್ಟ್ಯವಾಗಿದೆ. 'ಕಾವ್ಯಾಕ್ಷಿ', 'ಭಾವಜೀವಿ', 'ಆಕಾಶ ಬುಟ್ಟಿ',

'ಮಧುಚಂದ್ರ', 'ದೀಪಧಾರಿ', 'ಮಣ್ಣಿನ ಮೆರವಣಿಗೆ', 'ನೆಲಮುಗಿಲು', 'ಎರಡುದಡ', 'ನಗರದಲ್ಲಿ ನೆರಳು', 'ಜೀವಧ್ವನಿ', 'ಕಾರ್ತೀಕದ ಮೋಡ', 'ಜೀನಿಯಾ', 'ಶಿಶಿರದಲ್ಲಿ ಬಂದ ಸ್ನೇಹಿತ' ಈ ಕವಿತಾ ಸಂಕಲನಗಳು ಕಣವಿ ಕಾವ್ಯದ ಜೀವಂತ ಗತಿಯನ್ನು ಪ್ರಕಟಿಸುತ್ತವೆ; ಕಣವಿ ಅವರ ಸಮಗ್ರ ಕಾವ್ಯ 'ಹೊಂಬೆಳಕು' ೩೭೦ ಕವಿತೆಗಳ ಬೃಹತ್ ಸಂಪುಟವಾಗಿದೆ. ಚಿರಂತನದಾಹ (ಆಯ್ದ ಕವಿತೆಗಳು) ಹೂವು ಹೊರಳುವುವು ಸೂರ್ಯನ ಕಡೆಗೆ (ಗೇಯ ಕವಿತೆಗಳು) ಹಕ್ಕೀಪುಚ್ಚ (ಮಕ್ಕಳ ಕವಿತೆ) ಹೀಗೆ ಹದಿನಾರು ಕವಿತಾ ಸಂಕಲನಗಳಲ್ಲಿ ಹರಿದು ಬಂದ ಕಣವಿ ಕಾವ್ಯದಲ್ಲಿ ಸಮೃದ್ಧಿ, ವೈವಿಧ್ಯ ಹಾಗೂ ಸಂಭ್ರಮವನ್ನು ಕಾಣುತ್ತೇವೆ.

ಸಮಾಹಿತ ಪ್ರತಿಭೆಯ ಅನನ್ಯತೆ ಕಣವಿ ಅವರಲ್ಲಿದೆ. 'ಭಾವ ಜೀವಿಯು ನಾನು ನನ್ನೆದೆಯ ನಂಬಿರುವ, ತುಂಬಿರುವ ಕನಸುಗಳೆ ಕಲ್ಪವೃಕ್ಷ' ಎಂದ ಕಣವಿಯವರು ಭಾವಗೀತೆಯ ಉತ್ಕರ್ಷದ ಕಾಲದಲ್ಲಿ ಕನ್ನಡದಲ್ಲಿ ಕಾವ್ಯ ರಚನೆಗೆ ತೊಡಗಿಕೊಂಡವರು. ನವೋದಯ ಕಾವ್ಯ ದುಮುದುಮಿಸಿ ಬರುವಾಗ ಕಣವಿ, 'ಸೌಂದರ್ಯ ದರ್ಶನಕೆ ದೀಪ್ತವಾಗಿಹ ಮನವು ಪ್ರಕೃತಿಯೋಪಾಸನೆಯ ಕೈಕೊಂಡು ಮಧುಚಂದ್ರದ ಉಲ್ಲಾಸವನ್ನು ನೀಡಿದವು. ನವೋದಯ, ನವ್ಯ ಎರಡು ದಡಗಳ ನಡುವೆ ಕಣವಿಯವರು ತಮ್ಮ ಕವಿತ್ವ ಶಕ್ತಿಯನ್ನು ಪ್ರವಹಿಸಿ ಸಮಕಾಲೀನ ಸಂವೇದನೆ, ಕ್ರಿಯೆ ಪ್ರತಿಕ್ರಿಯೆ ಸೃಜನಶೀಲವಾಗಿಸಿದ್ದು ಅದರ ಮುಂದುವರಿಕೆಯನ್ನು ನಾವು ಇಂದಿನವರೆಗೂ ಕಾಣುತ್ತೇವೆ.

ಕಣವಿ ಕಾವ್ಯದಲ್ಲಿ ಅವರ ಸುನೀತಗಳು ಕನ್ನಡ ಕಾವ್ಯ ಪರಂಪರೆಗೆ ಕೊಟ್ಟ ಮುಖ್ಯ ಕೊಡುಗೆಗಳಾಗಿವೆ. ಸುನೀತಗಳಲ್ಲಿ ನಾಡಿನ ಕವಿಗಳ, ಸಾಂಸ್ಕೃತಿಕ ಚೇತನಗಳ, ವ್ಯಕ್ತಿತ್ವದ ವಿಭಿನ್ನ ಮುಖಗಳನ್ನು ಕಣವಿ ಸೆರೆ ಹಿಡಿದ ರೀತಿ ವಿಶಿಷ್ಟವಾದದ್ದು. ಕಣವಿಯವರ ನೂರಾರು ಸುನೀತಗಳು ಕಾವ್ಯಬಂಧ, ಲಯಗಾರಿಕೆ, ವಸ್ತುವಿನ ಅನನ್ಯತೆಯ ನೆಲೆಯಿಂದಲೂ ಮಹತ್ವಪೂರ್ಣವಾಗಿವೆ. 'ಜಗವ ತುಂಬಿದ ಬೆಳಕು ನಮಗೇಕೋ ಸಾಲದಿದೆ ಎನಿತು ಮಾನವನೆದೆಯ ಆಳ ಅಗಲ' ಎಂದ ಕಣವಿಯವರು ಚೆಂಬೆಳಕಿನ ಕವಿಯಾಗಿದ್ದಾರೆ. 'ಹೊಂಬೆಳಕು' (ಸಮಗ್ರ ಕಾವ್ಯ)ದಲ್ಲಿ ಕವಿಯ ಪ್ರಜ್ಞೆಯ ಬೆಳಕನ್ನು, ಚಿಂತನಶೀಲತೆಯನ್ನು, ಸುಕುಮಾರ ಭಾವನೆಯನ್ನು, ಕಾವ್ಯಾನುಭೂತಿಯ ವೈವಿಧ್ಯವನ್ನು, ಅರ್ಥಪೂರ್ಣ ಪ್ರತಿಮಾವಿಧಾನವನ್ನು ಅನುಭವಿಸುತ್ತೇವೆ. ಕಣವಿಯವರು ಸಹೃದಯನೊಡನೆ ಕವಿತೆಯ ಮೂಲಕ ನಡೆಸುವ ಭಾವಸಂವಾದ ಮನೋಜ್ಞವಾದದ್ದು. ಸಾಮಾಜಿಕಪ್ರಜ್ಞೆಯ ವಿಡಂಬನೆಯ ಸ್ಪಂದನವೂ ಕಣವಿ ಕಾವ್ಯದಲ್ಲಿದೆ.

ದೇಶೀಯ ಸಂಸ್ಕೃತಿಯ ಬೇರುಗಳಲ್ಲಿ ಆಸ್ಥೆಯಿಟ್ಟು ಅದನ್ನು ಭದ್ರಗೊಳಿಸುವ ಆಶಯವನ್ನು ಪ್ರಕಟಿಸಿದ ಕಣವಿ ಅವರು ಸಮಕಾಲೀನ ಸನ್ನಿವೇಶದಲ್ಲಿ ಕನ್ನಡ ಕಾವ್ಯ ನವೀನ ಮಾರ್ಗವನ್ನು ಕಂಡುಕೊಳ್ಳಬೇಕೆಂದು ಹೇಳಿದ್ದಾರೆ. ಅನ್ಯ ಸಂಸ್ಕೃತಿಯ ಅಕ್ರಮಣದಿಂದ, ಪಾಶ್ಚಾತ್ಯ ಪ್ರಭಾವದಿಂದ ಕನ್ನಡದ ಸಂಸ್ಕೃತಿ ಪರಂಪರೆಗೆ ಧಕ್ಕೆ ಆಗದಂತೆ ಕಾವ್ಯ ಕಟ್ಟುವ ಹೊಸ ಸಂವೇದನೆ ಕಾವ್ಯದಲ್ಲಿ ಮೂಡಿ ಬರಬೇಕೆಂದು ಕಣವಿ ಹೊಸ ಕವಿಗಳಿಗೆ ಕರೆಕೊಟ್ಟಿದ್ದಾರೆ. 'ನನ್ನ ನಂಬಿಕೆಯೊಂದು ಆಕಾಶ ನಿಜ ಅದಕೆ ತಲೆ ಬುಡವಿಲ್ಲ. ನಾನೆಷ್ಟು ಬೆಳೆದರೂ ನನಗೆ ನಿಲುಕುವುದಿಲ್ಲ' ಎಂದು ಕಾವ್ಯಲೋಕದ ಅನಂತ ವಿಸ್ತಾರ, ಮಾನವ ಸಂಬಂಧಗಳ ವಿಶ್ಲೇಷಣೆಯಲ್ಲಿ ತೊಡಗಿದ ಅವರು ಕನ್ನಡ ಕಾವ್ಯ ಪರಂಪರೆಗೆ ಕೊಟ್ಟ ಕೊಡುಗೆ ಅಗಾಧವಾದದ್ದು. ಸ್ನೇಹ, ಪ್ರೀತಿ, ಅಂತಃಕರಣಗಳೇ ಹೂವಾಗಿ ಅರಳಿ ಪರಿಮಳಿಸುವ ಕಣವಿ ಕಾವ್ಯ ಸಹೃದಯರಿಗೆ ಸತತ ಚೇತೋಹಾರಿಯಾದದ್ದು. ಅವರ ಅಭಿನಂದನ ಗ್ರಂಥ 'ಚೆಂಬೆಳಕು' ಕಣವಿ ವ್ಯಕ್ತಿತ್ವ ಸಾಹಿತ್ಯ ಪ್ರತಿಭೆಯ ಶ್ರೀಮಂತಿಕೆ ಸಾರುತ್ತದೆ.

ಕಣವಿ ಕನ್ನಡದ ಶ್ರೇಷ್ಠಕವಿಯಾಗಿ ವಿಜೃಂಭಿಸುವಂತೆ ವಿಮರ್ಶಕರಾಗಿಯೂ ಖ್ಯಾತರಾಗಿದ್ದಾರೆ. 'ಸಾಹಿತ್ಯ ಚಿಂತನ', 'ಕಾವ್ಯಾನುಸಂಧಾನ', 'ಸಮಾಹಿತ', 'ಮಧುರ ಚೆನ್ನ', 'ಸಮತೋಲನ', 'ವಚನಾಂತರಂಗ' ಮೊದಲಾದ ವಿಮರ್ಶಾ ಸಂಕಲನಗಳಲ್ಲಿ ಕಣವಿಯವರ ಸಹೃದಯತೆ, ಸಾಹಿತ್ಯ ಪ್ರೀತಿ ರಸಜ್ಞತೆ, ವಿಶ್ಲೇಷಣಾತ್ಮಕ ಪ್ರತಿಭೆಯನ್ನು ನಾವು ಸ್ಪರ್ಶಿಸುತ್ತೇವೆ. ಕಾವ್ಯ ಹಾಗೂ ವಿಮರ್ಶೆಯ ವ್ಯವಸಾಯವನ್ನು ಅರ್ಧಶತಮಾನದಷ್ಟು ಕಾಲ ನಡೆಸಿದ ಕಣವಿ ಅವರು ೬೮ ವಸಂತಗಳನ್ನು ಕಂಡವರು. ಕನ್ನಡದ ಹಿರಿಯ ಕವಿ ಕಣವಿ ಅವರು ತಮ್ಮ 'ಜೀವಧ್ವನಿ' ಕವಿತಾ ಸಂಕಲನಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿ ಬಹುಮಾನ ಪಡೆದಿದ್ದಾರೆ. ಬಾಳಸಂಗಾತಿ ಲೇಖಕಿ ಶಾಂತಾದೇವಿ ಕಣವಿ ಅವರೊಡನೆ ಆದರ್ಶ ದಾಂಪತ್ಯ ಜೀವನ ನಡೆಸಿದ ಕಣವಿಯವರು ಸಜ್ಜನಿಕೆ, ಸುಸಂಸ್ಕೃತ ನಡವಳಿಕೆಯ ಸಾಕಾರಮೂರ್ತಿಯಾಗಿದ್ದಾರೆ. ಹಾಸನದಲ್ಲಿ ಜರುಗುವ ೬೫ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ನಿಯೋಜಿತರಾದ ಚೆನ್ನವೀರ ಕಣವಿಯವರೊಂದಿಗೆ ನಡೆಸಿದ ಸಂದರ್ಶನದ ಪೂರ್ತಿ ಪಾಠ ಹೀಗಿದೆ:

**ನೀವು ಸಾಹಿತ್ಯ ಸಮ್ಮೇಳನಾಧ್ಯಕ್ಷರಾಗಿ ಆಯ್ಕೆಯಾದಾಗ ನಿಮ್ಮ ಹಾಗೂ ಜನರ ಪ್ರತಿಕ್ರಿಯೆ ಯಾವ ರೀತಿಯಾಗಿತ್ತು?**

ನನಗಿಂತ ಹಿರಿಯರಾದ ಸಾಹಿತಿಗಳಿದ್ದರೂ ನನ್ನ ಸಾಹಿತ್ಯ ಸೇವೆಯನ್ನು ಮನಗಂಡು ಕ.ಸಾ.ಪ. ಕಾರ್ಯಕಾರಿ ಸಮಿತಿ ನನ್ನನ್ನು ಸಮ್ಮೇಳನದ ಅಧ್ಯಕ್ಷನನ್ನಾಗಿ

ಸರ್ವಾನುಮತದಿಂದ ಆಯ್ಕೆ ಮಾಡಿದಾಗ ಸಂತೋಷವಾಯಿತು. ನಿರ್ಲಿಪ್ತನಾಗಿದ್ದ ನನಗೆ ಕನ್ನಡದ ಜನ ತೋರಿಸಿದ ಪ್ರೀತಿ, ಗೌರವಗಳಿಗಾಗಿ ಸಹಜವಾಗಿಯೇ ಹರ್ಷವಾಯಿತು. ಕನ್ನಡ ನಾಡಿನ ಮೂಲೆ ಮೂಲೆಗಳಿಂದ ಸಾಹಿತಿಗಳು, ಅಭಿಮಾನಿಗಳು ಅಭಿನಂದನೆಯ ಪತ್ರಗಳನ್ನು ಬರೆದಿದ್ದಾರೆ. ಎಲ್ಲೆಡೆ ಸಂತಸವಾಗಿದೆ. ನಾನು ಸ್ವಭಾವತಃ ಸ್ನೇಹಜೀವಿ, ಯಾರಿಗೂ ಕೇಡನ್ನು ಬಯಸದವನು ನಾನು ಒಳ್ಳೆಯದನ್ನು ಗುರುತಿಸಿ, ಮೆಚ್ಚಿಕೊಳ್ಳುತ್ತ ಬಂದಿದ್ದೇನೆ. ಜೊತೆಯ ಲೇಖಕರ ಸಾಹಿತ್ಯವನ್ನು ಓದಿ ಸಂತೋಷಿಸುತ್ತ ಬಂದವನು. ನನ್ನ ತಂದೆ-ತಾಯಿ ಹಾಗೂ ನಾನು ಬೆಳೆದ ವಾತಾವರಣ, ನನ್ನ ಗುರು ಹಿರಿಯರ ಪ್ರಭಾವದಿಂದ ಪ್ರೀತಿ, ಅಂತಃಕರಣ ನನ್ನಲ್ಲಿ ಈ ಸಂಸ್ಕಾರವನ್ನುಂಟು ಮಾಡಿದೆ.

**ನಿಮ್ಮಲ್ಲಿ ಕಾವ್ಯಾಸಕ್ತಿ ಉಂಟಾದದ್ದು ಹೇಗೆ?**

ಪ್ರಾಥಮಿಕ ಶಾಲಾ ಶಿಕ್ಷಕರಾಗಿದ್ದ ನನ್ನ ತಂದೆಯವರು ಹಾಡಿಕೊಳ್ಳುತ್ತಿದ್ದ ತತ್ವಪದದ ನಾದಲಯ, ಹಳ್ಳಿಗಳಲ್ಲಿ ಹಾಡುತ್ತಿದ್ದ ಜನಪದ ಗೀತೆಗಳು ಈ ಆಸಕ್ತಿಗೆ ಮೂಲ ಪ್ರೇರಣೆ. ಹಾಗೆಯೇ ಧಾರವಾಡಕ್ಕೆ ಬಂದಾಗ ಬೇಂದ್ರೆ, ಕುವೆಂಪು, ಬೆಟಗೇರಿ ಮುಂತಾದವರ ಭೀವಗೀತೆಗಳ ಹಾಡುಗಾರಿಕೆ ನನ್ನ ಮೇಲೆ ಪ್ರಭಾವ ಬೀರಿದವು. ಧಾರವಾಡದ ಸಾಹಿತ್ಯಿಕ, ಸಾಂಸ್ಕೃತಿಕ ವಾತಾವರಣದಲ್ಲಿ ನನ್ನ ಮನಸ್ಸು ಅರಳತೊಡಗಿತು. ಹೈಸ್ಕೂಲಿನ ಮಿಸಲನಿಯಲ್ಲಿ ನನ್ನ ಮೊದಲ ಕವಿತೆಗಳು ಅಚ್ಚಾಗಿ ಬಂದಾಗ ನನಗೆ ಆನಂದವಾಯಿತು. ಕಾವ್ಯದ ಬಗೆಗೆ ಎಲ್ಲೆಲ್ಲೂ ಪ್ರೀತಿ ತುಂಬಿದ ನವೋದಯದ ಸಂಭ್ರಮದಲ್ಲಿ ನಾನು ಕಾವ್ಯದ ಅಭ್ಯಾಸ ಮಾಡಿ ಕವಿತೆಗಳನ್ನು ಬರೆಯತೊಡಗಿದೆ. ಆಗಿನ ಪ್ರಸಿದ್ಧ ಪತ್ರಿಕೆಗಳಾದ 'ಜೀವನ', 'ಜಯಂತಿ', 'ಜಯಕರ್ನಾಟಕ'ಗಳಲ್ಲಿ ಪ್ರಕಟಗೊಂಡಿದ್ದ ನನ್ನ ಕವಿತೆಗಳನ್ನು ನೋಡಿ ಮೆಚ್ಚಿಕೊಂಡಿದ್ದ ಹಿರೇಮಲ್ಲೂರ್ ಈಶ್ವರನ್ ತಮ್ಮ 'ಕಲ್ಪನಾ ಗ್ರಂಥಮಾಲೆ'ಯಲ್ಲಿ ಮೊದಲ ಕವಿತಾ ಸಂಗ್ರಹ 'ಕಾವ್ಯಾಕ್ಷಿ' (೧೯೪೯) ಪ್ರಕಟಿಸಿದರು. ಅದಕ್ಕೆ ವರಕವಿ ಬೇಂದ್ರೆ ಮುನ್ನುಡಿ ಬರೆದು ಹರಸಿದರು.

**ನಿಮ್ಮ ಕವಿಜೀವನದ ಬೆಳವಣಿಗೆಯ ವಿವಿಧ ಹಂತಗಳು ಯಾವುವು?**

ಬೇಂದ್ರೆಯವರು 'ಗೆಳೆಯರ ಗುಂಪು' ಕಟ್ಟಿದ ಹಾಗೆ ನಾವು ವಿದ್ಯಾರ್ಥಿಗಳಾಗಿದ್ದಾಗ 'ಕಾವ್ಯಾನುಭವ ಮಂಟಪ' ಆರಂಭಿಸಿ ಅದರಲ್ಲಿ ಕವಿತಾ ವಾಚನ, ಸಾಹಿತ್ಯಚರ್ಚೆ ಮಾಡುತ್ತಿದ್ದೆವು. ಬೇಂದ್ರೆ ಹಾಗೂ ಗೋಕಾಕರು ಕಾವ್ಯಾನುಭವ ಮಂಟಪದ ಉದ್ಘಾಟನೆ ಮಾಡಿ ನಮ್ಮ ಸಾಹಿತ್ಯಸಕ್ತಿಯನ್ನು ಪ್ರೋತ್ಸಾಹಿಸಿದರು. 'ಭಾವಜೀವಿ'ಗೆ ಮುನ್ನುಡಿ ಬರೆದ ಗೋಕಾಕರ ಮೆಚ್ಚುಗೆ ಪಡೆದ 'ಭಾವಜೀವಿ' ನನ್ನ ಕವಿ ಮನಸ್ಸಿನ ಬೆಳವಣಿಗೆಯ

ದಿಕ್ಕನ್ನು ಪ್ರತಿಬಿಂಬಿಸಿದೆ. ವಿದ್ಯಾರ್ಥಿ ಜೀವನದಲ್ಲಿ ಕವಿಯಾಗಿ ಬೆಳೆದ ನಾನು ಕನ್ನಡ ಎಂ.ಎ. ಪದವಿ ಪಡೆದು ವಿಶ್ವವಿದ್ಯಾಲಯದಲ್ಲಿ ಆಗತಾನೆ ಆರಂಭವಾದ ವ್ಯಾಸಂಗ ವಿಸ್ತರಣ ಪ್ರಕಟನ ವಿಭಾಗದ ಮುಖ್ಯಸ್ಥನಾಗಿ ನೇಮಕವಾಗಿ ನಿವೃತ್ತಿಯಾಗುವವರೆಗೆ ಅಲ್ಲಿಯೇ ಕಾರ್ಯ ಮಾಡಿದೆ. ನವೋದಯ, ನವ್ಯ, ನವ್ಯೋತ್ತರ ಸಂದರ್ಭದಲ್ಲೂ ನಾನು ಸಮಕಾಲೀನ ಸಂದರ್ಭಕ್ಕೆ ಸ್ಪಂದಿಸುತ್ತ ಕಾವ್ಯ ರಚನೆ ಮಾಡುತ್ತ ಬಂದಿದ್ದೇನೆ.

**ನಿಮ್ಮ ಸಾಹಿತ್ಯಿಕ ವ್ಯಕ್ತಿತ್ವಕ್ಕೆ ಪ್ರಸಾರಾಂಗದ ಕಾರ್ಯಗಳು ಸಹಕಾರಿಯಾದವೆ?**

ಪ್ರಸಾರಾಂಗದ ಕಾರ್ಯವ್ಯಾಪ್ತಿ ಬಹುಮುಖವಾದುದಾಗಿತ್ತು. ಪುಸ್ತಕ ಪ್ರಕಟಣೆ, ಗ್ರಾಮಾಂತರ ಪ್ರದೇಶದಲ್ಲಿ ಉಪನ್ಯಾಸದ ಏರ್ಪಾಡು, ಹೀಗೆ ನಿರಂತರವಾಗಿ ಶೈಕ್ಷಣಿಕ, ಸಾಹಿತ್ಯಿಕ, ಸಾಂಸ್ಕೃತಿಕ ಚಟುವಟಿಕೆಗಳನ್ನು ಆರಂಭಿಸಲಾಯಿತು. ಸಾಮಾನ್ಯ ಜನರು, ವಿದ್ವಾಂಸರು, ಹಾಗೂ ವಿದ್ಯಾರ್ಥಿಗಳಿಗಾಗಿ ದೊಡ್ಡ ಪ್ರಮಾಣದಲ್ಲಿ ಪುಸ್ತಕಗಳನ್ನು ಪ್ರಕಟಿಸಿ ರಾಜ್ಯದ ಉಳಿದ ವಿಶ್ವವಿದ್ಯಾಲಯಗಳ ಪ್ರಸಾರಾಂಗಕ್ಕಿಂತ ಸ್ವಲ್ಪ ಹೆಚ್ಚಿನ ಕಾರ್ಯ ನಮ್ಮಲ್ಲಿ ನಡೆಯಿತು. ಇಂಗ್ಲೀಷ್ ಹಾಗೂ ಕನ್ನಡದಲ್ಲಿ ವಿದ್ವತ್ ಪತ್ರಿಕೆಗಳನ್ನು ಪ್ರಾರಂಭಿಸಲಾಯಿತು. ಈ ಸಂದರ್ಭದಲ್ಲಿ ಅನೇಕ ಹಿರಿಯ ಸಾಹಿತಿಗಳ ಸಂಪರ್ಕ ನನಗೆ ಒದಗಿ ಬಂದಿತು. ಪ್ರಸಾರಾಂಗದ ಕಾರ್ಯ ಯೋಜನೆಗಳನ್ನು ನಡೆಸುತ್ತಲೇ ನನ್ನ ಸಾಹಿತ್ಯ ರಚನೆಯ ಕಾರ್ಯವೂ ಸಾಗುತ್ತ ಬಂತು. ಸಾಕಷ್ಟು ವೇಳೆ ದೊರೆಯದಿದ್ದರೂ ನನ್ನ ಸೃಜನಶೀಲತೆಗೆ ಅಂಥ ಯಾವ ಅಡೆತಡೆಗಳು ಉಂಟಾಗಲಿಲ್ಲ.

**ನವೋದಯ, ನವ್ಯಕಾವ್ಯದಲ್ಲಿ ತೊಡಗಿಸಿಕೊಂಡ ನೀವು ಬಂಡಾಯ ಕಾವ್ಯ ಮಾರ್ಗದಲ್ಲಿ ತೀವ್ರವಾಗಿ ಸ್ಪಂದಿಸಲಿಲ್ಲವೆಂಬ ಅಭಿಪ್ರಾಯವಿದೆ. ಇದಕ್ಕೆ ನಿಮ್ಮ ಪ್ರತಿಕ್ರಿಯೆ ಏನು?**

ಬಂಡಾಯ ಸಾಹಿತಿಗಳು ಹೇಳುವಂತೆ ಅಲ್ಲದಿದ್ದರೂ ನನ್ನ ರೀತಿಯಲ್ಲಿ ನಾನು ಸ್ಪಂದಿಸುತ್ತ ಬಂದಿದ್ದೇನೆ. ಬಂಡಾಯ ಒಂದು ಮನೋಧರ್ಮ. ಬಂಡಾಯ ಸಾಹಿತಿಗಳಷ್ಟು ತೀವ್ರವಾಗಿ ಘೋಷಣೆಯ ರೂಪದಲ್ಲಿ ಅದನ್ನು ನಾನು ಪ್ರಕಟಿಸಿರಲಿಕ್ಕಿಲ್ಲ. ಆದರೆ ಸಾಮಾಜಿಕ ಶೋಷಣೆಯ ಬಗೆಗೆ ನನ್ನ ಕಾವ್ಯದಲ್ಲಿ ಆಕ್ರೋಶಕ್ಕಿಂತ ಸಹಾನುಭೂತಿಪರವಾದ ನೋವಿನ ಲಯವನ್ನು ಕಾಣಬಹುದು. ನವೋದಯ ಸಾಹಿತ್ಯದ ಬಗ್ಗೆ ಆದರವಿಟ್ಟುಕೊಂಡ ನಮ್ಮನ್ನು ನವ್ಯದವರು ಕೆಲಕಾಲ ಪರಿಗಣಿಸಿರಲಿಲ್ಲ. ಸಾಮಾಜಿಕ ಪ್ರಜ್ಞೆಯಿದ್ದ ಕವಿಗೆ ಬಂಡಾಯದ್ದು ಹೊಸದೆನಿಸುವುದಿಲ್ಲ. ಅಲ್ಲದೆ ಈ ಮನೋಧರ್ಮ ವಚನಕಾರರಲ್ಲಿ. ಸರ್ವಜ್ಞನಲ್ಲಿ ಬೇರೆ ಕವಿಗಳಲ್ಲಿ ಇತ್ತು. ನನ್ನ ಆರಂಭದ ಕವಿತೆಗಳಲ್ಲೂ ಈ ಧ್ವನಿಯನ್ನು ಗುರುತಿಸಬಹುದು.

**ಕನ್ನಡ ಕಾವ್ಯ ಈಗ ಸ್ಥಗಿತರೂಪದಲ್ಲಿದೆಯೇ? ಹೊಸ ಅಲೆಯ ಹುಟ್ಟು ಆಗಲಿದೆಯೆ?**

ಯಾವ ಕಾವ್ಯಮಾರ್ಗವೂ ಬಹಳ ಕಾಲ ಸ್ಥಿರವಾಗಿ ಇರುವುದಿಲ್ಲ. ಈಗ ಅನೇಕ ಹೊಸ ಪ್ರತಿಭೆಗಳನ್ನು ನಾವು ಕಾಣುತ್ತೇವೆ. ದಲಿತ ಲೇಖಕರು ತಮ್ಮ ನೋವು ತೋಡಿಕೊಂಡು ಬರೆದರು. ಅದು ಹೊಸದಾಯಿತಲ್ಲದೆ ಹೊಸ ಪ್ರಜ್ಞೆಯನ್ನು ಜಾಗೃತಗೊಳಿಸಿತು. ಹಾಗೆಯೇ ಜೀವನದ ಬೇರೆ ಬೇರೆ ಕ್ಷೇತ್ರಗಳಿಂದ ಸಮಾಜದ ಕೆಳಸ್ತರಗಳಿಂದ ಲೇಖಕರು ಬರೆಯುತ್ತಿದ್ದಾರೆ. ಮುಸ್ಲಿಂ ಸಂವೇದನೆ, ಸ್ತ್ರೀ ಸಂವೇದನೆ, ಹೀಗೆ ಬೇರೆ ಬೇರೆ ಅನುಭವಪ್ರಪಂಚ ಸಾಹಿತ್ಯದಲ್ಲಿ ಪ್ರಕಟವಾಗುತ್ತಲಿದೆ. ಆದರೆ ಕನ್ನಡ ಸಾಹಿತ್ಯದ ಪರಂಪರೆಯ ಪ್ರಜ್ಞೆ ಎಲ್ಲ ಲೇಖಕರಿಗೂ ಅತ್ಯವಶ್ಯಕ.

**ಕನ್ನಡ ಕಾವ್ಯಮಾರ್ಗದ ಪರಿವರ್ತನೆಗೆ ಸಮ್ಮೇಳನಾಧ್ಯಕ್ಷರಾದ ನೀವು ಕರೆ ನೀಡುವಿರಾ?**

ಸಮಕಾಲೀನ ರಾಜಕೀಯ, ಸಾಮಾಜಿಕ ಸಂದರ್ಭದಲ್ಲಿ ನಮ್ಮ ಜೀವನ ಮೌಲ್ಯಗಳ ಕುಸಿತದಿಂದ ಹೊಸ ಕವಿಗಳು ಅನೇಕ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಜೀವನವನ್ನು ವ್ಯಾಪಿಸಿರುವ ಭ್ರಷ್ಟಾಚಾರ, ಭಯೋತ್ಪಾದನೆ, ಹಿಂಸೆ, ವಂಚನೆಯ ವಿಷಮ ಪರಿಸ್ಥಿತಿಯಲ್ಲಿ ಲೇಖಕರು ತೀವ್ರ ತಳಮಳಕ್ಕೆ ಸಿಲುಕಿದ್ದಾರೆ. ಇಂಥ ವಾತಾವರಣದಲ್ಲಿ ಕವಿಯಾದವನು ಬದಲಾದ ಪರಿಸ್ಥಿತಿಯಲ್ಲಿ ತಾತ್ಕಾಲಿಕ ಪ್ರತಿಕ್ರಿಯೆಯನ್ನು ಸೂಚಿಸುವುದು ಸರಿಯಲ್ಲ. ಸಂವೇದನೆ ಅನುಭವದ ಆಳಕ್ಕೆ ಇಳಿಯಬೇಕು. ಗಂಭೀರವಾದ ಚಿಂತನೆಯಲ್ಲಿ ಮನಸ್ಸು ತೊಡಗಬೇಕು. ವಿಜ್ಞಾನ ಯುಗದಲ್ಲಿ ಮನುಷ್ಯತ್ವದ ಅಸ್ತಿತ್ವಕ್ಕೆ ಧಕ್ಕೆಯಾಗುವ ಭೀತಿ ಇದೆ. ಆದ್ದರಿಂದ ಮಾನವ ಸಂಬಂಧಗಳನ್ನು ಗಾಢವಾಗಿ ಬೆಸೆಯುವ ನಾಡಿನ ಭವಿಷ್ಯ, ನಮ್ಮ ಭವಿಷ್ಯ ಬೆಳೆಯುವ ರೀತಿಯಲ್ಲಿ ಹೊಸ ಆಶಯಗಳನ್ನು ಕಾವ್ಯದಲ್ಲಿ ಪ್ರತಿಬಿಂಬಿಸಬೇಕಾಗಿದೆ. ವಾಣಿಜ್ಯೀಕರಣ ಹಾಗೂ ವಿದೇಶೀ ಬಂಡವಾಳಶಾಹಿಗಳ ಆಕ್ರಮಣದಿಂದ ನಮ್ಮ ಸಂಸ್ಕೃತಿ ಪರಂಪರೆಗೆ ಧಕ್ಕೆ ಬರಬಹುದಾಗಿದೆ. ವಸಾಹತುಶಾಹಿ ಇದ್ದಾಗ ನಮ್ಮ ನವೋದಯ ಕವಿಗಳು ಒತ್ತಡಕ್ಕೆ ಒಳಗಾಗದೆ ದೇಶೀಯ ಸಂಸ್ಕೃತಿಯ ನೆಲೆಗಳನ್ನು ಭದ್ರಗೊಳಿಸುವ ಸಾಹಿತ್ಯ ಮಾರ್ಗ ಹಿಡಿದರು. ಅದು ಅನುಕರಣೀಯವಾಗಿದೆ.

**ಹೊಸ ಕವಿಗಳ ಕಾವ್ಯಪಥದ ಬಗೆಗೆ ನಿಮ್ಮ ಅಭಿಮತವೇನು?**

ಉದಯೋನ್ಮುಖ ಲೇಖಕರು ತಮ್ಮ ಬರವಣಿಗೆಯ ಮಾಧ್ಯಮವನ್ನು ಸರಿಯಾಗಿ ಗುರುತಿಸಿಕೊಳ್ಳುವುದು ಅವಶ್ಯಕ. ಸಾಹಿತ್ಯಾಭ್ಯಾಸ, ಭಾಷೆ, ಲಯ ಅಭಿವ್ಯಕ್ತಿಯ

ತಿಳಿವಳಿಕೆಯಿಲ್ಲದೆ ಕವಿತೆ ಬರೆಯ ತೊಡಗಿದವರ ಸಂಖ್ಯೆ ಹೆಚ್ಚು. ಬದ್ಧತೆಗಿಂತ ಪ್ರಜ್ಞೆ ಹೆಚ್ಚು ಮುಖ್ಯವಾದದ್ದು. ಅದರಾಚೆಗೆ ದೃಷ್ಟಿಹರಿಸಿ ಆತ್ಮಾವಲೋಕನ ಮಾಡಿಕೊಳ್ಳುವ ಸೂಕ್ಷ್ಮ ಪ್ರಜ್ಞೆಯೇ ಇರಬೇಕು. ನೈಜಾನುಭವ ಹಾಗೂ ಪ್ರಾಮಾಣಿಕತೆಯಿಂದ ಬರೆದ ಕಾವ್ಯದಲ್ಲಿ ಮನುಷ್ಯತ್ವಧ ಉತ್ಕರ್ಷದ ಬಗೆಗೆ ಗಾಢ ಪ್ರೀತಿ ತುಂಬಿರಬೇಕು. ಸಮಕಾಲೀನತೆ ಹಾಗೂ ಸಾರ್ವಕಾಲೀನತೆಯನ್ನು ಪ್ರತಿಮಿಸುವ ಕಾವ್ಯ ಶ್ರೇಷ್ಠವಾಗಿರುತ್ತದೆ. ಜನರ ಹೃದಯದ ಧ್ವನಿಯಾಗುವ ಕಾವ್ಯ ನಮಗೆ ಪ್ರಸ್ತುತವಾಗಿದೆ.

**ಸಾಹಿತ್ಯದಿಂದ ಸಾಮಾಜಿಕ ಬದಲಾವಣೆ ಸಾಧ್ಯವೇ?**

ಪ್ರಪಂಚದ ಇತಿಹಾಸದಲ್ಲಿ ಸಾಹಿತ್ಯ ಕೃತಿಗಳು ಜನತೆಯ ಮನಸ್ಸನ್ನು ರೂಪಿಸುತ್ತ, ಬೆಳೆಸುತ್ತ ಬಂದುದನ್ನು ನಾವು ಕಾಣುತ್ತೇವೆ. ಶಿವಶರಣರು ವಚನಗಳ ಮೂಲಕ ಕ್ರಾಂತಿ ಮಾಡಿದರು. ರಶಿಯಾದಲ್ಲಿ, ಪ್ರಪಂಚದ ಬೇರೆ ಬೇರೆ ಭಾಗಗಳಲ್ಲಿ ಸಾಹಿತ್ಯ ಕೃತಿಗಳು ಕ್ರಾಂತಿಯ ಬೀಜಗಳಾದದ್ದನ್ನು ನೋಡಬಹುದು. ಈಗ ನಮ್ಮ ದೇಶ ಭ್ರಷ್ಟತೆಯ ಹಾದಿಯಲ್ಲಿ ಸಾಗಿರುವಾಗ ಲೇಖಕರು ಸಮಕಾಲೀನ ಸನ್ನಿವೇಶದಲ್ಲಿ ಮಹತ್ವದ ಪಾತ್ರ ವಹಿಸಬೇಕಾಗಿದೆ. ಸಮಗ್ರಕ್ರಾಂತಿಗೆ ಇದು ಸಕಾಲ.

**ಸಾಹಿತ್ಯಕ್ಷೇತ್ರದಲ್ಲಿ ಗುಂಪುಗಾರಿಕೆ, ರಾಜಕೀಯ ಬೆಳೆಯುತ್ತಿರುವ ಬಗೆಗೆ ನಿಮ್ಮ ಅಭಿಮತವೇನು?**

ಹೀಗೆ ಆಗಬಾರದು. ಆದರೆ ನಮ್ಮ ಇಡೀ ಜೀವನವನ್ನು ಅಮೂಲಾಗ್ರವಾಗಿ ರಾಜಕೀಯ ಆವರಿಸಿಬಿಟ್ಟಿದೆ. ಕವಿಗಳೂ ಲೇಖಕರೂ ಮನುಷ್ಯರೇ. ಆದರೆ ಜನ ಅವರ ಬಗೆಗೆ ಗೌರವ ಇಟ್ಟುಕೊಂಡಿರುತ್ತಾರೆ. ಅವರನ್ನು ದೇವತೆಗಳಂತೆ ಕಾಣುತ್ತಾರೆ. ಸಾಹಿತಿಗಳು ಜನರ ಭಾವನೆಗೆ ಅಪನಂಬಿಕೆಗೆ ಬರದಂತೆ ನಡೆದು ಕೊಳ್ಳಬೇಕು. ಜೀವನದ ಬಗೆಗೆ ಪರಿಪಕ್ವ ದೃಷ್ಟಿಯುಳ್ಳ ಲೇಖಕರು ಬದುಕನ್ನು ಹಸನುಗೊಳಿಸಲು ಪ್ರಯತ್ನಿಸಬೇಕೇ ಹೊರತು ಕೆಡಿಸುವ ಹಾದಿಯನ್ನಲ್ಲ. ಸಾಹಿತಿಗಳಿಗೆ ಪ್ರಶಸ್ತಿ ನೀಡುವಾಗ ರಾಜಕೀಯ ಮಾಡಬಾರದು. ಚಾರಿತ್ರ್ಯವುಳ್ಳವರು ಪ್ರತಿಭೆಯನ್ನು ಗುರುತಿಸುವ ಪ್ರಾಜ್ಞರು ಸಮಿತಿಯ ಸದಸ್ಯರಾಗಿದ್ದಾಗ ಇದು ಕಡಿಮೆಯಾಗಬಹುದು.

**ಸಾಹಿತಿಗಳು ರಾಜಕೀಯದಲ್ಲಿ ಭಾಗವಹಿಸಬಾರದೆ?**

ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಬುದ್ಧಿಜೀವಿಗಳ ಪಾತ್ರ ಮಹತ್ವದ್ದು. ಸಾಮಾನ್ಯ ಜನರಿಗೆ ರಾಜಕೀಯ ತಿಳವಳಿಕೆ ನೀಡುವ ಶಕ್ತಿ ಇದ್ದರೆ ಜೀವನವನ್ನು ನಿರ್ಮಲೀಕರಣಗೊಳಿಸುವ ಧ್ಯೇಯವಿದ್ದರೆ ರಾಜಕೀಯದಲ್ಲಿ ಪ್ರತ್ಯಕ್ಷ ಭಾಗವಹಿಸ

ಬಾರದು. ಪರಿಸ್ಥಿತಿಯ ಒತ್ತಡಕ್ಕೆ ಸಿಲುಕಿ ಬಂದರೆ ಉದ್ದೇಶ ಸಫಲವಾಗುವುದಿಲ್ಲ. ಕಾರಂತರು, ಅಡಿಗರು ಚುನಾವಣೆಯಲ್ಲಿ ಸೋತ ಉದಾಹರಣೆ ಇದೆ. ಮುಖ್ಯವಾಗಿ ತನ್ನ ಸೃಜನಶೀಲತೆಯನ್ನು ಕಾಪಾಡಿಕೊಂಡು ಬರವಣಿಗೆಯ ಮೂಲಕ ಎಚ್ಚರಿಸಿ ಶುದ್ಧೀಕರಣಗೊಳಿಸಿದರೆ ತಪ್ಪಿಲ್ಲ. ರಾಜಕೀಯ ಒಂದು ವಿಷವರ್ತುಲ. ದೂರದಲ್ಲಿ ನಿಂತಾಗ ಒಳಗಿನ ಸುಳಿಗಳು ಗೊತ್ತಾಗುವುದಿಲ್ಲ. ಲೇಖಕನ ಆದರ್ಶ ಅಂಥ ಸುಳಿಗೆ ಸಿಲುಕದಂತೆ ನೋಡಿಕೊಳ್ಳಬೇಕು.

**ಭ್ರಷ್ಟತೆಯ ಜಾಲದಲ್ಲಿ ಸಿಲುಕಿಕೊಂಡ ದೇಶವನ್ನು ಪಾರು ಮಾಡುವದು ಹೇಗೆ?**

ನಮ್ಮ ದೇಶದಲ್ಲಿ ಭ್ರಷ್ಟಾಚಾರ ಎಲ್ಲೆಡೆ ತುಂಬಿಕೊಂಡಿದೆ. ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಡಿದವರು, ಹಿರಿಯರು ನೈರಾಶ್ಯದ ವಾತಾವರಣದಲ್ಲಿದ್ದಾರೆ. ನಾವು ಲಂಚ ಕೊಡದಿದ್ದರೆ ಕೆಲಸವೇ ಆಗುವುದಿಲ್ಲ ಎಂಬ ಸ್ಥಿತಿಗೆ ಬಂದು ಅದರಲ್ಲಿ ಪಾಲುದಾರರಾಗುವ ಸಂದರ್ಭ ಬಂದಿರುವುದು ಶೋಚನೀಯ. ನಮ್ಮ ರಾಷ್ಟ್ರಕ್ಕೆ ಪ್ರಾಮಾಣಿಕ ನಾಯಕ ಬೇಕು. ಈ ಕಾಲಕ್ಕೆ ತಕ್ಕಂತೆ ಗಾಂಧಿ, ಜೆ.ಪಿ.ಯಂಥ ರಾಷ್ಟ್ರ ನಿರ್ಮಾಪಕರು ನಮಗೆ ಬೇಕಾಗಿದ್ದಾರೆ. ಭ್ರಷ್ಟಾಚಾರ,' ಜನಶೋಷಣೆ ನಿಲ್ಲಿಸಲು ಸಮಗ್ರಕ್ರಾಂತಿ ಆಗಬೇಕು. ಚುನಾವಣೆ ಎಂದರೆ ಹಣ. ಹಣದಾಸೆಯ ಜನರನ್ನು ಶಿಕ್ಷಿಸಲು ಶೇಷನ್‌ರಂಥ ಸುಧಾರಣಾವಾದಿಯನ್ನು ಜನ ಮೆಚ್ಚಿಕೊಂಡಿದ್ದಾರೆ.

**ನೀವು ನೋಡಿದ ಮೊದಲ ಸಾಹಿತ್ಯ ಸಮ್ಮೇಳನ ಹೇಗಿತ್ತು?**

ನಾನು ಹೈಸ್ಕೂಲ್ ವಿದ್ಯಾರ್ಥಿಯಾಗಿದ್ದಾಗ ರಬಕವಿಯಲ್ಲಿ ಬಸವನಾಳರ ಅಧ್ಯಕ್ಷತೆಯಲ್ಲಿ ಜರುಗಿದ ಸಾಹಿತ್ಯ ಸಮ್ಮೇಳನ ನಾನು ಮೊದಲ ಬಾರಿಗೆ ನೋಡಿದ್ದು. ಆಗ ಪ್ರಗತಿಶೀಲ ಸಾಹಿತ್ಯ ಚಳುವಳಿ ಜೋರಾಗಿತ್ತು. ಗೋಕಾಕರ ಅಧ್ಯಕ್ಷತೆಯಲ್ಲಿ ಜರುಗಿದ ಪ್ರಗತಿಶೀಲ ಸಾಹಿತ್ಯಗೋಷ್ಠಿಯಲ್ಲಿ ಅ.ನ.ಕೃ. ತರಾಸು, ಕುಮಾರ ವೆಂಕಣ್ಣ, ನಿರಂಜನ, ಮಾ.ನಾ. ಚೌಡಪ್ಪ ಮೊದಲಾದವರು ಭಾಗವಹಿಸಿದ್ದರು. ರಾಜರತ್ನಂ ಸಾಹಿತ್ಯಗೋಷ್ಠಿ ಅಧ್ಯಕ್ಷರಾಗಿದ್ದರು. ನವೋದಯ ಸಾಹಿತ್ಯದ ಹಿರಿಯರಿಗೂ, ಪ್ರಗತಿಶೀಲರಿಗೂ ವಾಗ್ವಾದ ನಡೆದದ್ದು ಆ ಸಮ್ಮೇಳನದ ನೆನಪು. ಸಾಹಿತ್ಯ ಸಮ್ಮೇಳನದಲ್ಲಿ ಸ್ವತಃ ಭಾಗವಹಿಸಿ ವಿಮರ್ಶಾಗೋಷ್ಠಿ ಹಾಗೂ ಕವಿಗೋಷ್ಠಿಯಲ್ಲಿ ನಾನು ಪಾಲ್ಗೊಂಡದ್ದು ಕಾರಂತರ ಅಧ್ಯಕ್ಷತೆಯಲ್ಲಿ ಜರುಗಿದ (೧೯೫೫)ಮೈಸೂರು ಸಾಹಿತ್ಯ ಸಮ್ಮೇಳನದಲ್ಲಿ. ಸ್ವಾಗತಾಧ್ಯಕ್ಷರಾಗಿದ್ದ ಕುವೆಂಪು ಅವರು ನಮ್ಮನ್ನೆಲ್ಲಾ ಕಂಡು ಪ್ರೀತಿಯ ಮಾತನಾಡಿಸಿದ್ದು ಈಗ ನೆನಪಾಗಿ ಉಳಿದಿದೆ. ಸಾಹಿತ್ಯ ಸಮ್ಮೇಳನಾಧ್ಯಕ್ಷರನ್ನು ಒತ್ತಾಯಪೂರ್ವಕವಾಗಿ ಒಪ್ಪಿಸುವ ಕಾಲವದು. ಆ ಕಾಲದಲ್ಲಿ

ಸಾಹಿತ್ಯ ಸಮ್ಮೇಳನಕ್ಕೆ ಸಾಮಾನ್ಯವಾಗಿ ಕನ್ನಡದ ಎಲ್ಲ ಸಾಹಿತಿಗಳು ಸೇರುತ್ತಿದ್ದರು. ಪರಸ್ಪರ ಆದರಿಂದ ಸಾಹಿತ್ಯ ಚರ್ಚೆ ಚಿಂತನೆ ನಡೆಸುತ್ತಿದ್ದರು ಸಾಹಿತ್ಯಿಕ ನವೋದಯದ ಉತ್ಸಾಹದ ವಾತಾವರಣವದು.

**ಸಾಹಿತ್ಯ ಸಮ್ಮೇಳನ ಜಾತ್ರೆಯಾಗುತ್ತಿದೆ ಎಂಬುದಕ್ಕೆ ನಿಮ್ಮ ಪ್ರತಿಕ್ರಿಯೆ ಏನು?**

ಕನ್ನಡ ನಾಡಿನ ಬೇರೆ ಬೇರೆ ಭಾಗದ ಸಾಹಿತಿಗಳು, ಅಭಿಮಾನಿಗಳು, ಸಾಹಿತ್ಯಪ್ರೇಮಿಗಳು ಒಂದೆಡೆ ಸೇರಿ ಸಾಹಿತ್ಯ, ಭಾಷೆ, ನೆಲ, ಜಲ, ಕನ್ನಡಿಗರ ಸಮಸ್ಯೆಗಳ ಬಗೆಗೆ, ಕನ್ನಡದ ಅಭಿವೃದ್ಧಿಯ ಬಗೆಗೆ ಚಿಂತನೆ ನಡೆಸಲು ಸಾಹಿತ್ಯ ಸಮ್ಮೇಳನ ಒಂದು ಮುಕ್ತ ಸಮಾವೇಶ. ಸಾಹಿತಿಗಳನ್ನು ನೋಡುವುದು, ಚರ್ಚಿಸುವುದು. ಪುಸ್ತಕಗಳನ್ನು ಖರೀದಿಸುವುದು, ಸಾಂಸ್ಕೃತಿಕ ಕಾರ್ಯಕ್ರಮ ವೀಕ್ಷಿಸುವುದು ಹೀಗೆ ಸಮ್ಮೇಳನಕ್ಕೆ ಒಂದು ಸಾಮೂಹಿಕವಾದ ವಿಶಿಷ್ಟತೆ ಇದೆ. ಸಾಹಿತ್ಯ ಸಮ್ಮೇಳನ ಕೇವಲ ಜಾತ್ರೆಯಾಗದಂತೆ ಸಾಹಿತ್ಯಿಕ, ಸಾಂಸ್ಕೃತಿಕ ಉತ್ಸವವಾಗುವಂತೆ ವಿವಿಧ ಗೋಷ್ಠಿಗಳ ಸ್ವರೂಪದಲ್ಲಿ ಅರ್ಥಪೂರ್ಣತೆ ಸಾಧಿಸಬಹುದು.

**ಹಾಗಿದ್ದರೆ ಸಾಹಿತ್ಯ ಸಮ್ಮೇಳನದಲ್ಲಿ ಯಾವ ಬದಲಾವಣೆಯನ್ನು ತರಲು ತಾವು ಸೂಚಿಸುತ್ತೀರಿ?**

ಸಾಹಿತ್ಯ ಸಮ್ಮೇಳನದ ಉದ್ಘಾಟನೆಯನ್ನು ಹಿರಿಯ ಸಾಹಿತಿಗಳು ಅಥವಾ ನೆರೆಯ ನಾಡಿನ ಶ್ರೇಷ್ಠ ಲೇಖಕರೇ ಮಾಡಬೇಕು. ಮಂತ್ರಿಗಳು ರಾಜಕೀಯ ವ್ಯಕ್ತಿಗಳಿಂದ ಮಾಡಿಸಬಾರದು. ರಾಜಕೀಯ ವ್ಯಕ್ತಿಗಳು, ಮಂತ್ರಿಗಳು ಬರುವವರೆಗೆ ಜನ ಕಾಯುತ್ತ ಕುಳಿತು ಬೇಸತ್ತು ಹೋಗುವ ಪ್ರಸಂಗ ಬರಬಾರದು. ರಾಜಕೀಯ ವ್ಯಕ್ತಿಗಳನ್ನು ಕರೆದಾಗ ಸಮಯ ಪಾಲನೆ ಅನಿವಾರ್ಯ ಕಾರಣಗಳಿಂದ ಅವರಿಗೂ ಆಗದೆ ಇರುವುದರಿಂದ ಮತ್ತು ಮಂತ್ರಿಗಳು ಅರ್ಧದಲ್ಲೇ ಎದ್ದು ಹೋಗಬೇಕಾಗುವುದರಿಂದ ಅವರಿಗೆ ತೊಂದರೆ ಕೊಡದೆ ಸಾಹಿತಿಗಳಿಂದಲೇ ಸಮ್ಮೇಳನ ಉದ್ಘಾಟಿಸುವಂತಾಗಬೇಕು. ಇದರಿಂದ ಸೋದರ ಭಾಷೆಯ ಲೇಖಕರೂ, ಹಿರಿಯ ಚಿಂತಕರೂ ನಮ್ಮ ಸಮ್ಮೇಳನ ನೋಡಿದಂತಾಗುತ್ತದೆ. ರಾಜಕೀಯ ವ್ಯಕ್ತಿಗಳು, ಮಂತ್ರಿಗಳು ಸಮ್ಮೇಳನದಲ್ಲಿ ಭಾಗವಹಿಸಬಾರದು ಎಂದಲ್ಲ, ಆದರೆ ಅವರನ್ನು ಕರೆದಾಗ ಆಗುವ ಅಲ್ಲೋಲ ಕಲ್ಲೋಲ ತಪ್ಪಿಸಲು ವ್ಯವಸ್ಥಿತವಾಗಿ ಸಮ್ಮೇಳನ ನಡೆಯಲು ಧೈರ್ಯಮಾಡಿ ಇದನ್ನು ಆರಂಭಿಸಬೇಕು. ಸಾಹಿತ್ಯ ಸಮ್ಮೇಳನದಲ್ಲಿ ಸಮ್ಮೇಳನದ ಅಧ್ಯಕ್ಷರ ಭಾಷಣಕ್ಕೆ ಮಹತ್ವವಿರುವುದರಿಂದ ಅದನ್ನು ಕೊನೆಯಲ್ಲಿ ಹಾಕುವ ಬದಲು ಆದಷ್ಟು ಮೊದಲೇ ಇಡುವುದು ಒಳ್ಳೆಯದು.

**ಕನ್ನಡನಾಡಿನಲ್ಲಿ ಕನ್ನಡದ ಅಭಿಮಾನವನ್ನು ಬೆಳೆಸುವ ಅಗತ್ಯ ಈಗಲೂ ಇದೆಯೇ?**

ಇದೇ ದೊಡ್ಡ ದುರಂತ. ಕನ್ನಡ ಆಡಳಿತ ಭಾಷೆ ಎಂದು ಘೋಷಣೆ ಆಗಿದ್ದರೂ ಹೇಳಿಕೊಳ್ಳುವಂಥ ಪ್ರಗತಿಯೂ ಆಗಿಲ್ಲ. ಕನ್ನಡವನ್ನು ಆಡಳಿತದಲ್ಲಿ ತರುವ ಬಗ್ಗೆ ಸರಕಾರ ಕಟ್ಟುನಿಟ್ಟಿನ ಕ್ರಮವನ್ನು ಕೈಕೊಳ್ಳಬೇಕು. ಕನ್ನಡ ಜಾರಿಗೆ ತರದವರ ಬಗೆಗೆ ಶಿಕ್ಷೆಯನ್ನು ನಿರ್ದಾಕ್ಷಿಣ್ಯವಾಗಿ ವಿಧಿಸಬೇಕು. ಕನ್ನಡ ಬಳಸುವವರಿಗೆ ಬಹುಮಾನ ನೀಡುವ ಮಾತು ಅರ್ಥವಿಲ್ಲದ್ದು. ಕನ್ನಡಿಗರ ಔದಾರ್ಯದ ಪರಿಣಾಮ ಅನೇಕ ಸಮಸ್ಯೆ ಸೃಷ್ಟಿಸಿದೆ. ಅನ್ಯ ಭಾಷಿಕರ ವಲಸೆಯನ್ನು ತಡೆಯಲು ತಕ್ಕ ಕ್ರಮ ಕೈಕೊಳ್ಳಬೇಕು. ಸರೋಜಿನಿ ಮಹಿಷಿ ವರದಿ ಬಂದು ಎಷ್ಟು ವರ್ಷ ಆದರೂ ಕನ್ನಡಿಗರಿಗೆ ಉದ್ಯೋಗ ಸಿಕ್ಕುತ್ತಿಲ್ಲ. ಬೆಂಗಳೂರಿನಲ್ಲಿ ಕನ್ನಡಿಗರ ಸಂಖ್ಯೆ ಕಡಿಮೆಯಾಗುತ್ತಿರುವುದು ಶೋಚನೀಯ ಸಂಗತಿಯಾಗಿದೆ. ಗಡಿನಾಡಿನಲ್ಲಿ ಕನ್ನಡ ಉಳಿಸುವುದಕ್ಕೆ, ಬೆಳೆಸುವುದಕ್ಕೆ ಸರಕಾರ ಶಾಶ್ವತ ಕ್ರಮ ಕೈಕೊಳ್ಳಬೇಕು.

**ಸಾಹಿತ್ಯ ಪರಿಷತ್ತು ಕ್ರಿಯಾಶೀಲವಾಗಲು ತನ್ನ ಧೋರಣೆಯಲ್ಲಿ ಬದಲಾವಣೆ ತರುವದು ಅವಶ್ಯವೇ?**

ಅಧ್ಯಕ್ಷರ ಕಾರ್ಯವಿಧಾನ, ಉತ್ಸಾಹ, ಚಟುವಟಿಕೆಯ ಮೂಲಕ ಪರಿಷತ್ತು ಕ್ರಿಯಾಶೀಲವಾಗುವುದು. ಸಾಹಿತ್ಯ ಸಮ್ಮೇಳನ ನಡೆಸುವುದೊಂದೇ ಪರಿಷತ್ತಿನ ಮುಖ್ಯ ಕಾರ್ಯಕ್ರಮವಾಗಿಬಿಟ್ಟಿದೆ ಎಂದು ಟೀಕೆಗಳನ್ನು ಮಾಡುವವರು ಪರಿಷತ್ತಿನ ಹೊರಗೆ ನಿಂತು ಟೀಕಿಸದೆ, ಒಳಗೆ ಬಂದು ಅದರ ಸಮಸ್ಯೆಗಳನ್ನು ಅರಿಯುವುದು ಅವಶ್ಯ. ಪರಿಷತ್ತು ಪಡೆಯುವ ಸರಕಾರದ ಧನ ಸಹಾಯ ಪರಿಷತ್ತಿನ ಸಿಬ್ಬಂದಿ ಸಂಬಳಕ್ಕೆ ಹೋದರೆ ಸಾಹಿತ್ಯ ಚಟುವಟಿಕೆ ಮಾಡುವದು ಹೇಗೆ? ಮುಧೋಳ ಸಾಹಿತ್ಯ ಸಮ್ಮೇಳನದಲ್ಲಿ ಮುಖ್ಯಮಂತ್ರಿಗಳು ಘೋಷಿಸಿದ ಆಶ್ವಾಸನೆ ಜಾರಿಗೆ ಬಂದರೆ ಒಳ್ಳೆಯದು. ಪರಿಷತ್ತಿನ ಚಟುವಟಿಕೆ ಜಿಲ್ಲೆ, ತಾಲ್ಲೂಕು, ಗ್ರಾಮೀಣ ಪ್ರದೇಶದಲ್ಲಿ ಅಧಿಕಗೊಳ್ಳಬೇಕು. ಸರಕಾರದ ಧನಸಹಾಯ ಪಡೆದುಕೊಂಡು ಕನ್ನಡದ ಮೌಲಿಕ ಗ್ರಂಥಗಳ ಪ್ರಕಟಣೆಯ ಕಾರ್ಯ ಪರಿಷತ್ತಿನ ಮೂಲಕ ನಡೆಯಬೇಕು. ಪುಸ್ತಕ ಪ್ರಕಟನೆ ಹಾಗೂ ಕನ್ನಡ ಸಾಹಿತ್ಯ ಪ್ರಸಾರ ಪರಿಷತ್ತಿನಿಂದ ಹೆಚ್ಚಾಗಿ ನಡೆಯಬೇಕು.

**ಸಾಹಿತ್ಯ ಸಮ್ಮೇಳನದಲ್ಲಿ ಕೈಕೊಂಡ ನಿರ್ಣಯಗಳು ಯಾಕೆ ಜಾರಿಗೆ ಬರುತ್ತಿಲ್ಲ?**

ಸಾಹಿತ್ಯ ಸಮ್ಮೇಳನದಲ್ಲಿ ಕೈಕೊಳ್ಳುವ ನಿರ್ಣಯಗಳು ಬಹಿರಂಗಾಧಿವೇಶನದಲ್ಲಿ ಮಂಡಿತವಾಗುತ್ತವೆ. ಅವು ಸಮಸ್ತ ಕನ್ನಡಿಗರ ಒತ್ತಾಸೆಯ ಅಭಿಪ್ರಾಯ. ಅದನ್ನು

ಸರಕಾರ ಪ್ರಜೆಗಳ ಧ್ವನಿ ಎಂದು ತಿಳಿದು ಜಾರಿಗೆ ತರಬೇಕು. ಜಾರಿಗೆ ತರುವಂತೆ ಮಾಡುವುದಕ್ಕೆ ತಜ್ಞರ ಸಮಿತಿ ನೇಮಿಸಿ ಸರಕಾರದ ಮೇಲೆ ಒತ್ತಡ ತರಬೇಕು. ಪರಿಷತ್ತಿನ ಪರಂಪರೆ ದೊಡ್ಡದು. ಅದಕ್ಕಿರುವ ಬಲ ಕನ್ನಡಿಗರ ತ್ಯಾಗದಿಂದ ಬಂದಿರುವಂಥದ್ದು. ಪರಿಷತ್ತಿಗೆ ಹೆಚ್ಚಿನ ಸಹಾಯಧನ ನೀಡಿ ಎಂದು ಕೇಳುವುದು ಪ್ರಜೆಗಳ ಹಕ್ಕಾಗಿದ್ದು ಅದು ಖಂಡಿತಾ ಭಿಕ್ಷೆ ಅಲ್ಲ.

**ಸಮ್ಮೇಳನಾಧ್ಯಕ್ಷರು ಉತ್ಸವಮೂರ್ತಿಗಳೇ?**

ಸಮ್ಮೇಳನಾಧ್ಯಕ್ಷರಿಗೆ ದೊಡ್ಡ ಜವಾಬ್ದಾರಿ ಇದೆ. ಕನ್ನಡ ಜನ ನೀಡುವ ಗೌರವದ ಹುದ್ದೆ ಅದು. ಸಾಹಿತ್ಯ ಸಮ್ಮೇಳನಾಧ್ಯಕ್ಷರು ಉತ್ಸವ ಮೂರ್ತಿಗಳಲ್ಲ. ಅವರು ಮುಂದಿನ ಸಮ್ಮೇಳನವಾಗುವವರೆಗೆ ಕನ್ನಡನಾಡಿನಾದ್ಯಂತ ಸಂಚರಿಸಿ ಕನ್ನಡ ಸಾಹಿತ್ಯ ಸಂಸ್ಕೃತಿಯ ಪ್ರಸಾರಕಾರ್ಯದಲ್ಲಿ ಪಾಲ್ಗೊಳ್ಳುವಂತೆ ಪರಿಷತ್ತು ನೋಡಿಕೊಳ್ಳಬೇಕು. ಹಾಗೆ ಕಾರ್ಯಕ್ರಮ ರೂಪಿಸಬೇಕು.

**ಕನ್ನಡ ಅನುಷ್ಠಾನದ ಬಗೆಗೆ ನಿಮ್ಮ ಅಭಿಮತವೇನು?**

ರಾಜ್ಯದಲ್ಲಿ ಕನ್ನಡದ ಅನುಷ್ಠಾನ ಕುಂಠಿತಗೊಂಡಿರುವುದು ವಿಷಾದದ ಸಂಗತಿ. ಹಿಂದೆ ಇದ್ದ ಕನ್ನಡ ಕಾವಲು ಸಮಿತಿಯ ಅಗತ್ಯ ಈಗಲೂ ಇದೆ. ಅದು ಮುಂದುವರಿಯಬೇಕಾಗಿತ್ತು. ಆಡಳಿತದಲ್ಲಿ ಕನ್ನಡವನ್ನು ಅನುಷ್ಠಾನಗೊಳಿಸುವ ಕಾರ್ಯ ತೀವ್ರ ಸ್ವರೂಪದಲ್ಲಿ ಆಗಬೇಕಾಗಿದ್ದರಿಂದ ಕನ್ನಡ ಕಾವಲು ಸಮಿತಿ ಮತ್ತೆ ಬೇರೆ ಹೆಸರಿನಲ್ಲಿ ಜಾರಿಗೆ ಬರಬೇಕು. ಕನ್ನಡ ಅಭಿವೃದ್ಧಿ ಪ್ರಾಧಿಕಾರ ಈಗ ಚುರುಕಾಗಿ ತನ್ನ ಸ್ವರೂಪದಲ್ಲಿ ಕೆಲಸ ಮಾಡುತ್ತಿದೆ. ಗಡಿನಾಡಿನಲ್ಲಿ ಕನ್ನಡ ಶಾಲೆಗಳ ದುರವಸ್ಥೆಯನ್ನು ಕೂಡಲೇ ಸರಿಪಡಿಸಬೇಕು. ಕನ್ನಡ ಅಧ್ಯಾಪಕರನ್ನು ಖಾಲಿ ಇದ್ದ ಶಾಲೆ ಕಾಲೇಜುಗಳಲ್ಲಿ ಕೂಡಲೇ ನೇಮಿಸಬೇಕು.

**ಕನ್ನಡ ಪುಸ್ತಕೋದ್ಯಮದ ಬಗೆಗೆ ನೀವು ನೀಡುವ ಸಲಹೆಗಳಾವುವು?**

ಗ್ರಂಥ ಪ್ರಕಟನೆ ಕಷ್ಟದ ಸ್ಥಿತಿಯಲ್ಲಿದೆ. ಮುದ್ರಣವೆಚ್ಚ, ಕಾಗದದ ಬೆಲೆ ಏರಿಕೆಯಿಂದಾಗಿ ಸಾಹಿತ್ಯ ಕೃತಿಗಳ ಪ್ರಕಟನೆಗೆ ಪ್ರಕಾಶಕರು ಮುಂದೆ ಬಾರದ ಸ್ಥಿತಿಯಿದೆ. ಪ್ರಕಟವಾದ ಪುಸ್ತಕಗಳು ಜನರಿಗೆ ಸರಿಯಾಗಿ ವಿತರಣೆಯಾಗುತ್ತಿಲ್ಲ. ಕನ್ನಡ ಪುಸ್ತಕಗಳನ್ನು ಜನಕೊಳ್ಳಲು ಸಿದ್ಧರಿದ್ದರೂ ಅವು ಅವರ ದೃಷ್ಟಿಗೆ ಬೀಳುವುದಿಲ್ಲ. ಪುಸ್ತಕ ಪ್ರಾಧಿಕಾರ ರಾಜ್ಯಾದ್ಯಂತ 'ಪುಸ್ತಕ ಯಾತ್ರೆ' ಕಾರ್ಯಕ್ರಮ ಹಾಕಿಕೊಂಡು, ಪುಸ್ತಕ ಜನರ ಕಣ್ಣಿಗೆ ಬೀಳುವಂತೆ ಮಾಡಿ, ಪುಸ್ತಕ ಪ್ರೀತಿ ಬೆಳೆಸಬೇಕು. ಜಿಲ್ಲಾ

ತಾಲ್ಲೂಕು ಮಟ್ಟದಲ್ಲಿ ಮಾರಾಟ ಮಳಿಗೆಗಳನ್ನು ತೆರೆಯಬೇಕು. ಕೇರಳದಲ್ಲಿರುವ ಸಹಕಾರಿ ಪುಸ್ತಕ ಪ್ರಕಾಶನಂಥ ಪ್ರಕಾಶನ ಸಂಸ್ಥೆ ನಮ್ಮ ನಾಡಿನಲ್ಲೂ ಅಸಿತ್ವಕ್ಕೆ ಬಂದಾಗ ಲೇಖಕನಿಗೆ ಅನುಕೂಲವಾಗಬಹುದು.

**ಸಾಹಿತ್ಯ ಸಮ್ಮೇಳನಾಧ್ಯಕ್ಷರಾಗಿ ನೀವು ಕನ್ನಡಿಗರಿಗೆ ನೀಡುವ ಸಂದೇಶವೇನು?**

'ಹೆಸರಾಯಿತು ಕರ್ನಾಟಕ ಉಸಿರಾಗಲಿ ಕನ್ನಡ' ಎಂದು ಹಿಂದೆಯೇ ನಾನು ಕವಿತೆಯಲ್ಲಿ ಹೇಳಿದ್ದೇನೆ. ಭಾಷೆ, ಸಂಸ್ಕೃತಿಯ ಅಭಿಮಾನಿಯಾದ ಕನ್ನಡಿಗ ನಿಜವಾದ ಭಾರತೀಯನೂ ಆಗಿರುತ್ತಾನೆ. ಕನ್ನಡ ಸಂಸ್ಕೃತಿಯಲ್ಲಿ ಒಳ್ಳೆಯ ಆದರ್ಶವಿದೆ. ಪ್ರತಿಯೊಬ್ಬರೂ ಅದರ ವಾರಸುದಾರರಾಗಲೂ ಪ್ರಯತ್ನಿಸಬೇಕು. ಇಂದು ಕನ್ನಡದ ಸಮಸ್ಯೆಗಳು ಬೃಹದಾಕಾರವಾಗಿ ಬೆಳೆದಿವೆ; ಅನ್ಯಭಾಷಿಕರ ವಲಸೆ, ಆಕ್ರಮಣದಿಂದ ಕನ್ನಡವನ್ನು ಉಳಿಸುವ, ಬೆಳೆಸುವ ಯೋಜನೆ ಮಾಡಬೇಕಾಗಿದೆ. ಗೋಕಾಕ ಚಳುವಳಿಯಂಥ ಸಾಮೂಹಿಕ ಹೋರಾಟದಲ್ಲಿ ಕವಿ ಕಲಾವಿದರು ಒಟ್ಟಾಗಿ ಹೋರಾಡಿದಂತೆ ಇಂದು ಕನ್ನಡಪರ ಸಂಘಸಂಸ್ಥೆಗಳು ಒಟ್ಟಾಗಿ ಸಾಮೂಹಿಕವಾಗಿ ಕಾರ್ಯಮಾಡಬೇಕಾಗಿದೆ. ಪರಸ್ಪರ ದೋಷಾರೋಪಣೆ, ವ್ಯಕ್ತಿ ಪ್ರತಿಷ್ಠೆಗಳನ್ನು ಬದಿಗೊತ್ತಿ ಒಂದಾಗಬೇಕು. ಕನ್ನಡದ ಜನ ಪ್ರಾದೇಶಿಕ ಭಿನ್ನತೆಯನ್ನು ಮರೆತು ಪ್ರೀತಿ, ಶ್ರದ್ಧೆಯಿಂದ ಕನ್ನಡ ಸಂಸ್ಕೃತಿಯ ಬೆಳವಣಿಗೆಗೆ ಶ್ರಮಿಸಬೇಕು. ಮಹತ್ವಾಕಾಂಕ್ಷೆಯಿಂದ ಒಳ್ಳೆಯದನ್ನು ಸಾಧಿಸಬೇಕು.

**ಬಿಡುಗಡೆಗೆ ಕಾಯುತ್ತಿರುವ ಪಾರಿವಾಳ**

ಕಣವಿಯವರು ಮಾನವೀಯ ಅಂತಃಕರಣ ಕಳಕಳಿಯುಳ್ಳ ಕವಿ. ಜಗಳ, ವಾಗ್ವಾದ, ವೈಮನಸು, ಪರಸ್ಪರ ದೋಷಾರೋಪಣೆ, ಗದ್ದಲದಿಂದ ದೂರವಿರಲು ಬಯಸುವವರು. ಅಂತಹ ಪ್ರಸಂಗಗಳು ಬಂದಾಗ ಜಾಣ್ಮೆಯಿಂದ ವಿವೇಕದಿಂದ ತಪ್ಪಿಸಲು ಪ್ರಯತ್ನಿಸುವವರು. ಬೆಂಗಳೂರಿನಲ್ಲಿ ಜರುಗಿದ ಒಂದು ವಿಚಾರ ಸಂಕಿರಣದಲ್ಲಿ ಕನ್ನಡ ಪ್ರಜ್ಞೆ ಹಾಗೂ ಭಾರತೀಯತೆಯ ಬಗೆಗೆ ಡಿ.ಆರ್. ನಾಗರಾಜರು ಆಡಿದ ಮಾತು ಅಲ್ಲಿದ್ದ ಸಾಹಿತಿಗಳಲ್ಲಿ ವಾಗ್ವಾದ ಸೃಷ್ಟಿಸಿತು. ಎಷ್ಟು ಹೊತ್ತಾದರೂ ವಾದ ಮುಗಿಯಲಿಲ್ಲ. ಬಿರುಸಿನ ವಾಗ್ವಾದ ಮುಂದುವರಿದಾಗ ಅಲ್ಲಿ ಮೌನವಾಗಿದ್ದ ಕಣವಿ ಎದ್ದು ವೇದಿಕೆಗೆ ಹೋಗಿ ಪಾರಿವಾಳ ಹೊರಗೆ ಹೋಗಲು ಚಡಪಡಿಸುತ್ತಿದೆ ಎಂದು ಚುಟುಕು ಕವಿತೆ ಓದಿ ಮಾತಿನ ಚಕಮಕಿಯ ಸದ್ದನ್ನು ಅಡಗಿಸಿದ್ದು ಇದಕ್ಕೊಂದು ಉದಾಹರಣೆಯಾಗಿದೆ.

**ಸಮ್ಮೇಳನಾಧ್ಯಕ್ಷರ ಸ್ತ್ರೀವಾದಿ ಚಿಂತನೆ**

ಕನ್ನಡದಲ್ಲಿ ಸ್ತ್ರೀವಾದಿ ಸಂವೇದನೆಯ ಕುರಿತು ಕೇಳಿದಾಗ ಕಣವಿ ಹೇಳಿದ್ದು ಹೀಗೆ: 'ಪುರುಷ ಸಾಹಿತ್ಯ, ಮಹಿಳಾ ಸಾಹಿತ್ಯ ಎಂದು ಭೇದ ಮಾಡುವುದು ಸರಿಯಲ್ಲ. ಅಂತಹ ಸಂದರ್ಭ ಈಗ ಒದಗಿ ಬಂದಿಲ್ಲ. ಸ್ತ್ರೀ ಪುರುಷರಲ್ಲಿ ಪರಸ್ಪರ ಪ್ರೀತಿ ತಿಳಿವಳಿಕೆ ಹೆಚ್ಚಬೇಕು. ಸ್ತ್ರೀ ತನ್ನ ಸ್ವಾತಂತ್ರ್ಯದೊಂದಿಗೆ ಸ್ತ್ರೀಯಾಗಿರುವಲ್ಲಿಯೇ ವಿಶೇಷವಾದ ಸೌಂದರ್ಯ ಸೊಗಸು ಇದೆ.' ಈ ಮಾತುಕತೆ ನಡೆಯುತ್ತಿರುವಾಗ ಒಳಗಿದ್ದ ಕಣವಿಯವರ ಬಾಳಸಂಗಾತಿ ಲೇಖಕಿ ಶಾಂತಾದೇವಿ ಕಣವಿಯವರು ಬಂದು ನಮ್ಮೊಡನೆ ಕೂಡಿಕೊಂಡು ಹೀಗೆ ಹೇಳಿದರು. 'ಸ್ತ್ರೀವಾದಿ ಚಿಂತಕರಲ್ಲಿ ಉಗ್ರವಾದಿಗಳೂ ಸೌಮ್ಯವಾದಿಗಳೂ ಇದ್ದಾರೆ. ಸ್ತ್ರೀಯ ಅಭಿವ್ಯಕ್ತಿ ಸ್ವಾತಂತ್ರ್ಯ ಸರಿಯೆ. ಸ್ತ್ರೀ ಪುರುಷ ಭೇದ ಕುಟುಂಬ ವ್ಯವಸ್ಥೆಯನ್ನೂ, ಸಮಾಜ ವ್ಯವಸ್ಥೆಯನ್ನೂ ಒಡೆಯಲು ದಾರಿ ಮಾಡಿಕೊಡುತ್ತದೆ. ಮಹಿಳೆ ತನ್ನ ವ್ಯಕ್ತಿತ್ವವನ್ನು ರೂಪಿಸಿಕೊಳ್ಳಬೇಕು. ಅದರೆ ಸ್ವಾತಂತ್ರ್ಯದ ಹೆಸರಿನಲ್ಲಿ ದುರುಪಯೋಗ ಮಾಡಿಕೊಳ್ಳುವುದು, ಸಲ್ಲದು. ಈ ವಿವೇಕ ಸ್ತ್ರೀವಾದಿ ಚಿಂತಕರಲ್ಲಿ ಅವಶ್ಯವಾಗಿ ಇರಬೇಕು.' ಬದುಕು ಹಾಗೂ ಸಾಹಿತ್ಯದಲ್ಲಿ ಸ್ತ್ರೀ ಪುರುಷ ಸಂಬಂಧಗಳ ಅನ್ಯೋನ್ಯತೆಯನ್ನು ಕಣವಿ ದಂಪತಿಗಳು ಪ್ರತಿಪಾದಿಸಿದ್ದು ಪರೋಕ್ಷವಾಗಿ ಅವರ ಬದುಕು ಅದಕ್ಕೆ ಒಂದು ನಿದರ್ಶನವಾಗಿ ನನಗೆ ಕಂಡು ಬಂದಿತು.

**'ಸಂಯುಕ್ತ ಕರ್ನಾಟಕ'**, ೨೮.೪.೧೯೯೬

*

# ಮಾನವೀಯ ನೆಲೆಗಳಿಗಾಗಿ ತುಡಿತ

● ನರೇಂದ್ರ ರೈ ದೇರ್ಲ

ಕನ್ನಡದ ಕಣವಿ ಹೂವಿನಂಥ ಕವಿ. ಇವರ ಮಾತು ಕೃತಿ ಎಲ್ಲವೂ ಹೀಗೆಯೇ. ಧಾರವಾಡದ ಇವರ ಮನೆ 'ಚೆಂಬೆಳಕಿನಲ್ಲಿ ನಳನಲಿಸುತ್ತಿರುವ ಹೂವುಗಳನ್ನು ಕಂಡಾಗ ಕವಿಪತ್ನಿ, ಖ್ಯಾತ ಕಥೆಗಾರ್ತಿ ಶಾಂತದೇವಿ ಕಣವಿ ಹೇಳುತ್ತಾರೆ-

"ಹಣದ ಬಗ್ಗೆ ತುಂಬಾ ಉದಾರರಾಗಿರುವ ನನ್ನ ಪತಿಯ ಜಿಪುಣತೆ ಕಂಡು ಬರುವುದು ಹೂವು ಹಣ್ಣುಗಳ ವಿಷಯದಲ್ಲಿ. ಮನೆಯ ಮುಂದಿನ ತೋಟದಲ್ಲಿ ಬಗೆ ಬಗೆಯ ಗಿಡಗಳನ್ನು ಕೈಯಾರೆ ಹಚ್ಚಿ ಜೋಪಾನ ಮಾಡುತ್ತಾರೆ. ಅವರ ಅನುಮತಿಯಿಲ್ಲದೆ ಒಂದು ಹೂವನ್ನೂ ನಾವು ಗಿಡದಿಂದ ಕೀಳುವಂತಿಲ್ಲ. ಬಹುಬಗೆಯ ಮಲ್ಲಿಗೆ, ಗುಲಾಬಿ, ಸಂಪಿಗೆ ಅರಳಿ ನಳನಳಿಸುತ್ತಿರುವ 'ಹೂವು ನೋಡುಗರ ಕಣ್ಣುಮನ ತುಂಬಲು ಗಿಡದಲ್ಲಿಯೇ ಇರಬೇಕು' ಎನ್ನುತ್ತಾರೆ ಅವರು."

ಈ ಹೂವುಗಳು ಕಣವಿಯವರ ಮುಖ ನೋಡುತ್ತವೆ. ಕಣವಿಯವರೂ ಹಾಗೆಯೇ. ಯಾವ ಗಿಡದಲ್ಲಿ ಯಾವ ಹೂವು, ಅವುಗಳ ರೂಪ, ಆಕಾರ, ಬಣ್ಣಗಳನ್ನು ಬಣ್ಣಿಸುತ್ತಾರೆ.

ಕಣವಿಯವರು ಶುದ್ಧ ಸಾಹಿತ್ಯದ ಸಾತ್ತ್ವಿಕ ವಕ್ತಾರರು. ಚೆಲುವಿನ, ಸೌಜನ್ಯದ ಕವಿ. ಇವರು ಎಂದಿಗೂ ಸಾಹಿತ್ಯದ ಒಂದೇ ಚಳುವಳಿಗೆ ಬದ್ಧರಾದವರಲ್ಲ. ಕಾಲದ ಗತಿಯಲ್ಲಿ ಕಾವ್ಯಕ್ಕೆ ಬೆರೆತು ಬರೆದವರು. ಸಾಹಿತ್ಯದ ಕುತರ್ಕಗಳಿಂದ ದೂರವಿದ್ದು ತನ್ಮೂಲಕ ಉದ್ಭವಿಸುವ ಸಹಜ ಅನುಭವಗಳಿಗೆ ಕಾವ್ಯದ ರೂಪ ಕೊಟ್ಟವರು. ಕ್ರಾಂತಿಯ ಹೆಸರಿನಲ್ಲಿ ಪೆನ್ನನ್ನು ಕತ್ತಿ ಮಾಡಿದವರಲ್ಲ. ಚಳುವಳಿಯ ಬಾವುಟ ಹಿಡಿದು ವಿಜೃಂಭಿಸಿದವರಲ್ಲ. ಹೀಗೆಂದು ಗುಣಾತ್ಮಕ ಸಾಂಘಿಕ ನೋವು, ಸಂವೇದನೆಗಳಿಂದ ದೂರನಿಂತವರೂ ಅಲ್ಲ. ಹೊಸಗನ್ನಡದ ಅರುಣೋದಯದಿಂದ ನಿನ್ನೆ, ಮೊನ್ನೆ, ಈಗ ಈ ಕ್ಷಣದವರೆಗೂ ಕವನಿಸಿದವರು. ಸಾಹಿತ್ಯದ ವಿಭಿನ್ನ ಪಂಥ ಪ್ರವೃತ್ತಿಗಳಲ್ಲಿ ನಿರಾಳವಾಗಿ ತೊಡಗಿದವರು.

ಕಣವಿ-ಭಾವಜೀವಿ. ಅವರಿಗೆ ಜೀವನ-ಕಾವ್ಯ ಬೇರೆ ಬೇರೆಯಲ್ಲ. ಈ ಸಮನ್ವಯ ಶ್ರದ್ಧೆ ಬೆರಗಿನದು. ನಿಸರ್ಗ, ಜಾನಪದ, ಗ್ರಾಮ್ಯಮೂಲ ಬದುಕಿನ ಸುಖ ದುಃಖದ ಸಂಭ್ರಮ ಇವರ ಮೇಲೆ ಬೀರಿದ ಪ್ರಭಾವ ಪ್ರಧಾನವಾದುದು. ನಿಸರ್ಗವನ್ನು ಬಿಟ್ಟರೆ ಬದುಕುವುದೇ ಸಾಧ್ಯವಿಲ್ಲವೇನೋ ಎಂಬ ಭಾವನೆ. ಶ್ರೀ ಸಾಮಾನ್ಯರ ಮೇಲೆ ಪ್ರೀತಿ, ವಿಶ್ವಾಸ ಇವೆಲ್ಲ ಇವರ ಕಾವ್ಯದ ಪ್ರೇರಣೆಗಳು.

ಕಣವಿ ಕಾವ್ಯಸಿದ್ಧಿಯಲ್ಲಿ ಪರಂಪರೆಯ ಮೌಲಿಕ ಮಿಳಿತವಿದೆ. ಅಲ್ಲಿ ಕುವೆಂಪು ಅವರ ಪ್ರಕೃತಿ ಪ್ರೀತಿಯಿದೆ. ಬೇಂದ್ರೆಯವರ ಜಾನಪದ ಸೊಗಸಿದೆ. ಮಧುರ ಚೆನ್ನರ ಅನುಭಾವವಿದೆ. ಗೋಕಾಕರ ಧ್ಯೇಯವಿದೆ. ನರಸಿಂಹ ಸ್ವಾಮಿಯವರ ಮಾಧುರ್ಯ ಸುಕುಮಾರತೆಯಿದೆ. ಪು.ತಿ.ನ.ರ ಚಿಂತನೆಯಿದೆ. ಎಲ್ಲದಕ್ಕಿಂತಲೂ ಇಲ್ಲಿನ ಹೆಚ್ಚುಗಾರಿಕೆ ಗ್ರಾಮಸಂಬಂಧದ ಕೊಂಡಿ. ಕಣವಿಯವರ ಕಾವ್ಯದ ಭಾಷೆ-ಧ್ವನಿ ಅವರ ವಿನಯ ಮನೋಧರ್ಮದ ಪ್ರತಿಬಿಂಬ. ಕಾವ್ಯದಂತೆ ಅವರ ಮಾತು ಕೂಡಾ ಜೀವಂತಧ್ವನಿ, ಮೆಲುನುಡಿ.

ಚೆನ್ನವೀರ ಕಣವಿಯವರ ಕಾವ್ಯದ ಇನ್ನೊಂದು ಶ್ರೇಷ್ಠತೆ ಅವರಲ್ಲೊಬ್ಬ ವಿಮರ್ಶಕನಿರುವುದು. ಪರಂಪರೆಯನ್ನು, ಸಮಕಾಲೀನರನ್ನು, ಸ್ವಂತ ಕಾವ್ಯವನ್ನು ಅವರ ಸಹೃದಯ ಮನಸ್ಸು ನಿರಂತರ ವಿಶ್ಲೇಷಣೆ ಮಾಡಿದೆ. 'ಸಾಹಿತ್ಯಚಿಂತನ' 'ಕಾವ್ಯಾನುಸಂಧಾನ', 'ಸಮಾಹಿತ' 'ಸಮತೋಲನ' ಅವರ ಪ್ರೌಢ ವಿಮರ್ಶಾ ಕೃತಿಗಳು. ಕಾವ್ಯದ ನಾದಗುಣ, ತನ್ಮಯತೆ ಈ ಗದ್ಯದಲ್ಲೂ ಇದೆ. ಈ ವಿಮರ್ಶೆ ಇಂಗ್ಲೀಷ್ ರೀಡರ್‌ಗಳ ವಿಮರ್ಶೆಯ ರೀತಿಯಲ್ಲ. ಅದು ಭಾರತೀಯ ಕಾವ್ಯ ಮೀಮಾಂಸೆ ಮತ್ತು ಪಾಶ್ಚಾತ್ಯ ಕಾವ್ಯ ವಿಮರ್ಶೆಯ ಆಳ ಅಧ್ಯಯನದ ಫಲವಾದ ಸಮತೋಲಿತ ನಿರ್ಣಯ.

ಕಣವಿಯವರ ಸಾಹಿತ್ಯ ಹೊಸಗನ್ನಡದುದ್ದಕ್ಕೂ ನಮ್ಮೊಳಗೆ ಫಲಿಸುತ್ತದೆ. ಈ ನಾಡಿನ ಸಾಹಿತ್ಯಿಕ, ಸಾಂಸ್ಕೃತಿಕ ಬದುಕಿನ ಹೆಗ್ಗಳಿಕೆಯೂ ಆಗುತ್ತದೆ.'ಕಾವ್ಯಾಕ್ಷಿ'ಯಿಂದ 'ಜೀನಿಯಾ'ವರೆಗಿನ ಅವರ ಬೆಳವಣಿಗೆ ಕನ್ನಡ ಕಾವ್ಯದ ಪ್ರಗತಿಯ, ವೈರುಧ್ಯದ ದಾಖಲೆಯೂ ಹೌದು. ಇದಕ್ಕೆ ಸ್ಪರ್ಧೆಯಿಲ್ಲ. ಯಾವುದೇ ಸಂದರ್ಭದಲ್ಲಿ ಅದು ಮುದುಡುವುದಿಲ್ಲ, ಮೂಲೆ ಸೇರುವುದಿಲ್ಲ. ಯಾಕೆಂದರೆ, ಜೀವನದ ನಿಜವಾದ ಸಂತೋಷ, ಸುಖ, ತೃಪ್ತಿ, ಸಮಾಧಾನಗಳು ಪ್ರೀತಿಯನ್ನೇ ಆಧರಿಸಿವೆ.

**ಸಂದರ್ಶನದ ಆಯ್ದ ಭಾಗ**

**೭೫ನೇಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಆಯ್ಕೆಯಾಗಿದ್ದೀರಿ. ಅಭಿನಂದನೆಗಳು, ಈ ಗೌರವದ ಬಗ್ಗೆ ನಿಮ್ಮ ಪ್ರತಿಕ್ರಿಯೆ ಏನು?**

ಇದು ನನಗೆ ತುಂಬಾ ಅನಿರೀಕ್ಷಿತ. ನನಗಿಂತಲೂ ಹಿರಿಯರಾದವರು, ಸಾಹಿತ್ಯಕ್ಷೇತ್ರದಲ್ಲಿ ಸಾಕಷ್ಟು ಕೆಲಸ ಮಾಡಿದವರು ಇದ್ದಾರೆಂಬ ಅರಿವು ನನಗಿದೆ. ಆದರೆ ಈ ಆಯ್ಕೆ ಸರ್ವಾನುಮತದ್ದಾಗಿರುವುದರಿಂದ ನಾನು ಅದನ್ನು ಅತ್ಯಂತ ನಮ್ರತೆಯಿಂದ ಸ್ವೀಕರಿಸಿದ್ದೇನೆ.

**ನಮ್ಮ ಬಹುಪಾಲು ಸಮ್ಮೇಳನಾಧ್ಯಕ್ಷರು ೫೦-೬೦ ವರ್ಷಗಳ ಹಿಂದಿನ ಅಧ್ಯಕ್ಷರು ಹೇಳಿದ್ದನ್ನೇ ಮತ್ತೆ ಮತ್ತೆ ಹೇಳುತ್ತಿದ್ದಾರೆ. ಅದೇ ಸಾಹಿತ್ಯ ಪ್ರಂಥಗಳ ಬಗ್ಗೆ, ಅದೇ ಸಾಹಿತ್ಯ ರಾಜಕೀಯಗಳ ಬಗ್ಗೆ, ಅದೇ ಸರಕಾರದ ನಿಷ್ಕ್ರಿಯತೆಯ ಬಗ್ಗೆ, ಅದೇ ಎಚ್ಚರಿಕೆ, ಅದೇ ತೀರ್ಮಾನಗಳು. ಈ ಬಾರಿ ಇದಕ್ಕಿಂತ ಭಿನ್ನವಾಗಿ ನಿಮ್ಮ ನಿಲುವು ಏನು?**

ಜನತೆಯ ಮರೆವು ಹಾಗೂ ಸರಕಾರದ ಕಿವುಡುತನದಿಂದಾಗಿ, ನಾಡುನುಡಿಯ ಅಭಿವೃದ್ಧಿಯ ದೃಷ್ಟಿಯಿಂದ ಕೆಲವು ಮಾತುಗಳನ್ನು ಅವು ಈಡೇರುವವರೆಗೆ ಹೇಳುತ್ತಲೇ ಇರಬೇಕಾದುದು ಅನಿವಾರ್ಯ. ಕೆಲವರಾದರೂ ಆಗೀಗ ಹೊಸ ವಿಚಾರಗಳನ್ನು, ಹೊಸ ಧೋರಣೆಗಳನ್ನು ವ್ಯಕ್ತಪಡಿಸಿರುವುದನ್ನು ಅಲ್ಲಗಳೆಯುವಂತಿಲ್ಲ.

ಸಾಹಿತ್ಯದ ಹಾಗೂ ನಾಡುನುಡಿಯ ಸದ್ಯದ ಸ್ಥಿತಿ ಗತಿಯ ವಿಮರ್ಶಾತ್ಮಕ ನೋಟದೊಂದಿಗೆ ಮುಂದಿನ ದಾರಿಯ ಬಗೆಗೆ ಚಿಂತನೆ ಮಾಡಿದಾಗ ಹೊಳೆದಿರುವ ಕೆಲವು ವಿಚಾರಗಳನ್ನು ನಾನು ಪ್ರಸ್ತಾಪಿಸಬಹುದು. ಏನು ಹೇಳಿದರೂ ಅದು ಪರಸ್ಪರ ಸಮಾಲೋಚನೆ ಹಾಗೂ ಸಹಚಿಂತನೆಯ ಭಾಗವಾಗಿರುತ್ತದೆಯೇ ಹೊರತು ಉಪದೇಶಾತ್ಮಕವಾಗಿರುವುದಿಲ್ಲ.

**ನಿಮ್ಮ ಕಾವ್ಯ ಜೀವನದ ಆರಂಭದ ಬಗ್ಗೆ, ಸಾಹಿತ್ಯ ಸೃಷ್ಟಿಗೆ ಪ್ರೇರಣೆಗಳ ಬಗ್ಗೆ ಹೇಳುವಿರಾ?**

ನಾನು ಹಳ್ಳಿಯಲ್ಲಿ ಹುಟ್ಟಿ ಬೆಳೆದವನು. ಆಗಿನ ಹಳ್ಳಿ ಅಂದ್ರೆ ಸುಮಾರು ೫೦-೬೦ ವರ್ಷಗಳ ಹಿಂದಿನ ಕಥೆಯಿದು. ಅಲ್ಲಿ ತೀವ್ರ ಸ್ಪಂದನಕ್ಕೊಳಗಾಗಿ ಬಾಲ್ಯವನ್ನು ಕಳೆದವನು. ಊರನ್ನು ಆವರಿಸಿದ ಕಪ್ಪತಗುಡ್ಡದ ಸಾಲು, ಎಲೆವಳ್ಳಿ ತೋಟಗಳು, ಬಯಲು ಸೀಮೆಯ ಹಸುರು ಹೊಲಗಳು, ಎತ್ತರದ ಜೋಳದ ಬೆಳೆ, ಎರೆಹೊಲದಲ್ಲಿ ಹತ್ತಿ, ಗೋಧಿ, ಕುಸುಬೆ ಬೆಳೆಗಳು; ಸುಗ್ಗಿಯ, ಹಬ್ಬ ಹುಣ್ಣಿಮೆಗಳ ಹಿಗ್ಗು, ದಿನವಿಡೀ ಬಿಡುವಿಲ್ಲದ ದುಡಿತ, ಕೆಲಸದೊಂದಿಗೆ ಹಾಡುಪಾಡಿನ ಧ್ವನಿ ಇವುಗಳೊಂದಿಗೆ ನನ್ನದೂ ಒಂದು ರೀತಿಯ ತನ್ಮಯತೆ ಇತ್ತು.

ಎಲೆವಳ್ಳಿ ತೋಟದ ಕಪಲಿ ಹೊಡೆವ 'ಗಿರಕೂ ಗಿರಕೂ'ನಾದ ದೂರದಿಂದಲೇ ನನ್ನನ್ನು ಕರೆಯುತ್ತಿತ್ತು. ಊರಿನ ಸಮೀಪದ ಲಂಬಾಣಿ ತಾಂಡೆಗಳು, ಅವರ ಭಾಷೆ,

ಕುಣಿತ, ವೇಷ, ಹಾಡು ಎಲ್ಲವೂ ವಿಸ್ಮಯಕರ. ಗ್ರಾಮದೇವತೆಯ ಪಲ್ಲಕ್ಕಿಸೇವೆ, ಆಗ ನಡೆಯುವ ಡೊಳ್ಳಿನ ಹಾಡು, ಕರಡಿಮಜಲು, ಕಹಳೆ-ಈ ಸಂಭ್ರಮ. ಒಕ್ಕಲುತನದ ದುಡಿಮೆ ಎಲ್ಲವೂ ನನ್ನ ಜೀವನದ ಅವಿಭಾಜ್ಯ ಅಂಗವೇ ಆಯಿತು. ಹೀಗೆ ಹಳ್ಳಿಯ ಪರಿಸರ, ಸುತ್ತು ಪ್ರಕೃತಿಯ ಸುಖ-ದುಃಖ-ಸಂಭ್ರಮಗಳು ನನ್ನ ಮೇಲೆ ಬೀರಿದ ಪ್ರಭಾವ ಗಟ್ಟಿಯಾದುದು, ಪರಿಣಾಮಕಾರಿಯಾದುದು.

**ಕಾವ್ಯದ ಎಳೆ ಚಿಗುರಿದ ಬಗ್ಗೆ....**

೧೯೩೮ರಲ್ಲಿ ನಾನು ಶಿಕ್ಷಣಕ್ಕೆಂದು ಧಾರವಾಡ ಹತ್ತಿರದ ಗರಗಕ್ಕೆ ಬಂದೆ. ಅದು ಸ್ವಾತಂತ್ರ್ಯ ಚಳುವಳಿಗೆ ಕಾವೇರುತ್ತಿದ್ದ ಕಾಲ. ನಾವು ಶಾಲೆಯ ಹುಡುಗರು ಪ್ರಭಾತ ಫೇರಿಯಲ್ಲಿ ಒಟ್ಟಾಗುತ್ತಿದ್ದೆವು. ಆಗ ನಾಡ ಹಾಡುಗಳನ್ನು ಹಾಡುವುದರಲ್ಲಿ ನಾನು ಮುಂದಾಗುತ್ತಿದ್ದೆ. ಅವುಗಳ ದಾಟಿಯಲ್ಲಿಯೇ ಆಗ ಒಂದೆರಡು ಪದ್ಯಗಳನ್ನು ಬರೆದ ನೆನಪು. ಒಟ್ಟಾರೆ ಅಂದಿನ ಪರಿಸ್ಥಿತಿ ನನ್ನಲ್ಲಿ ದೇಶಭಕ್ತಿಯ ಕಾವನ್ನು ಹುಟ್ಟಿಸಿತು. ಮುಂದೆ ಧಾರವಾಡಕ್ಕೆ ಬಂದೆ. ಅಲ್ಲಿ ಮುರುಘಾಮಠದ ವಾಸ್ತವ್ಯ ಕೆಲಮಟ್ಟಿಗೆ ಪ್ರಭಾವಿತವಾಯಿತು. ವಚನ ಸಾಹಿತ್ಯ, ಭಕ್ತಿ ಸಾಹಿತ್ಯದ ಕುರಿತು ನನ್ನ ಆಸಕ್ತಿ ಬಲವಾಯಿತು. ಧಾರವಾಡದ ಇಡೀ ವಾತಾವರಣ ಅಂದು ಸಾಹಿತ್ಯಮಯವಾಗಿತ್ತು. ಬೇಂದ್ರೆ, ಬೆಟಗೇರಿ, ಕುವೆಂಪು ಕಾವ್ಯ ಅಂದು ಈ ಮಣ್ಣಿನಲ್ಲಿ ದಟ್ಟವಾಗಿ ಸೇರಿತ್ತು. ಒಳ್ಳೆಯ ಪತ್ರಿಕೆಗಳಿದ್ದವು. 'ಜಯಂತಿ', 'ಜೀವನ', 'ಜಯಕರ್ನಾಟಕ'ಗಳಿದ್ದವು. ಇವುಗಳಲ್ಲಿ ಕವಿತೆಗಳು ಪ್ರಕಟವಾಗತೊಡಗಿದಂತೆ ಆತ್ಮವಿಶ್ವಾಸ ಹೆಚ್ಚಾಯಿತು. ನಾನು, ಕುರ್ತುಕೋಟಿ, ಶಂಕರ ಮೊಕಾಶಿ ಮೊದಲಾದವರು ಸೇರಿಕೊಂಡು ದಿನಾ ಚರ್ಚಿಸುತ್ತಿದ್ದೆವು. ಇದನ್ನು ನಾವೇ 'ಕಾವ್ಯಾನುಭವ ಮಂಟಪ' ಎಂದು ಕರೆದೆವು. ಕರ್ನಾಟಕದ ಏಕೀಕರಣ ಚಳುವಳಿಗೂ ಧಾರವಾಡವೇ ಕೇಂದ್ರವಾಗಿದ್ದರಿಂದ ನಾಡು-ನುಡಿಯ ಬಗೆಗಿನ ಪ್ರೀತಿ, ಅಭಿಮಾನ ಸಹಜವಾಗಿಯೇ ನನ್ನ ಕಾವ್ಯದ ಮೂಲಸೆಲೆಗಳಲ್ಲಿ ಒಂದಾಯಿತು.

**ಬೇಂದ್ರೆಯವರ ಪ್ರತ್ಯಕ್ಷ ಪರಿಚಯ, ಅವರಲ್ಲಿ ನಿಮ್ಮ ಒಡನಾಟ ಯಾವ ರೀತಿಯದು?**

ನಮ್ಮ 'ಕಾವ್ಯನುಭವ ಮಂಟಪ'ಕ್ಕೆ ಬೇಂದ್ರೆ ಗೋಕಾಕ್ ಕೂಡಾ ಬಂದಿದ್ದರು. ಬೇಂದ್ರೆಯವರೇ ನನ್ನ ಮೊದಲ ಕವಿತಾ ಸಂಕಲನ 'ಕಾವ್ಯಾಕ್ಷಿಗೆ' ಮುನ್ನುಡಿ ಬರೆದರು. ಆಗ ನನಗೆ ಅವರ ಪರಿಚಯ ಆಗಿರಲಿಲ್ಲ. ತುಂಬಾ ಪ್ರೋತ್ಸಾಹ ನೀಡಿದರು. ಅವರ ಕಾವ್ಯವನ್ನು ಅರಗಿಸಿಕೊಳ್ಳುತ್ತಲೇ ನಾನು ನನ್ನ ಭಾವಾಭಿವ್ಯಕ್ತಿಗೆ ಪ್ರಯತ್ನಿಸಿದೆ.

**ಇಡೀ ರಾಜ್ಯದಲ್ಲೇ, ಇಂದಿಗೂ ಈ ಧಾರವಾಡದಲ್ಲಿ ಸಾಹಿತ್ಯಿಕ, ಸಾಂಸ್ಕೃತಿಕ ಚಟುವಟಿಕೆಗಳು ಜೀವಂತವಾಗಿ, ಪರಂಪರೆಗೆ ಹತ್ತಿರವಾಗಿ ಉಳಿದಿವೆ ಅನ್ನಿಸುತ್ತದೆ. ಈ ನೆಲದ ಸಾರಸತ್ತ್ವವನ್ನು ಮೈಗೂಡಿಸಿಗೊಂಡ ಕವಿಯಾಗಿ, ವಿಮರ್ಶಕರಾಗಿ ಈ ಬಗ್ಗೆ ನಿಮ್ಮ ಅಭಿಪ್ರಾಯವೇನು?**

ಹಿಂದಿನ ಕಾಲ-ಅದೊಂದು ಸುಯೋಗದ ಕಾಲ. ಇಲ್ಲಿ ಬರುವವರೆಲ್ಲ ದೊಡ್ಡವರು. ಅವರನ್ನು ನೋಡಬೇಕು, ಮಾತನಾಡಿಸಬೇಕು ಎಂಬ ಉತ್ಸಾಹ ಎಲ್ಲರಿಗೂ ಇತ್ತು. ಈಗ ಇರುವಂಥ ಗುಂಪು, ಪಂಥ ರಾಜಕೀಯಗಳಿರಲಿಲ್ಲ. ಸಾಹಿತ್ಯ-ಸಾಹಿತಿಗಳನ್ನು ಕೇಳಬೇಕು, ನೋಡಬೇಕು ಎಂಬ ವಾತಾವರಣ ಸಾರ್ವತ್ರಿಕವಾಗಿತ್ತು. ಅವರಿಗೆ ಗೌರವ ಕೊಡಬೇಕೆಂಬ ಭಾವನೆ ಇತ್ತು. ಆದರೆ ಇಂದಿನ ಸಾಹಿತ್ಯದಲ್ಲಿ ಬೇರೆ ಬೇರೆ ಗುಂಪು, ಪಂಥ, ಚಳುವಳಿಗಳಿವೆ. ಬೇರೆ ಬೇರೆ ವಿಚಾರಗಳ ವೇದಿಕೆಗಳಿವೆ. ಆಗ ಯಾವುದೇ ಕಾರ್ಯಕ್ರಮವಿರಲಿ ಅದಕ್ಕೆ ಎಲ್ಲರೂ ಬರುತ್ತಿದ್ದರು. ಈಗ ಎಲ್ಲದಕ್ಕೂ ಇಂತಿಷ್ಟೇ ಎಂದು ಸಂಬಂಧಿಸಿದವರು ಮಾತ್ರ ಬರುತ್ತಾರೆ. ಅಂದಿನ ಮುಕ್ತತೆ, ಗುಣಗೌರವ, ಸಾರ್ವತ್ರಿಕತೆ ಈಗ ಎಲ್ಲಿದೆ ಹೇಳಿ?

**ಗುಣ ಸ್ವೀಕಾರದೃಷ್ಟಿಯ ದ್ವಂದ್ವ-ಕೊರತೆಯಿಂದ ಸಾಹಿತ್ಯದಲ್ಲಿ ಸಮಷ್ಟಿ ಸಾಧ್ಯವೇ?**

ಖಂಡಿತ ಇದೊಂದು ಅಪಾಯ. ಯಾಕೆಂದರೆ ಇಂದು ಬುದ್ಧಿಜೀವಿ ಅನ್ನಿಸಿಕೊಂಡವರ ಮನಸ್ಸು ನೇರವಾಗಿರದೆ ಯಾವುದೋ ಒಂದು ರೀತಿಯಲ್ಲಿ, ಯಾವುದೋ ಒಂದು ವಿಚಾರದಲ್ಲಿ, ಯಾವುದೋ ಒಂದು ಪಂಥ'ದಲ್ಲಿ ತೊಡಗಿಕೊಂಡಿರುತ್ತದೆ. ಆಯಾಯ ಚೌಕಟ್ಟಿನಲ್ಲೇ ಅವರು ವಿಚಾರ ಮಾಡುತ್ತಾರೆ. ಮುಕ್ತತೆ ಸಮಷ್ಟಿ ಅಂದ್ರೆ ನಮ್ಮ ಮನಸ್ಸು ಎಲ್ಲಾ ವಿಚಾರಗಳಿಗೂ ತೆರೆದಿಡುವುದು. ಆಗ ಮಾತ್ರ ನಾವು ಬೆಳೆಯಲು ಸಾಧ್ಯ. ನಾವು ನಮ್ಮ ಮನಸ್ಸಿಗೆ ನಿರ್ಬಂಧ ಹಾಕಿಕೊಂಡರೆ ಬೌದ್ಧಿಕ ವಿಕಾಸ ಸಾಧ್ಯವೇ ಇಲ್ಲ. ನಮ್ಮ ಅಭಿಪ್ರಾಯ ಧೋರಣೆ ಬದಲಾಗಬೇಕಾದರೆ, ನಾವು ಬೆಳೆಯ ಬೇಕಾದರೆ ಎಲ್ಲದಕ್ಕೂ ಸ್ಪಂದಿಸಬೇಕು. ಎಲ್ಲದಕ್ಕೂ ನಾವು ತೆರೆದುಕೊಂಡಾಗ ಮಾತ್ರ ಮಾನಸಿಕ ತಿಕ್ಕಾಟ ಆರಂಭವಾಗುತ್ತದೆ. ಆದರಿಂದ ಒಂದು ಹೊಳಪು ಬರುತ್ತದೆ. ಹೀಗೆಂದರೆ ನಾವು ಎಲ್ಲರಿಗೂ, ಎಲ್ಲದಕ್ಕೂ ಮನ ಸೋಲುತ್ತೇವೆ ಎಂದರ್ಥವಲ್ಲ, ತನ್ನಲ್ಲಿ 'ತನ್ನದೂ' ಎಂಬುದೂ ಒಂದು ಇರುತ್ತದೆ. ಇದು ಸ್ಥಿರವಾಗಬೇಕಾದರೆ ಬೇರೆಯ ವಿಷಯಗಳಿಗೂ ಮನಸ್ಸು ಕೊಡಬೇಕು. ಯಾಕೆಂದರೆ ಈ ಜಗತ್ತು ಇಂದು ತೀವ್ರವಾಗಿ ಬೆಳೆಯುತ್ತಿದೆ. ಬದಲಾಗುತ್ತಿದೆ. ನನ್ನದು ಮೊದಲಿಂದಲೂ ಇದೇ ದೃಷ್ಟಿ. ಇದನ್ನು ಗುಣಸ್ವೀಕಾರ ದೃಷ್ಟಿ ಎನ್ನುತ್ತೇನೆ.

**ಕನ್ನಡ ಸಾಹಿತ್ಯ ಪರಂಪರೆ, ಮೌಲ್ಯಕ್ಕೆ ನಿಷ್ಠನಾಗಿದ್ದುಕೊಂಡೇ ಹೊಸತರ ಸ್ವೀಕಾರ ಆಗಬೇಕೆ?**

ನಾನು ಹೊಸತನ್ನು ಆಶಿಸುವುದು ಇದೇ ಮಾದಿರಿಯಲ್ಲಿ. ಆದುದರಿಂದಲೇ ನವ್ಯ, ಬಂಡಾಯ, ದಲಿತ, ಸ್ತ್ರೀವಾದಿ ಆಂದೋಲನಗಳು ಪರಂಪರೆಗೆ ಹೊರತಾಗಿ ಕಾಣಿಸಿಕೊಳ್ಳದೆ ನಮ್ಮ ಕಾವ್ಯದ ಅಂದಂದಿನ ಕೊರತೆಗಳನ್ನು ತುಂಬಿ ಹೊಸಶಕ್ತಿಯನ್ನು ತಂದುಕೊಟ್ಟು, ಅದನ್ನು ಜೀವಂತವಾಗಿ ಮುಂದುವರಿಸುವ ವಿಧಾನವಾಗಿಯೇ ನನಗೆ ಕಂಡು ಬಂದಿದೆ.

**ಇಂಥ ಗುಣಸ್ವೀಕಾರ ದೃಷ್ಟಿಯಿಂದಾಗಿಯೇ ನವೋದಯದಿಂದ ಈವರೆಗೆ ನೀವು ಹೆಚ್ಚು ರೆಲೆವೆಂಟ್ ಆಗಿದ್ದೀರಿ ಅನ್ನಿಸುತ್ತದೆ.**

ಸ್ವಲ್ಪ ಮಟ್ಟಿಗೆ ನಿಜವಿರಬಹುದು. ಅಥವಾ ಇಂಥದ್ದೇ ಧೋರಣೆ ಇರುವವರು ಇನ್ನು ಅನೇಕ ಮಂದಿ ಇರಬಹುದು. ನವ್ಯ ಕಾಲದಲ್ಲಿ ನಾನು ಅಡಿಗರಿಂದ ಹೆಚ್ಚು ಪ್ರಭಾವಿತನಾದೆ. ಅದು ೧೯೫೨ರ ಕಾಲವಿರಬೇಕು. ಆಗ ಹೊಸ ರೀತಿಯಲ್ಲೇ ಕೆಲವು ಕವಿತೆಗಳನ್ನು ಬರೆದೆ. ಒಮ್ಮೆ ಅವರೇ ಪತ್ರ ಬರೆದರು. 'ನಾವು, ಹೀಗೆಯೇ ಏನೋ ಹೊಸ ರೀತಿಯಲ್ಲಿ ಬರೆಯುತ್ತಿದ್ದೇವೆ. ಇದನ್ನೆಲ್ಲ ೧೦-೧೫ನ್ನು ಸೇರಿಸಿ ಒಂದು ಪುಸ್ತಕ ಮಾಡುವ' ಎಂದು. ಗೋಕಾಕ್ ಮತ್ತು ನಾನು ಸೇರಿ ೧೯೫೬ರಲ್ಲಿ 'ನವ್ಯಧ್ವನಿ'ಕೃತಿ ತಂದೆವು. ಅಡಿಗರ ಹಾಗೂ ಇತರರ ಪದ್ಯಗಳು ಅದರಲ್ಲಿದ್ದವು. ತಾತ್ತ್ವಿಕವಾಗಿ ಯಾವುದೇ ಭಿನ್ನಾಭಿಪ್ರಾಯವಿದ್ದರೂ ನಾನು ಸ್ನೇಹವನ್ನು ಎಂದಿಗೂ, ಯಾರೊಂದಿಗೂ ಬಿಟ್ಟಿಲ್ಲ. ಇದರ ಪರಿಣಾಮವನ್ನೇ ಈಗ ಅನುಭವಿಸುತ್ತಿದ್ದೇನೆ.

**ನಿಮ್ಮ ಕಾವ್ಯದ ವಿಮರ್ಶೆಯ ಬಗ್ಗೆ....**

ನಾನು ಓದುಗರನ್ನು ನಿರಂತರ ಗೌರವದಿಂದ ಕಾಣುತ್ತಾ ಬಂದಿದ್ದೇನೆ. ಅನಂತರದ ಸ್ಥಾನ ವಿಮರ್ಶಕನದು. ನನ್ನ ಕಾವ್ಯದ ಬೆಳವಣಿಗೆಯಲ್ಲಿ ಅವರ ಪಾಲನ್ನು ನಿರಾಕರಿಸುವಂತಿಲ್ಲ. ವಿಮರ್ಶಕರ ಆಳದ ವಿವೇಚನೆ ನನ್ನ ಬೆಳವಣಿಗೆಗೆ ಪೂರಕವಾಗಿದೆ.

ವಿಮರ್ಶೆಗೆ ಈಗ ತುಂಬಾ ಒಳ್ಳೆಯ ಕಾಲ ಬಂದಿದೆ, ಪ್ರಬುದ್ಧವಾಗಿದೆ. ವಿಮರ್ಶೆಯ ಮಾರ್ಗಗಳೂ ಸಾಹಿತ್ಯ ಪ್ರವೃತ್ತಿಯ ಹಿನ್ನೆಲೆಯಲ್ಲೇ ಬದಲಾಗುತ್ತಾ ಬಂದಿವೆ. ನವ್ಯ ಸಾಹಿತ್ಯ ಬಂದಾಗ ಅದರ ವಿಮರ್ಶೆ ಬಂತು. ದಲಿತ ಬಂದಾಗ ಅದರ ವಿಮರ್ಶೆ ಬಂತು. ಸಾಹಿತ್ಯವನ್ನು ನಿರಂತರ ಸಮಗ್ರವಾದ ದೃಷ್ಟಿಯಿಂದಲೇ ವಿಮರ್ಶಕರು ಗಮನಿಸುತ್ತಾ ಬಂದಿದ್ದಾರೆ. ಪಾರ್ಶ್ವ ದೃಷ್ಟಿಯ ಬದಲು ಇಂಥ ಸಮಗ್ರದೃಷ್ಟಿ ಗುಣಾತ್ಮಕವಾದುದು. ಇದರೊಂದಿಗೆ,ಇತ್ತೀಚಿಗೆ ಭಾರತೀಯ

ಕಾವ್ಯಮೀಮಾಂಸೆ ಮತ್ತು ಪಾಶ್ಚಾತ್ಯ ಮೀಮಾಂಸೆಯ ಸಮನ್ವಯತೆಯಿಂದಲೂ ಮೌಲಿಕ ವಿಮರ್ಶೆ ನಡೆಯುತ್ತಿದೆ. ನಮ್ಮ ಕುರ್ತಕೋಟಿ, ಶಿವರುದ್ರಪ್ಪ, ಅಮೂರ, ಅನಂತ ಮೂರ್ತಿ ಇವರ ತರುವಾಯ ಡಿ.ಆರ್. ನಾಗರಾಜ್, ಅಶೋಕ, ಗಿರಡ್ಡಿ, ರಾಘವೇಂದ್ರರಾವ್, ಎ.ಆರ್. ನಾಗಭೂಷಣ ಮೊದಲಾದವರು ಹೊಸ ಕಾಳಜಿಗಳೊಂದಿಗೆ ವಿಮರ್ಶೆಯ ವ್ಯಾಪ್ತಿಯನ್ನು, ಪ್ರೌಢಿಮೆಯನ್ನು ಹೆಚ್ಚಿಸುತ್ತಿದ್ದಾರೆ. ಶಿವರುದ್ರಪ್ಪನವರು ಮೊದಲಿನಿಂದಲೂ ಒಂದು ಸಮಗ್ರದೃಷ್ಟಿಯನ್ನಿಟ್ಟುಕೊಂಡೇ ಬಂದವರು. ಅವರಿಗೆ ಇಡೀ ಕನ್ನಡ ಸಾಹಿತ್ಯದ ಕುರಿತು ಸಮಗ್ರ ಅಧ್ಯಯನವಿದೆ, ಅಭ್ಯಾಸವಿದೆ, ಜತೆಗೆ ಪಾಶ್ಚಾತ್ಯ ವಿಮರ್ಶೆಯ ಪಾಂಡಿತ್ಯ ಹಾಗೂ ಕವಿತ್ವ ಈ ಮೂರು ಗುಣಗಳೂ ಅವರಲ್ಲಿ ಇರುವುದರಿಂದ ಅವರ ವಿಮರ್ಶೆಗೆ ಒಳ್ಳೆಯ ತೂಕ ಇದೆ. ನಮ್ಮಲ್ಲಿಂದು ಬಹುತೇಕ ವಿಮರ್ಶಕರು ಬರೀ ಇಂಗ್ಲೀಷ್‌ನ್ನಷ್ಟೇ ಓದಿಕೊಂಡು ಅದರ ಚೌಕಟ್ಟಿನಲ್ಲೇ ಕನ್ನಡವನ್ನು ತೂಗುತ್ತಾರೆ. ಅವರಿಗೆ ಕನ್ನಡವನ್ನು ಓದಬೇಕು, ಅಧ್ಯಯನ ಮಾಡಬೇಕೆಂಬ ಉತ್ಸಾಹವಿರುವುದಿಲ್ಲ. ಕಾವ್ಯದಲ್ಲಿ ಬಳಸಿದ ಪದಗಳ ಬಗ್ಗೆ ಕವಿ ಗಮನದಲ್ಲಿಟ್ಟುಕೊಂಡಿರುವ ಆಯಾಮವನ್ನು ವಿಮರ್ಶಕ ಗ್ರಹಿಸದೇ ಹೋದರೆ ಅಂಥ ವಿಮರ್ಶೆ ಎಡವಟ್ಟಾಗಿ ತೋರಬಹುದು. ಕವಿಯ ಶ್ರದ್ಧೆಯ ಕೇಂದ್ರವನ್ನು ಸರಿಯಾಗಿ ಗುರುತಿಸದೆ ಹೋದಾಗ ಅಂಥ ತಪ್ಪುಗಳು ಆಗುವುದುಂಟು. ಪ್ರತಿಯೊಬ್ಬ ಕವಿಯ ಮನಸ್ಸಿನಲ್ಲೂ ಒಬ್ಬ ವಿಮರ್ಶಕನಿರುತ್ತಾನೆ. ಇಲ್ಲದಿದ್ದರೆ ಆತ ಬೆಳೆಯಲು ಹೇಗೆ ಸಾಧ್ಯ?

**ನಿಮ್ಮ ಸಾಹಿತ್ಯ ವಿಮರ್ಶೆಯ ಸಂದರ್ಭದಲ್ಲಿ ಆಗಾಗ ಕೇಳುವ ಮಾತು 'ಸಮನ್ವಯ ಕವಿ-ಕಾವ್ಯ'ಎಂಬುದು, ನಿಮ್ಮ ಸಮಕಾಲೀನ ಕವಿ ಶಿವರುದ್ರಪ್ಪನವರು ಈ ಪರಿಭಾಷೆಯನ್ನು ತೀವ್ರವಾಗಿ ವಿರೋಧಿಸುತ್ತಾರೆ. ನಿಮ್ಮ ಪ್ರತಿಕ್ರಿಯೆ ಏನು?**

ಇದೊಂದು ದೃಷ್ಟಿ ಅಷ್ಟೇ. ಇದಕ್ಕೊಂದು ಹಿನ್ನೆಲೆಯೂ ಇದೆ. ಗೋಕಾಕರು ಬೆಂಗಳೂರು ವಿ.ವಿ.ಯಲ್ಲಿದ್ದಾಗ 'ಸಮನ್ವಯ' ಎಂಬ ಪತ್ರಿಕೆಯನ್ನು ಆರಂಭಿಸಿದರು. ಶಿವರುದ್ರಪ್ಪ, ಎಕ್ಕುಂಡಿ, ಪುರಾಣಿಕ, ಚಿತ್ತಾಲ, ವಿ.ಜಿ.ಭಟ್ಟ ಮೊದಲಾದವರು ಅದರಲ್ಲಿ ಸೇರಿದೆವು. ಹೀಗಾಗಿ ಒಂದು ಸಮನ್ವಯ ಗುಂಪು ಆಯಿತು. ಕೆಲವರು ಈ ಸಮನ್ವಯವನ್ನು ಅಪಾರ್ಥ ಮಾಡಿಕೊಂಡಂತಿದೆ. ಸಮನ್ವಯ ಅಂದ್ರೆ ಅವರದ್ದೊಂದು ಇವರದ್ದೊಂದು ಇಟ್ಟು ಕೂಡಿಸಿದ ಮಿಶ್ರಣವಲ್ಲ. ಸಮನ್ವಯ ಎಂದಿಗೂ ಹೊಸತಲ್ಲ, ನವೋದಯ ಕಾಲದಲ್ಲೂ ಸಮನ್ವಯವಿತ್ತು. ಈ ನಾಡಿನಲ್ಲಿ ಕನ್ನಡದಲ್ಲಿ ಇದು ನಿಂರತರ ಇದ್ದೇ ಇರುತ್ತದೆ. ನಾವು ಎಂದಿಗೂ ಇದಕ್ಕೊಂದು ಲೇಬಲ್ ಹಾಕಬಾರದು- ಇವರು ಸಮನ್ವಯ ಕವಿಗಳೆಂದು, ಹಾಗೆಯೇ ಇವರು ನವ್ಯದವರು, ಇವರು ನವೋದಯದವರು ಎಂದು.

**ಜೀವನದ ಬಗೆಗಿನ ಗಾಢಪ್ರೀತಿಯಿಂದ, ಮಾನವ ಸಂಬಂಧದ ನೆಲೆಯಲ್ಲಿ ನೀವು ಕಾವ್ಯ ಬರೆದದ್ದೇ ಹೆಚ್ಚು. ಮಾನವೀಯತೆಯ ಮೇಲೆ ನಿಮ್ಮ ಆಸಕ್ತಿ ಕೇಂದ್ರೀಕೃತ ವಾದುದು ಹೇಗೆ?**

ಕವಿ ಯಾವ ರೀತಿ ಬದುಕುತ್ತಾನೆ, ಅವನ ಮನಸ್ಸು ಯಾವ ರೀತಿ ಓಡುತ್ತದೆ, ಜನರನ್ನು, ಅವರ ಜೀವನವನ್ನು ಎಷ್ಟರ ಮಟ್ಟಿಗೆ ಆತ ತಿಳಿದುಕೊಂಡಿದ್ದಾನೆ ಎಂಬುದರ ಅಭಿವ್ಯಕ್ತಿ-ಪ್ರತಿಬಿಂಬವೇ ಅವನ ಕಾವ್ಯ. ಎಲ್ಲವೂ ಕಲ್ಪನೆಯಲ್ಲೇ ಅಸಾಧ್ಯ. ಗಾಳಿಯಲ್ಲೇ ಲಾಗಹಾಕಲು ಸಾಧ್ಯವಿಲ್ಲ. ನೆಲ ಬೇಕೇ ಬೇಕು. ಮನುಷ್ಯನನ್ನು ಮನುಷ್ಯನಾಗಿಯೇ ನೋಡಬೇಕು. ವರ್ಗ, ಜಾತಿ, ಬಣ್ಣದಿಂದ ನೋಡುವುದಲ್ಲ. ವ್ಯಕ್ತಿಯ ಭಾವನೆಗಳೇನಿವೆ ಅವು ಎಲ್ಲರಿಗೂ ತಿಳಿಯಬೇಕು. ಆ ಮೂಲಕ ಅವನನ್ನು ಪ್ರೀತಿಸಬೇಕು. ಈ ಮಾನವೀಯತೆ ಹಾಗೂ ಪ್ರೀತಿ ಕವಿಯಾದವನಿಗೆ ಬಹಳ ಮುಖ್ಯವಾಗಬೇಕು. ಇಲ್ಲದಿದ್ದರೆ ಆತ ಯಾವುದಾದರೂ ಒಂದು ಗುಂಪಿನ ಪಂಥದ ರಾಜಕೀಯ ವ್ಯಕ್ತಿಯಾಗಿ ಬಿಡುತ್ತಾನೆ. ಎಲ್ಲಿ, ಯಾವಾಗ, ಯಾರಿಗೆ, ಯಾವ ಮಾನವೀಯತೆಗೆ ಪೆಟ್ಟಾಯಿತೋ ಆಗ ನಿಜವಾದ ಕವಿಗೆ ನೋವಾಗ ತೊಡಗುತ್ತದೆ. ಎಲ್ಲಿಯೇ ಆಗಲಿ ಒಂದು ನೋವಿನ ರೇಖೆ ಮೂಡಿದರೆ ಅದೊಂದು ಮನುಷ್ಯನ ಹೃದಯಕ್ಕಾದ ಗಾಯ ಎಂದು ಪರಿಗಣಿಸಬೇಕು. ಇದನ್ನೆಲ್ಲ ಪಂಥ ಚಳುವಳಿಯ ಹಿನ್ನೆಲೆಯಲ್ಲಿ ನೋಡುವುದಲ್ಲ.

ನಾನು ಯಾವಾಗಲೂ ಗೌರವ, ತೋರಿಸಬೇಕಾದುದು ನನಗಿಂತಲೂ ಉತ್ತಮವಾದುದು, ಶ್ರೇಷ್ಠವಾದುದು ಬೇರೊಂದು ಇದೆ ಎಂಬುದಕ್ಕೆ. ಶ್ರೇಷ್ಠತ್ವವನ್ನು ಒಪ್ಪಿಕೊಂಡು ಅದನ್ನು ಗೌರವಿಸುವ ಮನಸ್ಸು, ನೋವನ್ನು ಗ್ರಹಿಸಿಕೊಂಡು ಅದಕ್ಕೆ ಮಿಡಿಯುವ ಮನಸ್ಸು ಕವಿಗಳಿಗಿರಬೇಕು. ಕಸುಗೊಂಡು ಚೆನ್ನಾಗಿ ಬೆಳೆದ ಬಾಳೆಗಿಡ ಫಲಕೊಡುವಾಗ ಹೇಗೆ ಬಾಗುತ್ತದೆಯೋ ಅದೇ ರೀತಿ ಕವಿಗಳಿರಬೇಕು.

**ಇಂಥ ಸಂವೇದನೆಗಳು ಕಾವ್ಯವಾಗಿ ರೂಪುಗೊಳ್ಳುವ ಪ್ರಕ್ರಿಯೆ ಯಾವ ರೀತಿಯದು?**

ಅದನ್ನು ನಿಖರವಾಗಿ 'ಹೀಗೆಯೇ' ಎಂದು ಹೇಳಲು ಸಾಧ್ಯವಿಲ್ಲ. ಅದೊಂದು ರಾಸಾಯನಿಕ ಕ್ರಿಯೆ. ಅಂತರಂಗ ಬಹಿರಂಗಗಳ ಮಿಲನ-ಘರ್ಷಣೆ, ಕವಿಯ ಕಲ್ಪನೆ, ಭಾವನೆ, ಸಾಮರ್ಥ್ಯಗಳನ್ನು ಕೂಡಿಕೊಂಡು ಆಗುವ ರಾಸಾಯನಿಕ ಕ್ರಿಯೆ. ಈ ತುಮುಲದಿಂದ ಕವಿತೆ ರೂಪುಗೊಂಡು, ಅದರಿಂದ ಪ್ರತ್ಯೇಕವಾಗಿ ನಿಲ್ಲುವುದು ಒಂದು ಸೋಜಿಗ. ಅದು ಹೊಕ್ಕುಳ ಬಳ್ಳಿಯನ್ನು ಕತ್ತರಿಸಿದ ಮಗುವಿನಂತೆ. ಒಬ್ಬ ಕವಿಗೆ, ತನ್ನ ಕವಿತೆಯಲ್ಲಿ ಎಷ್ಟು ಕಲ್ಪನೆಯಿದೆ, ಎಷ್ಟು ಭಾವನೆಯಿದೆ ಎಂದು ಪಾಲುಮಾಡಿ

ಗುರುತಿಸಲು ಸಾಧ್ಯವಿಲ್ಲ. ನಾವು ಬರೆಯುತ್ತಾ ಹೋದಂತೆ ಅದೊಂದು ರೂಪತಾಳಿ ಹೊರಬರುತ್ತದೆ. ಆರಂಭದಲ್ಲಿ ಈ ಕವಿತೆ ಹೀಗೆಯೇ ಮುಗಿಯುತ್ತದೆ ಎಂದು ಹೇಳಲಾಗದು. ಇದೇ ಕಾವ್ಯದ ಸೋಜಿಗ.

**ನಿಮ್ಮ ಕಾವ್ಯದಲ್ಲಿ ಭಾಷೆಯ ಪಾಲು....? ಜಾನಪದದ ಸ್ವೀಕಾರ....**

ಭಾಷೆಯ ದೃಷ್ಟಿಯಿಂದ ನನ್ನ ಒಲವು ಮೊದಲಿನಿಂದಲೂ ದೇಸಿಯ ಕಡೆಗೆ. ಕನ್ನಡ ಕಾವ್ಯ ಪರಂಪರೆ ದೇಶಿಮೂಲವಾದುದೇ. ಶಿಷ್ಟ ಭಾಷೆಯಲ್ಲಿಯೂ ಬಳಕೆಯ ನುಡಿಗೆ ಬೇರೊಂದು ಸೊಗಸಿರುತ್ತದೆ. ಸ್ವಚ್ಛಂದ ಛಂದ ಅನೇಕರು ಭಾವಿಸಿದಂತೆ ಬೇಗ ಕೈಗೂಡುವಂತಹದ್ದಲ್ಲ. ಉಳಿದ ಕಲೆಗಳಂತೆಯೇ ಕಾವ್ಯವೂ ಕೂಡ ಸಾಕಷ್ಟು ಪರಿಶ್ರಮವನ್ನು, ಕಸಬುಗಾರಿಕೆಯನ್ನು ಬಯಸುವಂತಹದು. ಅಲ್ಲಿ ಯಾವ ರಿಯಾಯಿತಿಗೂ ಆಸ್ಪದವಿಲ್ಲವೆಂದೇ ನನ್ನ ಭಾವನೆ. ಸಾನೆಟ್ ನನ್ನ ಪ್ರೀತಿಯ ಕಾವ್ಯ ಪ್ರಕಾರವಾಗಿರುವುದು ಇದರಿಂದಾಗಿಯೇ.

ನನ್ನ ಬಾಲ್ಯದ ಪರಿಸರದ ಜಾನಪದ ಹಾಡುಗಳ, ನುಡಿಗಟ್ಟುಗಳ ನಾದಗುಣ ಬಹಳಷ್ಟು ಪರಿಣಾಮ ಬೀರಿದೆ. ಮುಂದೆ ನಾನು ನನ್ನ ಕಾವ್ಯದಲ್ಲೂ ಅದೇ ಸೊಗಸನ್ನು ತೋರಲು ಪ್ರಯತ್ನಿಸಿದೆ. ಗ್ರಾಮ್ಯರ ಪ್ರತಿಯೊಂದು ಮಾತು ಕೇಳುವಾಗಲೂ ಎಷ್ಟೊಂದು ಕಾವ್ಯ ಅದರಲ್ಲಿದೆ ಅನ್ನಿಸುತ್ತಿತ್ತು. ಅಂದಿನ ಪರಿಸರದಲ್ಲಾಗಲೀ, ಇಂದೇ ಆಗಲಿ ನಿಜವಾದ ಸಾಹಿತ್ಯವನ್ನು ನಾವು ಹುಡುಕಿಕೊಂಡು ಹೋಗಬೇಕಾಗಿಲ್ಲ. ಅದು ಮಾತು ಮಾತಿಗೂ ಹುದುಗಿದ ನಿಧಿ. ಬರೀ ನಾಲ್ಕೈದು ಮಂದಿ ಹಳ್ಳಿಯ ವಡ್ಡರ, ಕೃಷಿಕರ ಹಿಂದೆ ಹೋದರೆ ಸಾಕು. ಆ ಮಾತು, ಅಭಿನಯ, ಗಾದೆ ಎಲ್ಲವೂ ನಿಧಿ ಸಮಾನ. ಅವಮಾನಿತ ವ್ಯಕ್ತಿಯೊಬ್ಬ 'ಎದೆಗೆ ಒದ್ದಾಂಗಾತು' ಎನ್ನುವಾಗ ಅದರಲ್ಲಿರುವ ಧ್ವನಿಯನ್ನು ನೋಡಿ.

ಕವಿಯಾದವನು ಭಾಷೆಯನ್ನು ಸಮರ್ಥವಾಗಿ ದುಡಿಸಿಕೊಂಡು ಬಹುಬಗೆಗಳಲ್ಲಿ ಅದನ್ನು ಬಳಸಿಕೊಳ್ಳುತ್ತಾನೆ. ಅದೊಂದು ಮಾಧ್ಯಮವಾಗಿರುವುದರಿಂದ ಗರಿಷ್ಠ ಪ್ರಮಾಣದಲ್ಲಿ ನಾವು ಅದನ್ನು ತೊಡಗಿಸಿಕೊಳ್ಳುವುದಕ್ಕೆ ಪ್ರಯತ್ನಿಸುತ್ತೇವೆ. ಆಗ ಕವಿತೆಗೆ ಸಹಜವಾಗಿ ಸಾಂದ್ರತೆಯುಂಟಾಗುತ್ತದೆ. ಓದುಗನಿಗೆ ಅದು ಸುಲಭದಲ್ಲಿ ಅರ್ಥವಾಗುವಂತಿರಬೇಕು. ನಿಜವಾದ ಅರ್ಥವಾಗದಿದ್ದರೂ ಏನೋ ಒಂದು ಅರ್ಥವಾಗಿದೆ ಎಂಬಂತಿರಬೇಕು. ಅಷ್ಟಾದರೂ ಆಗಬೇಕು. ಆಮೇಲೆ ಸಂಸ್ಕಾರ ವಾಗುತ್ತದೆ. ಜನತೆಗೆ ನಮ್ಮ ಕಾವ್ಯ ಒಂದು ಬಗೆಯಲ್ಲಾದರೂ ತಲುಪಲೇಬೇಕು. ಯಾಕೆಂದರೆ ನಮ್ಮ ಅನುಭವಗಳಲ್ಲಿ ಅವರ ಪಾಲೂ ಇರುತ್ತದೆ. ಹೀಗಾಗಿ ಕಾವ್ಯ ಎಂದಿಗೂ ಒಂದೇ ದಾರಿಯಲ್ಲಿ ಹೋಗುವಂತಹದ್ದಲ್ಲ. ಕವಿಯ ಹೃದಯದಲ್ಲಿ ಅದು

ಹುಟ್ಟಿತು ಎಂದರೆ ಅದು ಓದುಗನ ಹೃದಯಕ್ಕೂ ಕೂಡಬೇಕು, ಇನ್ನೊಂದು ಹೃದಯಕ್ಕೂ ಕೂಡಬೇಕು, ಕವಿಯ ಹೃದಯ ಉಗಮಸ್ಥಾನ, ಸಹೃದಯನದು ಸಂಗಮಸ್ಥಾನ.

**ನಿಮ್ಮ ಕಾವ್ಯಸೃಷ್ಟಿಯ ಪ್ರಕ್ರಿಯೆಯಲ್ಲಿ ಕಲಾತ್ಮಕತೆ ಸೌಂದರ್ಯಾತ್ಮಕತೆ ಪ್ರಧಾನವಾಗಿದೆ. ಸಂಕೀರ್ಣತೆಯೇ ಕಾವ್ಯದ ಮೌಲ್ಯ ಎಂದು ಹೇಳುವ ವಿಮರ್ಶೆಯಿದೆಯಲ್ಲ?**

ಸಮಗ್ರ ಅನ್ನುವಾಗ ಸಂಕೀರ್ಣತೆ ಸಹಜ. ಅನುಭವದ ಒಂದೇ ಮಗ್ಗುಲನ್ನು ಹೇಳಲಾಗದು. ನಮ್ಮ ಮನಸ್ಸು ಕೂಡಾ ಸಂಕೀರ್ಣವೇ. ನಮ್ಮ ವಿಚಾರಶಕ್ತಿಯ ವ್ಯಾಪ್ತಿಯೊಳಗೆ ಒಂದೇ ವಿಷಯದ ಕುರಿತು ಚಿಂತನೆ ಮಾಡಲು ಸಾಧ್ಯವಿಲ್ಲ. ಅನೇಕ ವಿಷಯಗಳ ಕುರಿತು ಮನಸ್ಸು ಚಿಂತಿಸುತ್ತಾ ಇರುತ್ತದೆ. ಹೀಗಿರುವಾಗ ನಮ್ಮ ಕೃತಿಯೇ ಇರಬಹುದು, ಕವಿತೆಯೇ ಇರಬಹುದು ಅದು ಕೂಡಾ ಸಂಕೀರ್ಣವೇ ಆಗಿರುತ್ತದೆ.

**ಇಂದಿನ ಈ ಗೊಂದಲ, ಸಾಮಾಜಿಕ ಸಂಘರ್ಷಗಳ ನಡುವೆ ಕಾವ್ಯ ಉಳಿದೀತೆ? ಕಳೆದು ಹೋದೀತು ಅನ್ನಿಸುವುದಿಲ್ಲವೆ?**

ಖಂಡಿತ. ಯಾಕೆಂದರೆ ಇಂದು ಯಾರೂ ಕೂಡಾ ಆ ಬಗ್ಗೆ ಗಮನ ಕೊಡುತ್ತಿಲ್ಲ. ರಂಗಿನಲೋಕಕ್ಕೆ ಅಂಟಿಕೊಂಡ ಈ ಬದುಕಿನಲ್ಲಿ ಒಂದು ದೊಡ್ಡ ಆತಂಕವಿದೆ. ಏಕಾಂತಕ್ಕೆ, ಓದಿನ ಮನನಕ್ಕೆ ಇಂದು ಅವಕಾಶ ದೊರೆಯುತ್ತಿಲ್ಲ. ಸುಲಭವಾಗುವ ಬದುಕಿನಿಂದಾಗಿ ಎಳೆಯ ಮಕ್ಕಳ ಕಲ್ಪನೆ, ಬೌದ್ಧಿಕ ಶಕ್ತಿಯ ಮೇಲೂ ಪೆಟ್ಟು ಬೀಳುತ್ತಿದೆ. ಈಗ ನಮ್ಮ ಕನ್ನಡದ ಬಗ್ಗೆ, ಮಾಧ್ಯಮದ ಬಗ್ಗೆ, ಅಭ್ಯಾಸಕ್ರಮದ ಬಗ್ಗೆ ನೋಡಿದರೆ ಇಲ್ಲಿ ಬಹಳ ದೊಡ್ಡ ತಪ್ಪನ್ನು ನಾವು ಮಾಡುತ್ತಾ ಬಂದಿದ್ದೇವೆ. ಇಂಗ್ಲೀಷ್ ಮಾಧ್ಯಮದ ಪರಿಣಾಮವಾಗಿ ಕನ್ನಡದ ಮಕ್ಕಳಿಗೆ ಕನ್ನಡದ ಪರಂಪರೆ ಸಂಸ್ಕಾರದ ಪರಿಚಯವೇ ಇಲ್ಲವಾಗುತ್ತಿದೆ. ಭಾಷೆಗೂ ಸಂಸ್ಕೃತಿಗೂ ಯಾವ ರೀತಿಯ ಸಂಬಂಧವಿದೆ ಎಂಬುದು ಎಲ್ಲರಿಗೂ ಗೊತ್ತಿದೆ. ಇಂಗ್ಲೀಷ್ ವ್ಯಾಮೋಹದಿಂದ ನಾವು ನಮ್ಮ ಮಕ್ಕಳನ್ನು ಕೈಯಾರೆ ಕನ್ನಡಕ್ಕೆ ಎರವಾಗುವಂತೆ ವಿಮುಖರನ್ನಾಗಿ ಮಾಡುತ್ತಿದ್ದೇವೆ. ಕನ್ನಡದ ಮೂಲ ತಳಹದಿಯೇ ಇಲ್ಲದ ಇಂಥ ಭಾವೀ ಮಕ್ಕಳ ಸಂಕುಲದಿಂದ ನಮ್ಮಂತಹ ಒಬ್ಬ ಲೇಖಕ, ಕವಿ ಹುಟ್ಟಿ ಬರುವುದು ಅಸಾಧ್ಯದ ಮಾತು. ಮಾಧ್ಯಮದ ಇಂಥ ವಿಕೃತ ಸಂಬಂಧದಿಂದ ಒಳ್ಳೆಯ ಸಾಹಿತ್ಯ ಬಿಡಿ, ಲೇಖಕರೂ ರೂಪಗೊಳ್ಳುವುದು ಹೇಗೆ?

**ತರಂಗ,** ೫.೫.೧೯೯೬

*

# ಮೂರು ಸಂದರ್ಭಗಳ ಮಾತುಕತೆ

● ಶ್ಯಾಮಸುಂದರ ಬಿದರಕುಂದಿ

ನಾನು ಚೆನ್ನವೀರ ಕಣವಿಯವರ ಕಾವ್ಯಾಭ್ಯಾಸ ಮತ್ತು ಅಪ್ತವಲಯದವನಾಗಿ ಕಣವಿ ಅವರನ್ನು ಮೂರು ಸಲ ಪತ್ರಿಕೆಗಳಿಗಾಗಿ ಸಂದರ್ಶಿಸಿ ಪ್ರಕಟಿಸಿದ್ದೇನೆ. ಮೊದಲನೆಯ ಸಲ ಕಣವಿಯವರಿಗೆ ಅರವತ್ತು ತುಂಬುವ ಸಂದರ್ಭದಲ್ಲಿ. 'ಸಂಯುಕ್ತ ಕರ್ನಾಟಕ'ದ ೮೮ರ ಮಾರ್ಚ್ ೨೭ರ ಸಂಚಿಕೆಯಲ್ಲಿ ಅದು ಪ್ರಕಟವಾಯಿತು. ಎರಡನೆಯ ಸಲ 'ಉದಯವಾಣಿ' ದೀಪಾವಳಿ ಸಂಚಿಕೆಗಾಗಿ, ೧೯೯೬ರಲ್ಲಿ ಅದೇ ಆಗ, 'ಕಣವಿ ಸಮಗ್ರಕಾವ್ಯ' ಪ್ರಕಟವಾಗಿತ್ತು. ಮೂರನೆಯ ಸಲ ಕರ್ನಾಟಕ ಸರಕಾರದ 'ಪಂಪ ಪ್ರಶಸ್ತಿ' ಪ್ರಧಾನ ಸಮಾರಂಭ ಬಸವಾಸಿಯಲ್ಲಿ ನಡೆದ ಸಂದರ್ಭದಲ್ಲಿ 'ಪ್ರಜಾವಾಣಿ' (೨೦.೧.೨೦೦೦)ಗಾಗಿ ಸಂದರ್ಶಿಸಿದೆ. ಈ ಮೂರು ಸಂದರ್ಶನಗಳ ಕ್ರೋಢೀಕೃತ ರೂಪ ಇಲ್ಲಿದೆ.

**ವ್ಯಕ್ತಿತ್ವ ರೂಪಿಸಿಕೊಳ್ಳುವ ಸಂದರ್ಭ ಬಂದಾಗ, 'ಕವಿ'ಆಗಬೇಕು ಎಂದು ಸಂಕಲ್ಪಿಸಿಕೊಂಡವರು ನೀವು. 'ಭಾವಜೀವಿ'ಯಲ್ಲಿ ಅದರ ಗುರುತುಗಳಿವೆ. ನಿಮಗೆ 'ಕವಿ ಆಗಬೇಕು' ಎಂಬುದಕ್ಕೆ ಪ್ರೇರಣೆ ಕೊಟ್ಟಂಥ ವ್ಯಕ್ತಿ ಹಾಗೂ ಸಂಗತಿ ಯಾವುವು?**

ನಾನು ಹೈಸ್ಕೂಲಿನಲ್ಲಿದ್ದಾಗಲೇ 'ಶ್ರೀ'ಯವರ 'ಕನ್ನಡ ಬಾವುಟ' ಓದಿದ್ದೆ. ಒಂದು ದೃಷ್ಟಿಯಿಂದ ನನಗೆ ಕನ್ನಡ ಕಾವ್ಯ ಪರಂಪರೆಯ ಪರಿಚಯ ಆ ಸಂಗ್ರಹದಿಂದಾಯಿತು. ಬೇಂದ್ರೆ, ಕುವೆಂಪು, ಮಧುರಚೆನ್ನರ ಕವಿತೆಗಳು ನನ್ನ ಮನಸ್ಸನ್ನಾಕರ್ಷಿಸಿದ್ದವು. ಅವುಗಳನ್ನು ಮತ್ತೆ ಮತ್ತೆ ಓದಬೇಕೆನ್ನಿಸುತ್ತಿತ್ತು. ಧಾರವಾಡದಲ್ಲಿ ನಾನು ವಾಸ ಮಾಡಿಕೊಂಡಿದ್ದ ಮುರುಘಾಮಠದ ವಾತಾವರಣ ವಚನ ಸಾಹಿತ್ಯದ ಅಭ್ಯಾಸಕ್ಕೆ ನನ್ನನ್ನು ಪ್ರೇರಿಸಿತು. ಹರಿಹರನ ರಗಳೆಗಳಲ್ಲಿ ಹೊಸ ಲೋಕವೊಂದನ್ನು ಕಂಡು ಪುಳಕಿತನಾದೆ. ಧಾರವಾಡದ ಅಂದಿನ ಸಾಹಿತ್ಯಕ ವಾತಾವರಣದಲ್ಲಿ ಭಾವಗೀತೆಗಳು ಅಲೆ ಅಲೆಯಾಗಿ ತೇಲಿ ಬರುತ್ತಿದ್ದವು. ಧಾರವಾಡದ ನಿಸರ್ಗವಂತೂ ತುಂಬ ಚೇತೋಹಾರಿಯಾಗಿತ್ತು.

ಅದೇ ಹೊತ್ತಿಗೆ, ಬಲಗೊಳ್ಳುತ್ತಿದ್ದ ಸ್ವಾತಂತ್ರ್ಯ ಹೋರಾಟ (೧೯೪೨-೪೭)ದ ಜೊತೆಗೇ ಪ್ರಚಲಿತವಿದ್ದ ಕರ್ನಾಟಕ ಏಕೀಕರಣ ಚಳುವಳಿ ಹೀಗೆ ಒಂದಕ್ಕೊಂದು ಕೂಡಿಕೊಂಡು ನನ್ನಲ್ಲಿ ಭಾವತರಂಗಗಳನ್ನು ಎಬ್ಬಿಸಿದವು. ಸಾಹಿತ್ಯದಲ್ಲಿ ಆಸಕ್ತಿಯುಳ್ಳ ಸ್ನೇಹಿತರೊಡನೆ (ಕೀರ್ತಿನಾದ ಕುರ್ತುಕೋಟಿ, ಶಂಕರ ಮೊಕಾಶಿ, ಶಿವೇಶ್ವರ ದೊಡ್ಡಮನಿ, ಬಸವರಾಜ ಕಟ್ಟೀಮನಿ ಮುಂತಾದವರು) ನಾವೇ ಸಂಘಟಿಸಿದ 'ಕಾವ್ಯಾನುಭವ ಮಂಟಪ'ದಲ್ಲಿ ಕಾವ್ಯವಾಚನ, ವಿಮರ್ಶೆಯ ಚಟುವಟಿಕೆ ನಡೆಸುತ್ತಿದ್ದೆವು. 'ಜಯಂತಿ', 'ಜಯಕರ್ನಾಟಕ', 'ಜೀವನ'ಪತ್ರಿಕೆಗಳಲ್ಲಿ ನಮ್ಮ ಕವನಗಳು ಪ್ರಕಟಗೊಳ್ಳುತ್ತಿದ್ದಂತೆ, ಹೆಚ್ಚಿನ ಆತ್ಮ ವಿಶ್ವಾಸ ಮೂಡುತ್ತಿತ್ತು. ಈ ಬಗೆಯ ಸ್ನೇಹ-ಸಂಬಂಧದಿಂದ ದೊರೆತ ಪ್ರೇರಣೆ ನಿಜಕ್ಕೂ ದೊಡ್ಡದು.

**ಕವಿತೆಯ ಉದ್ಯೋಗಕ್ಕೆ 'ಪರಂಪರೆ'ಯ ಅರಿವು ರೀತಿ-ರಿವಾಜಿನ ನೆರವು ಬೇಕೆಂದು ಕೊಂಡೇ ಕಾವ್ಯ ರಚನೆಗೆ ತೊಡಗಿದವರು ನೀವು. ಪರಂಪರೆಗೆ ಒತ್ತು ಕೊಡುವುದರ ತಮ್ಮ ಗ್ರಹಿಕೆಗಳೇನು?**

ಕಾವ್ಯದ ಮಾಧ್ಯಮ ಮುಖ್ಯವಾಗಿ ಭಾಷೆ, ಅಲ್ಲವೇ? ಭಾಷೆ ಅಂದೊಡನೆ ಅದರ ಜೊತೆಗೆ ಅದನ್ನಾಡುವ ಜನರ ಸಂಸ್ಕೃತಿಯೂ ಅಂತರ್ವಾ-ಹಿನಿಯಾಗಿ ಹರಿದು ಬಂದಿರುತ್ತದೆ. ಅದರಿಂದ ಅದಕ್ಕೊಂದು ಪರಂಪರೆ ಇರುತ್ತದೆ. ಪಂಪನಿಂದ ಮೊದಲ್ಗೊಂಡು ಇಂದಿನವರೆಗೆ ಸಾವಿರಾರು ಕವಿಗಳು ಕನ್ನಡದಲ್ಲಿ ಕಾವ್ಯೋದ್ಯೋಗ ನಡೆಸಿರಬೇಕಾದರೆ ಅದರ ಸಂಪತ್ತು ಎಷ್ಟಿರಬೇಡ? ಆಯಾ ಕಾಲದ ಭಾವ-ಭಾಷೆ, ರೀತಿ-ನೀತಿ. ಅರಿವು-ಆಚರಣೆ ಇತ್ಯಾದಿಗಳೆಲ್ಲ ಆ ಕೃತಿಗಳಲ್ಲಿ ಭಾಷೆಯ ಮೂಲಕ ಅಭಿವ್ಯಕ್ತಿ ಪಡೆದಿರುತ್ತವೆ. ಅಂಥ ಪರಂಪರೆಯ ಅರಿವು ಇಲ್ಲದೆ ಹೋದರೆ, ನಾವು ಎಡಬಿಡಂಗಿಗಳಾಗಿ ನಮ್ಮ ಬರವಣಿಗೆಗೆ ನಿಜವಾದ ಸತ್ತ್ವ ಒದಗದೆ ಹೋಗುತ್ತದೆ.... ಭೂತ-ವರ್ತಮಾನ ಒಂದರೊಳಗೊಂದು ಸೇರಿಕೊಂಡು ಭವಿಷ್ಯದತ್ತ ಸಾಗುತ್ತವೆ. ಕಾವ್ಯ ಪ್ರವಾಹಕ್ಕೆ ನಾವು ಆಗಾಗ ಹೊಸ ತಿರುವನ್ನು ಕೊಡಬಹುದು. ಆದರೆ ಅದರಲ್ಲಿ ನೀರಿರಬೇಕು ತಾನೆ? ಆಗೀಗ ಬಂದು ಕೊಡುವ ಹೊಸನೀರು ಮುಖ್ಯ ಪ್ರವಾಹದಿಂದ ಪ್ರತ್ಯೇಕವಾಗಿರದೆ ಅದನ್ನು ಹೆಚ್ಚು ಚಲನಶೀಲಗೊಳಿಸುವಂತಿರಬೇಕಾಗುತ್ತದೆ.

**ಆಧುನಿಕ ಕವಿತೆಯ ನಡೆ-ಮುನ್ನಡೆಯನ್ನು ನವೋದಯ, ಪ್ರಗತಿಶೀಲ, ನವ್ಯ, ಬಂಡಾಯ, ದಲಿತ ಎಂದು ಕಾಲಕ್ರಮದಲ್ಲಿ ವಿಭಾಗಿಸುತ್ತೇವಲ್ಲ. ಪರಂಪರೆಯನ್ನು ಪೋಷಿಸುವ ಆಶಯವುಳ್ಳ ತಮಗೆ ಇಂತಹ ವಿಭಾಗ ಕ್ರಮ ಸರಳೀಕೃತ ಅನಿಸಬಹುದಲ್ಲವೇ?**

ಕಾಲಕ್ರಮದ ಈ ವಿಭಾಗದಲ್ಲಿ ಅವುಗಳ ಪ್ರಮುಖ ಧೋರಣೆಯ ಸೂಚನೆಯೂ ಇದೆ. ಕಾಲಕ್ಕೆ ತಕ್ಕಂತೆ ಜೀವನದಲ್ಲಿ ಬದಲಾವಣೆಯಾದಂತೆ, ಅದರ ಅಭಿವ್ಯಕ್ತಿಯೆನಿಸಿದ ಕಾವ್ಯದಲ್ಲಿಯೂ ಅದು ಬರಬೇಕಾದದ್ದೇ. ಹಿಂದಿನ ಕಾವ್ಯದಲ್ಲಿಯ ಕೊರತೆಗಳನ್ನು ತುಂಬಿಕೊಂಡು ಇಂದಿನ ಅವಶ್ಯಕತೆಗಳನ್ನು ಪೂರೈಸಿಕೊಡಲು ವಸ್ತು-ರೀತಿಗಳಲ್ಲಿ ದೃಷ್ಟಿ-ಧೋರಣೆಗಳಲ್ಲಿ ಉಂಟಾಗುವ ಬದಲಾವಣೆ, ಹೊಸತನವನ್ನು ಸಹಜವಾಗಿಯೇ ಮೈಗೂಡಿಸಿ- ಕೊಳ್ಳುತ್ತದೆ. ಇವೆಲ್ಲ ಪರಂಪರೆಗೆ ಪೋಷಕವಾದವುಗಳೇ, ಇವನ್ನೆಲ್ಲ ಜೀರ್ಣಿಸಿ-ಕೊಂಡಾಗ ಪರಂಪರೆ ಪುಷ್ಟಿ ಪಡೆಯುತ್ತದೆ.

ಈ ಹಿನ್ನೆಲೆಯಲ್ಲಿ ನೋಡಿದಾಗ ಇಂತಹ ವಿಭಾಗ ಕ್ರಮ ಸರಳೀಕೃತ ಎನಿಸಬಹುದು.

**"ಕಣವಿ ಅವರಲ್ಲಿರುವ ಭೂಮದ ಬಯಕೆ ಹೆಚ್ಚಾಗಿ ಮಾನವ ಕೇಂದ್ರಿತವಾಗಿದೆ" ಎನ್ನುವ ವಿಮರ್ಶಕ. ಡಾ. ಆಮೂರರು, "ಮಾನವ ಸಂಸ್ಕೃತಿಯ ಎಲ್ಲ ಕ್ಷೇತ್ರಗಳಲ್ಲಿಯ ವಿಭೂತಿಗಳನ್ನು ಕುರಿತು ಅವರು ಬರೆದಿರುವ ಸುನೀತ (ಸಾನೆಟ್)ಗಳ ಹಿಂದಿನ ಪ್ರೇರಣೆ ಭೂಮದ ಅರಸುವಿಕೆಯೆ ಆಗಿದೆ" ಎಂದು ಸಮರ್ಪಕವಾಗಿಯೇ ಗುರುತಿಸಿದ್ದಾರೆ. ('ಹೊಂಬೆಳಕು'ವಿನ ಪ್ರಸ್ತಾವನೆಯಲ್ಲಿ) ವ್ಯಕ್ತಿಗಳಲ್ಲಿಯ ವಿಭೂತಿತನವನ್ನು ಯಾವ ನಿಲುವಿನಿಂದ ತಾವು ಗ್ರಹಿಸುತ್ತೀರಿ? ವಿಭೂತಿತನದ ಲಕ್ಷಣಗಳೇನು?**

ಕಣವಿ : ವ್ಯಕ್ತಿಯಲ್ಲಿಯ ಗುಣಾತಿಶಯತೆ, ಆ ವ್ಯಕ್ತಿತ್ವಕ್ಕೊಂದು 'ಮಹಿಮೆ'ಯನ್ನು ಹೆಚ್ಚಳವನ್ನು ತಂದುಕೊಡುತ್ತದೆ. ಅದು ತನ್ನ ಆತ್ಮವಿಕಾಸದೊಂದಿಗೆ ಒಂದು ಜನಾಂಗದ ಉನ್ನತಿಯನ್ನು ಸಾಧಿಸಲು ಹಂಬಲ ಉಳ್ಳದ್ದಾಗಿದ್ದರೆ, ಅದು ನನ್ನ ದೃಷ್ಟಿಯಲ್ಲಿ ವಿಭೂತಿಮತ್ ಸತ್ತ್ವ. ಅಂಥ ಚೇತನಕ್ಕೆ ಮನಸ್ಸು ಮಾರುಹೋಗುತ್ತದೆ. ನಮ್ರತೆಯಿಂದ ತಲೆಬಾಗುತ್ತದೆ.....

ನನ್ನದು ಮೂಲತಃ ಗುಣಗ್ರಾಹಕ ದೃಷ್ಟಿ. ಹಳೆಯ ರೂಪಕವನ್ನೇ ಬಳಸುವುದಾದರೆ ಷೋಡಶ ಕಲೆಗಳಿಂದ ಕೂಡಿಯೂ ಚಂದ್ರ, ತನ್ನ ಪ್ರಶಾಂತ ಬೆಳಕಿನಿಂದ ಜಗತ್ತನ್ನು ಬೆಳಗುತ್ತಾನೆ. ಅಂಥ ವ್ಯಕ್ತಿತ್ವದ ಹಿಂದಿನ ಸಾಧನೆಯ ಕಡೆಗೆ ನಾನು ಹೆಚ್ಚು ಗಮನ ಕೊಡುತ್ತೇನೆ. ಅವಗುಣಗಳನ್ನು ಅಷ್ಟಷ್ಟೇ ಕಡಿಮೆಗೊಳಿಸುತ್ತ ಪೂರ್ಣತೆಯ ಕಡೆಗೆ ಸಾಗುವ ಹೃದಯ-ವೈಶಾಲ್ಯದಲ್ಲಿ, ಪ್ರೀತಿಯ ವಿಸ್ತಾರದಲ್ಲಿ, ನಿಸ್ವಾರ್ಥ ಸೇವಾ ಮನೋಧರ್ಮದಲ್ಲಿ ವಿಭೂತಿತನವನ್ನು ಗುರುತಿಸಿಕೊಳ್ಳುತ್ತೇನೆ.

**ತಮ್ಮ ಕಾವ್ಯ ರಚನೆಯು ತಾದಾತ್ಮ್ಯದ ದಾಟಿ ಮತ್ತು ಚಿಂತನಶೀಲತೆಯ ಎಚ್ಚರಿಕೆಯ ನಡೆವೆ ತೂಗಾಡುತ್ತಲೇ 'ನವ್ಯ'ಶೈಲಿಯನ್ನು ಅಂಗೀಕರಿಸಿತು. ವಿಶಿಷ್ಟವಾದ**

**ಈ ತರದ ಸಾಧನೆಯನ್ನು ನಿರ್ವಹಿಸುವಲ್ಲಿ ನೀವೆದುರಿಸಿದ ಸವಾಲುಗಳೇನು?**

ತಾದಾತ್ಮ್ಯದ ಧಾಟಿಯಲ್ಲಿಯೂ ಚಿಂತನದ ಎಳೆಯನ್ನು ನಾನು ಮೊದಲಿನಿಂದಲೂ ಕಳೆದುಕೊಂಡಿರಲಿಲ್ಲ. ನವ್ಯದ ಪ್ರಭಾವದಿಂದ ಅದು ಹೆಚ್ಚು ಹುರಿಗೊಂಡಿತು ಅಷ್ಟೇ. ನವ್ಯ ಕಾವ್ಯದ ಛಂದೋ ಶರೀರದಲ್ಲಿ ಆಡುಮಾತಿನ ಲಯಕ್ಕೆ, ವ್ಯಂಗ್ಯಕ್ಕೆ, ಮುಕ್ತ ಛಂದಕ್ಕೆ, ಶಬ್ದನಾದಕ್ಕೆ, ಪ್ರಾಧಾನ್ಯವೀಯಲು ಪ್ರಯತ್ನಿಸಿದೆ.... ಜೀವನದ ವಾಸ್ತವತೆಯನ್ನು ಗಮನಿಸುತ್ತ, ಆದರ್ಶವನ್ನು, ಆಶಾವಾದವನ್ನು, ಜೀವನಶ್ರದ್ಧೆಯನ್ನು ಇಟ್ಟುಕೊಂಡೇ ನನ್ನ ಕಾವ್ಯದ ದಾಟಿ 'ನವ್ಯ' ಶೈಲಿಯನ್ನು ಅಂಗೀಕರಿಸಿತು.

ಇದೆಲ್ಲ ಉದ್ದೇಶಪೂರ್ವಕವಾಗಿ ಮಾಡಲು ಹೊರಟಿದ್ದಲ್ಲ. ಸ್ವಾಭಾವಿಕವಾಗಿ, ಸಹಜವಾಗಿ ತನ್ನತನವನ್ನು ಕಾಪಾಡಿಕೊಂಡು ಮೈಗೂಡಿಸಿ ಕೊಂಡದ್ದು. ನೀವೀಗ ಈ ಪ್ರಶ್ನೆ ಕೇಳಿದ್ದರಿಂದ ಅದಕ್ಕೆ ಉತ್ತರ ಹುಡುಕುವಾಗ 'ಹೀಗಾಗಿರಬಹುದೇ' ಅಂತ ನನ್ನಷ್ಟಕ್ಕೆ ವಿಶ್ಲೇಷಣೆ ನಡೆಸಿದಾಗ, ಈ ಮಾತುಗಳನ್ನು ವಿವರಿಸಬೇಕಾಯ್ತು.

**ಜನಪದದ ಧಾಟಿ, ಸೊಗಡುಗಳನ್ನು ಶಿಷ್ಟರೂಪದಲ್ಲಿ ತರುವ ನಿಮಗೆ, ಜನಪದ-ಶಿಷ್ಟ ಜೀವನಗಳೆರಡೂ ತದ್ವಿರುದ್ಧವಾಗಿಲ್ಲ, ಎನಿಸಿದ್ದು ಸ್ವಾನುಭವ. ಹೀಗಾಗಲು ತಮಗಿರುವ ಪರಿಸರದ ಸಂಪರ್ಕ ಸಂಬಂಧಗಳೇ ಕಾರಣ ಅಲ್ಲವೇ?**

ಹೌದು, ನಾನು ನಗರದಲ್ಲೇ ಹುಟ್ಟಿ-ಬೆಳೆದಿದ್ದರೆ ಬಹುಶಃ ನನ್ನ ಕಾವ್ಯದ ರೀತಿಯೇ ಬೇರೆಯಾಗಿರುತ್ತಿತ್ತು. ನಾನು ಹಳ್ಳಿಯಲ್ಲಿ ಜನಪದದ ನಡುವೆ ನನ್ನ ಬಾಲ್ಯವನ್ನು ಕಳೆದಿದ್ದರೆ, ಆ ಸಂಸ್ಕೃತಿಯನ್ನು ಮೈಗೂಡಿಸಿಕೊಂಡಿರದಿದ್ದರೆ, ನಾನು ಕವಿಯೇ ಆಗುತ್ತಿರಲಿಲ್ಲವೇನೋ! ಹಳ್ಳಿ ಹಾಗೂ ನಗರ ಎರಡೂ ಜೀವನದ ಸಂಪರ್ಕ, ಸಂಬಂಧಗಳಿಂದ ಹಾಗೂ ಮಾರ್ಗ ಮತ್ತು ದೇಸೀ ಎರಡೂ ಬಗೆಯ ಕಾವ್ಯದ ಅಭ್ಯಾಸದಿಂದ ಜನಪದದ ಸೊಗಡನ್ನು ಶಿಷ್ಟರೂಪದಲ್ಲಿ ತರುವುದು ಸಾಧ್ಯವಾಯಿತೆಂದು ತೋರುತ್ತದೆ... ಇಲ್ಲಿ, ಇನ್ನೊಂದು ಅಂಶ ಹೇಳಲೇಬೇಕು, ನನ್ನ ಕಾವ್ಯ ಜೀವನದ ಮುಂದಿನ ಘಟ್ಟಗಳನ್ನು ರೂಪಿಸಿದ ಧಾರವಾಡ ಕೂಡ, ಬಯಲುಸೀಮೆ ಹಾಗೂ ಮಲೆನಾಡಿನ ಸೆರಗಿನಲ್ಲಿರುವ 'ದೊಡ್ಡಹಳ್ಳಿ'ಯಾಗಿಯೇ ಪರಿಣಮಿಸಿದ ನನಗೆ.....

**ಅನುಭಾವದ ಎಳೆಗಳು, ನಿಮ್ಮ ಅನೇಕ ಕವಿತೆಗಳಲ್ಲಿ ನವುರಾಗಿ, ಧ್ವನಿಪೂರ್ಣವಾಗಿ ನೇಯ್ದುಕೊಂಡಿವೆ. ಅನುಭಾವದ ಅನುಭವ ನಿಮಗೆ ಓದಿನಿಂದ ಬಂದದ್ದೆ? ಪ್ರಕೃತಿಯ ಪರಿಸರದ ಸಂಬಂಧದಿಂದ ಬಂದದ್ದೆ?**

ಕೇವಲ ಓದಿನಿಂದ ಬಂದದ್ದಲ್ಲ; ಬರುವಂತಹದಲ್ಲ. ಮೂಲತಃ ಪ್ರಕೃತಿಯ, ಪರಿಸರದ ಸಂಬಂಧದಿಂದ ಹುಟ್ಟಿದ್ದು. ಪ್ರಕೃತಿಯ ರಮಣೀಯತೆ ಮತ್ತು ಭೀಷಣತೆ

ಯನ್ನು ಕಂಡಾಗಲೆಲ್ಲ ಅದರ ಹಿಂದಿನ ನಿಗೂಢ ಶಕ್ತಿಯ ಬಗ್ಗೆ ನನಗೆ ಮೊದಲಿನಿಂದಲೂ ಕುತೂಹಲ. ಹಾಗೆಯೇ ತತ್ತ್ವಪದಗಳನ್ನು, ಕೆಲವು ಜಾನಪದ ಗೀತೆಗಳನ್ನೂ ಕೇಳಿದಾಗ ವಿಲಕ್ಷಣವಾದ ಅನುಭವ ಉಂಟಾಗುತ್ತಿತ್ತು. ಮುಂದೆ ವಚನ ಸಾಹಿತ್ಯದ ಅಭ್ಯಾಸ ಅದಕ್ಕೆ ಪೂರಕವಾಗಿ, ಅದಕ್ಕೊಂದು ಗಟ್ಟಿ ನೆಲೆಯನ್ನು ಒದಗಿಸಿತು....

'ಬೆಳಕಿ'ನ ಪ್ರತಿಮೆ ವಿವಿಧ ರೀತಿಯಲ್ಲಿ ನನ್ನ ಕಾವ್ಯದಲ್ಲಿ ಕಾಣಿಸಿಕೊಳ್ಳುತ್ತದೆ. ವಿದ್ಯುದ್ದೀಪಕ್ಕಿಂತ ಹಣತೆಯ ಬೆಳಕು ನನ್ನ ಅಂತರಂಗದ ಅನುಭವಕ್ಕೆ ಹೆಚ್ಚು ಸಮೀಪವೆನಿಸುತ್ತದೆ. ಚೆಂಬೆಳಕು, ಹೊಂಬೆಳಕು ಎಂಬ ಪದಗಳ ಬಳಕೆಯಲ್ಲೂ ಅನುಭಾವವನ್ನು ಪ್ರತೀಕಗೊಳಿಸುವ ಪ್ರಯತ್ನವಿದೆ. ನೆಲ-ಮುಗಿಲುಗಳ ಸಂಬಂಧವನ್ನು ಶೋಧಿಸುವ ಅಭಿವ್ಯಕ್ತಿಸುವ ನನ್ನ ಹಲವಾರು ಕವಿತೆಗಳಲ್ಲಿ ಅನುಭಾವದ ಎಳೆಗಳು ಚಿಂತನಶೀಲತೆಯ ರೂಪಕವಾಗಿ ಬಂದಿವೆ.

**ಹೊಸ ಹೊಸ ಕಾವ್ಯ ವಸ್ತುವಿಗಾಗಿ, ವಿಭಿನ್ನ ಅನುಭವಗಳಿಗಾಗಿ ಕವಿಯಾಗಿ ತಾವು ಹುಡುಕಾಟದಲ್ಲಿ ತೊಡಗುವಿರೋ ಅಥವಾ....?**

ಅಂದಂದಿಗೆ ಉಂಟಾಗುವ ಅನುಭವಗಳಿಗೆ ಸಹಜವಾಗಿ ಪ್ರತಿಕ್ರಿಯಿಸುವ ರೀತಿಯಲ್ಲಿ ಬರೆದರೂ ಅದು ನಿಮಿತ್ತ ಮಾತ್ರ. ಅದರ ಹಿಂದೆ, ಆ ಬಗೆಯ ಅನುಭವಗಳ ಗಣಿಯೇ ಇರುತ್ತದೆ. ಒಂದೇ ವಸ್ತು ಮತ್ತು ಅನುಭವದ ಬಗ್ಗೆ ಬರೆದಾಗಲೂ ಅದನ್ನು ನೋಡುವ ದೃಷ್ಟಿಕೋನದಲ್ಲಿ ಮತ್ತು ಹೇಳುವ ರೀತಿಯಲ್ಲಿ ಹೊಸ ಹೊಸ ವಸ್ತುವಿಗಾಗಿ, ವಿವಿಧ ಅನುಭವಗಳಿಗಾಗಿ ನಾನು ಕಾಯುತ್ತೇನೆ... ಹೆಚ್ಚು ಬರೆಯುವುದರಲ್ಲಿ ನನಗೆ ನಂಬಿಕೆ ಇಲ್ಲ.

**ಕಾವ್ಯಕ್ಕೆ ಓದುಗರೇ ಕಡಿಮೆ. ಅದು ಸುಲಭ ಸಂವಹನೀಯ ಅಲ್ಲ ಎಂಬುದೇ ಓದುಗರ ದೂರು. ಓದುಗ ಲೋಕದೊಂದಿಗೆ ಇಂದಿನ ಕವಿ ಮಾಡಿಕೊಳ್ಳಬೇಕಾದ ಒಪ್ಪಂದವೇನಾದರೂ ಇದೆಯೆ?**

ಕಾವ್ಯ ರಚನೆ, ಮನಸ್ಸಿನ ಏಕಾಂತದಲ್ಲಿ, ಏಕಾಗ್ರತೆಯಲ್ಲಿ ನಡೆಯುವ ಕ್ರಿಯೆಯಾಗಿದ್ದರೂ ಕವಿಯ ಸುಪ್ತ ಪ್ರಜ್ಞೆಯಲ್ಲಿ ಓದುಗ ಲೋಕವೊಂದು ಇದ್ದೇ ಇರುವುದೆಂದು ನನಗನ್ನಿಸಿದೆ. ಕವಿ ಬರೆಯುತ್ತ ಹೋದಂತೆ ತನಗೆ ತಾನೇ ಸಂಬೋಧಿಸಿ ಕೊಳ್ಳುತ್ತಾನೆ. ಆಗ ಅವನು, ಓದುಗರ ಪ್ರತಿನಿಧಿಯೂ ಆಗಿರಬೇಕಾಗುತ್ತದೆ.

"ಕಾವ್ಯಮಾನಂದಾಯ" ಎನ್ನುವುದು ನಿತ್ಯ ಸತ್ಯವಾಗಿದ್ದರೂ ಆನಂದವನ್ನು ಹಂಚಿಕೊಳ್ಳಲಿಕ್ಕೆ ಸಹೃದಯರು ಇಲ್ಲದಿದ್ದರೆ ಕವಿಗೆ ಸಮಾಧಾನ ಆಗದು. ತಕ್ಕ ಮನಸ್ಸನ್ನು ಹೋಗಿ ಮುಟ್ಟುವುದರಲ್ಲಿ, ಹೃದಯವನ್ನು ತಟ್ಟುವುದರಲ್ಲಿ ಕಾವ್ಯದ

ಸಾರ್ಥಕತೆ ಇದೆ... ತನ್ನ ಕಾವ್ಯದ ಗುಣಮಟ್ಟವನ್ನು ಕಾಯ್ದುಕೊಳ್ಳುತ್ತಲೇ ಅದು ತನ್ನ ಸಂವಹನವನ್ನು ಸಾಧಿಸುವಂತಿರಬೇಕು. ಓದುಗರ ಅಥವಾ ಕೇಳುಗರ ಪ್ರತಿಕ್ರಿಯೆಯನ್ನು ಸೂಕ್ಷ್ಮವಾಗಿ ಗಮನಿಸುತ್ತಿದ್ದರೆ ಸಂವಹನದ ಏರು-ಪೇರುಗಳು ಕವಿಗೇ ಹೊಳೆಯಬಲ್ಲವು. ಇದು ನನ್ನ ಅನುಭವವೂ ಹೌದು.

**ಕಾವ್ಯ ರಚನೆ ಪ್ರಕ್ರಿಯೆಯ ಬಗೆಗೆ ಕೇಳಬಹುದಲ್ಲ? ಕವನವೊಂದನ್ನು ಒಮ್ಮೆಗೇ (ಒಂದು ಮೆಟ್ಟಿನಲ್ಲಿ ಕೂತು) ಬರೆದು ಮುಗಿಸುವಿರೋ, ಹಂತಹಂತವಾಗಿ ಬರೆದು ಪೂರ್ತಿ ಮಾಡುವಿರೋ?**

ಎರಡೂ ಥರದಲ್ಲಿ ನಡೆಯುತ್ತದೆ. ಆದರೂ ಹಂತಹಂತವಾಗಿ ಬರೆದು ಮುಗಿಸುವುದೇ ಹೆಚ್ಚು ನಾನು. ವಿರಾಮವಿಲ್ಲದ ಇಂದಿನ ಜೀವನದ ವಿಧಾನವೇ ಇದಕ್ಕೆ ಕಾರಣ. ಒಮ್ಮೆ ತಲೆಯಲ್ಲಿ ಒಂದು ವಿಷಯ, ಅನುಭವದ ಪರಿಣಾಮ ತುಂಬಿಕೊಂಡಿದ್ದರೆ, ಏಕಾಗ್ರತೆಯಿಂದ ಅದನ್ನು ನಿಧಾನವಾಗಿ ನಿರ್ವಹಿಸುಬಹುದು. ಸ್ಫೂರ್ತಿ ಎನ್ನುವುದೂ ಬರಬರುತ್ತ ಒಂದು ಸಂಸ್ಕಾರ ವಿಶೇಷವಾಗಿ ಪರಿಣಮಿಸಬಹುದೆಂದು ನನಗನಿಸುತ್ತದೆ.

**೧೧. ನೀವು ಬರೆದದ್ದರಲ್ಲಿ ಕಾವ್ಯದ ಪಾಲು ಹೆಚ್ಚು, ಬೇರೆ ಮಾಧ್ಯಮ (ಕತೆ, ಕಾದಬಂರಿ)ದಲ್ಲಿ ನೀವೇಕೆ ಅಭಿವ್ಯಕ್ತಿ ಮಾಡಿಲ್ಲ?**

ಕಾವ್ಯವೇ ನನ್ನ ನಿಜವಾದ ಮಾಧ್ಯಮ ಅನ್ನುವುದು ಮನವರಿಕೆಯಾದ ಮೇಲೆ, ನಾನು ಅದಕ್ಕೇ ನಿಷ್ಠನಾಗಿ ಉಳಿದುಕೊಂಡೆ. ಕೆಲವು ವಿಷಯಗಳ ಬಗ್ಗೆ ಪ್ರಬಂಧ ಲೇಖನ, ವಿಮರ್ಶೆ ಬರೆದಿದ್ದೇನೆ. ಅನುಭವದ ತೀವ್ರತೆಯನ್ನು ವ್ಯಕ್ತಪಡಿಸುವಾಗ ಮಾತ್ರ ನಾನು ಕಾವ್ಯಕ್ಕೇ ಹೊರಳುತ್ತೇನೆ. ನನ್ನ ಭಾವನೆ, ಚಿಂತನೆಗಳಿಗೆ ತನ್ನ ಅಭಿವ್ಯಕ್ತಿಯನ್ನು ಅದರಲ್ಲಿ ಕಂಡು ಕೊಳ್ಳುತ್ತೇನೆ.

**ಆತ್ಮಕತೆ ಅಥವಾ ನೆನಪುಗಳ ಕುರಿತು ಬರೆಯಬೇಕೆಂದು ನಿಮಗನಿಸಿದೆಯೇ?**

ಬಿಡಿ ಲೇಖನಗಳಲ್ಲಿ, ಆತ್ಮಕತೆಯು ನೆನಪುಗಳ ರೂಪದಲ್ಲಿ ಈ ಮುಂಚೆ ಬರೆದಿದ್ದೇನೆ. ಕಾವ್ಯಕ್ಕೆ ಬೇಕಾದ ಅನುಭವದ ಸಮಗ್ರತೆಯಲ್ಲಿ ಆತ್ಮಚರಿತ್ರೆಯ ಹೊಳಹುಗಳು ಇದ್ದೇ ಇರುತ್ತವೆ. ಆದರೆ ಆತ್ಮವೃತ್ತಾಂತ ಬರೆಯಬೇಕೆಂಬ ಯೋಚನೆ ಸದ್ಯಕ್ಕಿಲ್ಲ.

**ಕಾವ್ಯರಚನೆ ಹೊರತು, ಕವಿಗೆ ಬೇರೆ ಯಾವ ತರದ ಕೆಲಸಗಳಿರಬೇಕೆಂದು ನಿಮಗನ್ನಿಸಿದೆ?**

'ಕವಿ' ಅನ್ನುವ ವಿಶೇಷ ಗುಣವೊಂದನ್ನು ಬಿಟ್ಟರೆ, ಉಳಿದ ಹೊತ್ತಿನಲ್ಲಿ ಅವನೂ ಒಬ್ಬ ಸಾಮಾನ್ಯ ವ್ಯಕ್ತಿಯೇ, ಆದುದರಿಂದ ಕೌಟುಂಬಿಕ ಹಾಗೂ ಸಾಮಾಜಿಕ ಕಾರ್ಯಗಳಲ್ಲಿಯೂ ಅವನು ಆಸ್ಥೆ ವಹಿಸಬೇಕು. ಉಳಿದ ಕಲಾ ಮಾಧ್ಯಮಗಳ ಬಗೆಗೆ, ಶಾಸ್ತ್ರ ವಿಷಯ ಸಂಗತಿಗಳ ಬಗ್ಗೆ ಸಾಧ್ಯವಿದ್ದಷ್ಟು ತಿಳಿದುಕೊಳ್ಳಬೇಕು. ಪತ್ರಿಕೆಗಳನ್ನು ತಪ್ಪದೆ ಓದಬೇಕು. ನಾಡಿನಲ್ಲಿ ಸುತ್ತಾಡಬೇಕು, ತಾನೊಬ್ಬ ಗೌರವಕ್ಕೆ ಪಾತ್ರನಾದ ವ್ಯಕ್ತಿ ಎಂಬುದನ್ನು ತಲೆಗೆ ಏರಿಸಿಕೊಳ್ಳದೆ ಸಾಮಾನ್ಯರಲ್ಲಿ ಸಾಮಾನ್ಯವಾಗಿ ಬೆರೆಯಬೇಕು......

ಈ ಸಂದರ್ಭದಲ್ಲಿ ಲೂಯಿ ಮ್ಯಾಕ್‌ನೀಸ್ ಹೇಳಿದ್ದು ನೆನಪಾಗುತ್ತಿದೆ. ಅದನ್ನು ಕೇಳಿ : "My own prejudice is in favour of poets, whose worlds fare not so esoteric. I would have a poets able-bodied, fond of talking, a reader of newspapers, capable of pity and laughter, informed in economics; appreciative of women; involved in personal relationships, actively interested in politics; susceptible to physical impressions...."

**ಐವತ್ತು ವರ್ಷಗಳಿಂದ ಕನ್ನಡ ಕವಿತೆಯೊಂದಿಗೆ ಬಾಳಿ, ಬೆಳೆದು ಬಂದಿದ್ದೀರಿ. ನಮ್ಮ ಕವಿತೆಯ ಭವಿಷ್ಯ ಹೇಗಿರುವುದೆಂದು ಕಲ್ಪಿಸುತ್ತೀರಿ?**

ನವೋದಯದ ಭಾವಗೀತಾತ್ಮಕತೆ ಮತ್ತು ಗೇಯತೆಗಳು ಬೇರೊಂದು ರೀತಿಯಲ್ಲಿ ಇವತ್ತಿನ ಕನ್ನಡ ಕವಿತೆಯೊಳಗೆ ಕಾಣಿಸುತ್ತಿವೆ. ನಮ್ಮ ಸಂಸ್ಕೃತಿಯಲ್ಲಿಯ ಅಮಾನವೀಯ ಅಂಶಗಳನ್ನು ತಿರಸ್ಕರಿಸಿ ಸಾಮಾಜಿಕ ಕಳಕಳಿಯಿಂದ ಕೂಡಿದ ರಸಾಭಿಜ್ಞತೆ ಮತ್ತು ಸೌಂದರ್ಯ ಸಂಸ್ಕಾರ ನಮ್ಮ ಮುಂದಿನ ಕಾವ್ಯದ ಪ್ರಧಾನ ಕಾಳಜಿ ಆಗಬಹುದೆಂದು ತೋರುತ್ತದೆ. ಈ ದಿಸೆಯಲ್ಲಿ ಹೊಸ ಪ್ರಯೋಗಗಳು ವಿರಳವಾದರೂ ಅದರ ಸೂಚನೆ ಅಲ್ಲಲ್ಲಿ ಕಂಡು ಬರುತ್ತಿದೆ... ಯಾವುದೇ ಹೊಸ ಪ್ರಯೋಗ, ಪರಂಪರೆಯ ತಳಹದಿಯ ಮೇಲೆ ನಡೆದಿದ್ದಾದರೆ ಅದು ಗಟ್ಟಿತನವನ್ನು ಪಡೆಯಲು ಸಮರ್ಥವಾಗುತ್ತದೆ.

*

# ಕವಿ-ಕಾವ್ಯ ಚಿಂತನ

● ಗುರುಲಿಂಗ ಕಾಪಸೆ

**ಕಾವ್ಯ ನಿರ್ಮಿತಿಗೆ ಪರಂಪರೆ ಮತ್ತು ಸಮಕಾಲೀನ ವಾತಾವರಣಗಳು ಮುಖ್ಯ ಕಾರಣಗಳಾಗುತ್ತವೆ. ಈ ದೃಷ್ಟಿಯಿಂದ ತಮ್ಮ ಕಾವ್ಯ ನಿರ್ಮಿತಿಗೆ ಹಿನ್ನೆಲೆಯಾದ ಪರಂಪರೆ ಮತ್ತು ಪ್ರೇರಣೆ ನೀಡಿದ ವಾತಾವರಣ ಎಂತಹದು?**

ಕನ್ನಡ ಕಾವ್ಯಕ್ಕೆ ಸಾವಿರ ವರುಷಗಳ ಅವಿಚ್ಛಿನ್ನ ಪರಂಪರೆಯಿದೆ. ಪ್ರಾರಂಭದಲ್ಲಿ ನನ್ನ ಕಿವಿಯ ಮೇಲೆ ಬಿದ್ದ ಅನುಭಾವ ಪದಗಳು, ನಾನು ಪಠ್ಯದಲ್ಲಿ ಓದಿದ ಹಳಗನ್ನಡ ಪದ್ಯಗಳು, ಕನ್ನಡ ಭಾಷೆ ಹಾಗೂ ಕಾವ್ಯದ ಬಗ್ಗೆ ಕುತೂಹಲ ಹುಟ್ಟಿಸಿದವು. ಬಿ.ಎಂ. ಶ್ರೀಯವರು ಸಂಪಾದಿಸಿದ. 'ಕನ್ನಡ ಬಾವುಟ'ದಲ್ಲಿ ಶಾಸನಗಳಿಂದ ಮೊದಲುಗೊಂಡು ಆಧುನಿಕ ಭಾವಗೀತೆಗಳವರೆಗಿನ ಆಯ್ದ ಪದ್ಯಗಳಿವೆ. ನಾನು ಹಾಯಸ್ಕೂಲಿನಲ್ಲಿದ್ದಾಗಲೆ ಈ ಸಂಕಲನ ನನ್ನ ಕೈಗೆ ಸಿಕ್ಕಿತು. ಅದರ ಓದಿನಿಂದ ಕನ್ನಡ ಕಾವ್ಯ ಪರಂಪರೆಯ ಹಿನ್ನೆಲೆ ಸಂಕ್ಷಿಪ್ತವಾಗಿ ನನ್ನ ಮನಸ್ಸಿನಲ್ಲಿ ಮೂಡಿ ನಿಂತಿತು.

ಆಧುನಿಕ ಕನ್ನಡ ಕಾವ್ಯದ ಹಿರಿಯ ಕವಿಗಳಲ್ಲಿ ಸಮಕಾಲೀನ ಸ್ಪಂದನವಿತ್ತು. ಹಿಂದಿನ ಕಾವ್ಯಗಳಿಗಿಂತ ಭಿನ್ನವಾದ ಒಂದು ಬಗೆಯ ಸ್ವತಂತ್ರ ಮನೋಧರ್ಮ, ನಿರೂಪಣೆ, ವರ್ಣನೆ, ಛಂದೋವಿಲಾಸ ಇವರ ಕಾವ್ಯದ ಆಕರ್ಷಣೆಯಾಗಿತ್ತು. ಧಾರವಾಡದ ಸಭೆ ಸಮಾರಂಭಗಳಲ್ಲಿ ಜರುಗುತ್ತಿದ್ದ ಕಾವ್ಯ ಗಾಯನ ಕಾರ್ಯಕ್ರಮ, ಬೇಂದ್ರೆಯವರಂಥ ಕವಿಗಳ ಕಾವ್ಯವಾಚನ ಇವೆಲ್ಲ ಆಗಿನ ಧಾರವಾಡದ ವಾತಾವರಣವನ್ನು ಕಾವ್ಯಮಯವಾಗಿಸಿದ್ದವು. ಇದರಿಂದ ಕಾವ್ಯದ ಬಗೆಗಿನ ಆಸಕ್ತಿ, ಪ್ರೀತಿ, ಹುಟ್ಟಿದ್ದಲ್ಲದೆ ನನಗೆ ಕವಿತೆ ಬರೆಯಲು ಪ್ರೇರಣೆ ದೊರೆಯಿತು.

**ನವೋದಯ ಕಾವ್ಯ ಪ್ರಾರಂಭವಾದ ಎರಡು ದಶಕಗಳ ಮೇಲೆ ತಾವು ಕಾವ್ಯರಚನೆಗೆ ತೊಡಗಿದಾಗ ಕನ್ನಡ ಕಾವ್ಯದ ಮುಂದೆ ಯಾವ ಯಾವ ಸವಾಲುಗಳಿದ್ದವು? ನಾಡಿನ, ರಾಷ್ಟ್ರದ ನಿರ್ಮಾಣದಲ್ಲಿ ಕಾವ್ಯ ಹೇಗೆ ತುಡಿಯುತ್ತಿತ್ತು?**

ನಾನು ಕಾವ್ಯ ರಚನೆಗೆ ತೊಡಗಿದಾಗ ಕನ್ನಡ ಕಾವ್ಯದ ಮುಂದೆ ಯಾವ ಯಾವ ಸವಾಲುಗಳಿದ್ದವು ಎಂಬುದನ್ನು ನಾನು ನಿರ್ದಿಷ್ಟವಾಗಿ ಅರಿಯೆ. ಆದರೆ ಕರ್ನಾಟಕ ಏಕೀಕರಣ, ಭಾರತದ ಸ್ವಾತಂತ್ರ್ಯ ತುಡಿತ ಸ್ಪಷ್ಟವಾಗಿತ್ತು. ನಮ್ಮ ಸಾಂಸ್ಕೃತಿಕ ಕಾಳಜಿಯೂ ವಿಶೇಷವಾಗಿತ್ತು. ಕಾವ್ಯ ರಚನೆಗೇ ಸಂಬಂಧಿಸಿ ಹೇಳುವುದಾದರೆ ವೈಯಕ್ತಿಕವಾಗಿ ನನಗೆ, ನನ್ನಂಥ ಉದಯೋನ್ಮುಖರಿಗೆ ಇದ್ದ ಮುಖ್ಯ ಸವಾಲೆಂದರೆ ನಮ್ಮ ರಚನೆಗಳು ಕೇವಲ ಅನುಕರಣೆಯಾಗಬಾರದೆಂಬುವುದು. ಪ್ರಭಾವವನ್ನು ಅರಗಿಸಿಕೊಂಡು ನಮ್ಮದೇ ಆದ ಮಾತು, ರೀತಿಯನ್ನು ಸಾಧಿಸಿಕೊಳ್ಳಬೇಕು ಎಂಬುದು. 'ಕವಿತೆ ಚೆನ್ನಾಗಿದೆ' ಎಂದು ಯಾರಾದರೂ ಮೆಚ್ಚಿಗೆಯ ಮಾತನ್ನಾಡಿದರೆ ಅದೇ ಒಂದು ಸಂತೋಷದ ಸಂಗತಿಯಾಗುತಿತ್ತು. ದೇಶದ ಸ್ವಾತಂತ್ರ್ಯಕ್ಕಾಗಿ ಚಳವಳಿ ತೀವ್ರಗೊಳ್ಳುತ್ತಿದ್ದ ಕಾಲವದು. ಜೊತೆಗೆ ಕನ್ನಡ ನಾಡು, ನುಡಿಯ ಬಗ್ಗೆ ಅಭಿಮಾನ ಜಾಗೃತಗೊಳ್ಳುತ್ತಿತ್ತು. ಕರ್ನಾಟಕ ಏಕೀಕರಣದ ಬಗೆಗೆ ಆಗಾಗ ಸಭೆಗಳು ನಡೆಯುತ್ತಿದ್ದವು. ಹಿರಿಯ ಕವಿಗಳ ಕಾವ್ಯವಸ್ತುಗಳಲ್ಲಿ ನಾಡುಪ್ರೇಮ, ದೇಶಭಕ್ತಿ- ಈ ಎರಡೂ ಅಂಶಗಳು ಒಡೆದು ಕಾಣುತ್ತಿದ್ದವು. ಸಹಜವಾಗಿಯೇ ತರುಣ ಕವಿಗಳೂ ಅಂದಿನ ಪರಿಸ್ಥಿತಿಗೆ ಸ್ಪಂದಿಸುತ್ತಿದ್ದರು. ಬಹುಶಃ ನಾಡಿನ ಬಗ್ಗೆ ಬರೆಯದೇ ಇದ್ದ ಕವಿಗಳೇ ಆಗ ಇರಲಿಲ್ಲವೆಂದು ಹೇಳಬಹುದು.

**ನಗರ ಜೀವನಕ್ಕಿಂತ ಗ್ರಾಮೀಣ ಬದುಕು ತಮಗೆ ಹೆಚ್ಚು ಪ್ರಿಯವಾಗಿದ್ದುದು ತಮ್ಮ ಕವಿತೆಗಳಿಂದ ಕಂಡು ಬರುತ್ತದೆ. ಇದಕ್ಕಿರುವ ಹಿನ್ನೆಲೆಯೇನು?**

ನಾನು ಹಳ್ಳಿಯಲ್ಲಿಯೇ ಹುಟ್ಟಿ ಹಳ್ಳಿಯಲ್ಲಿಯೇ ಬೆಳೆದವನು. ನನ್ನ ಬಾಲ್ಯ ಜೀವನದ ಮೇಲೆ ಗ್ರಾಮೀಣ ಬದುಕಿನ ಪ್ರಭಾವ ವಿಶೇಷವಾಗಿದೆ. ೫೦-೬೦ ವರ್ಷಗಳ ಹಿಂದೆ ಹಳ್ಳಿಗಳು ಹೇಗಿದ್ದವೆಂಬುದನ್ನು ನೀವು ಬಲ್ಲಿರಿ. ನಮ್ಮ ಊರಲ್ಲಿ ಎಲ್ಲ ವೃತ್ತಿಯ ಜನರೂ ಇದ್ದರು. ಬಡಿಗ, ಕಮ್ಮಾರ, ಕುಂಬಾರ, ಅಕ್ಕಸಾಲಿಗ ಇತ್ಯಾದಿ. ಒಕ್ಕಲುತನವೇ ಅಲ್ಲಿಯ ಮುಖ್ಯ ಉದ್ಯೋಗ. ಎಲ್ಲರೂ ದುಡಿಯುತ್ತಿದ್ದರು. ಬಡತನ ಸಾಮಾನ್ಯ ವಾಗಿದ್ದರೂ ಬದುಕಿನ ಶ್ರದ್ಧೆಯಿಂದ, ಪರಸ್ಪರ ಪ್ರೀತಿ, ವಿಶ್ವಾಸಗಳಿಂದ ಒಂದು ಬಗೆಯ ತೃಪ್ತಿ ಇತ್ತು. ನಮ್ಮ ಊರಿನ ಎಲೆವಳ್ಳಿ ತೋಟಗಳು, ಗುಡ್ಡದ ಸಾಲು, ಜೋಳ, ಗೋಧಿ, ಹತ್ತಿ, ಅಕ್ಕಡಿಕಾಳು ಇತ್ಯಾದಿ ಬೆಳೆಗಳಿಂದ ತುಂಬಿ ತೊನೆಯುತ್ತಿದ್ದ ಹೊಲಗಳು, ಬಯಲು ಸೀಮೆಯ ಸೊಬಗು ಮುಂತಾದವು ನನ್ನ ಮನಸ್ಸನ್ನೆಲ್ಲ ತುಂಬಿಕೊಂಡಿದ್ದವು. ಲಂಬಾಣಿಗಳ ಕುಣಿತ, ಹಬ್ಬ ಹುಣ್ಣಿಮೆಗಳಲ್ಲಿ ಜನರು ಪಡುತ್ತಿದ್ದ ಸಂಭ್ರಮ, ಜನಪದ ಹಾಡುಗಳು, ಡೊಳ್ಳು, ಕರಡಿ ಮಜಲು ಇವೆಲ್ಲ ನನ್ನಲ್ಲಿ

ಜೀವನೋತ್ಸಾಹವನ್ನು ತುಂಬಿ ಜನಪದ ಸಂಸ್ಕಾರ ಒದಗಿಸಿದವು. ಅದು ಇಂದಿಗೂ ನನ್ನಲ್ಲಿ ಅಚ್ಚಳಿಯದೆ ಉಳಿದುಕೊಂಡಿದೆ. 'ಭಾವಜೀವಿ' ಕಾವ್ಯದಲ್ಲಿ ಅಂದಿನ ಚಿತ್ರಗಳಿವೆ. ಆ ಮೇಲಿನ ಕಾವ್ಯದಲ್ಲಿಯೂ ಪ್ರತಿಮೆ, ಸಂಕೇತಗಳ ರೂಪದಲ್ಲಿ ಅದು ಕಾಣಿಸಿಕೊಳ್ಳುತ್ತಿವೆ.

**ತಾವು ಕಾವ್ಯ ರಚನೆಗೆ ತೊಡಗಿದ ಸಂದರ್ಭದಲ್ಲಿ ಕನ್ನಡದಲ್ಲಿ ಪ್ರಗತಿಶೀಲ ಚಳುವಳಿ ಪ್ರಾರಂಭವಾಗಿತ್ತು. ಈ ಚಳುವಳಿಯ ಪರಿಣಾಮ ತಮ್ಮ ಕಾವ್ಯದ ಮೇಲೆ ಎಷ್ಟರಮಟ್ಟಿಗೆ ಆಯಿತು?**

ನಾನು ವಿದ್ಯಾರ್ಥಿಯಾಗಿರುವಾಗ ಪ್ರಗತಿಶೀಲ ಸಾಹಿತ್ಯದ ಚಳವಳಿ ಪ್ರಬಲವಾಗಿತ್ತು. ಬಸವರಾಜ ಕಟ್ಟೀಮನಿ ಹಾಗೂ ನಿರಂಜನರ ಪರಿಚಯವೂ ಆಗಿತ್ತು. ಪರಸ್ಪರ ಸ್ನೇಹವೂ ಬೆಳೆದಿತ್ತು. ನನ್ನ ಆತ್ಮೀಯ ಕವಿಮಿತ್ರರಾದ ಶಿವೇಶ್ವರ ದೊಡ್ಡಮನಿ ನಿರಂಜನರ 'ಜನಶಕ್ತಿ' ವಾರಪತ್ರಿಕೆಯಲ್ಲಿ ಸಹಸಂಪಾದಕರಾಗಿ ಕಾರ್ಯ ಮಾಡುತ್ತಿದ್ದರು. 'ಉಷಾ' ವಾರಪತ್ರಿಕೆಯಲ್ಲಿ ಸಹಸಂಪಾದಕರಾಗಿ ಕಾರ್ಯ ಮಾಡುತ್ತಿದ್ದರು. 'ಉಷಾ' ಪತ್ರಿಕೆ ಒಂದು ರೀತಿಯಲ್ಲಿ ಪ್ರಗತಿಶೀಲರ ಮುಖವಾಣಿಯಾಗಿತ್ತು. ಈ ಚಳುವಳಿಯ ಪರಿಣಾಮ ಕೆಲಮಟ್ಟಿಗೆ ನನ್ನ ಕಾವ್ಯದ ಮೇಲೆ ಆಯಿತು. ನಾನು ಆಗ ಬರೆದ, 'ಆಕಾಶ ಬುಟ್ಟಿ' ಕವನ ಸಂಗ್ರಹದಲ್ಲಿರುವ 'ಕೊನೆಯ ಎಚ್ಚರಿಕೆ' 'ಸಾವುದೆಲ್ಲಾ ಸತ್ತು', 'ಹೊಸಬಾಳು ನಮ್ಮದಿದೆ' 'ರೈಲು ಬಂಟ' ಇವೇ ಮೊದಲಾದ ಕವಿತೆಗಳಲ್ಲಿ ಅದನ್ನು ಕಾಣಬಹುದು.

**ನವ್ಯಕಾವ್ಯದ ಅಬ್ಬರಣೆಯಲ್ಲಿ ತಾವು ಉತ್ತಮವಾದ ನವ್ಯಕವಿತೆಗಳನ್ನು ಬರೆದಿದ್ದರೂ ಅಪ್ಪಟವಾದ ನವ್ಯ ಕವಿಗಳೆನಿಸಲಿಲ್ಲ. ಈ ಸಂದರ್ಭದಲ್ಲಿಯೇ ತಮ್ಮನ್ನು ಸಮನ್ವಯ ಕವಿಗಳೆಂದು ಗುರುತಿಸಲಾಯಿತು. ಈ ಬಗ್ಗೆ ತಮ್ಮ ಅಭಿಪ್ರಾಯವೇನು?**

ನವ್ಯಕಾವ್ಯದಲ್ಲಿಯ ಒಳ್ಳೆಯ ಅಂಶಗಳನ್ನು ಸ್ವೀಕರಿಸುವಾಗಲೂ ನಾನು ನನ್ನ ರೀತಿಯಲ್ಲಿಯೇ ಮುಂದುವರಿದೆ. ಆಡು ನುಡಿ, ಮಾತಿನ ಲಯ, ಮುಕ್ತ ಛಂದ, ವಾಸ್ತವ ದೃಷ್ಟಿ ಇವುಗಳನ್ನು ನನ್ನದಾಗಿ ಪರಿವರ್ತಿಸಿಕೊಂಡೆ.

ನನ್ನದು ಗುಣಗ್ರಾಹಕ ದೃಷ್ಟಿ, ಎಲ್ಲೆಲ್ಲಿ ಒಳ್ಳೆಯದಿದೆಯೋ, ಪ್ರಗತಿಪರ ವಾಗಿದೆಯೋ ಅದನ್ನು ಹೀರಿಕೊಂಡು ಪುಷ್ಟಿ ಪಡೆಯಬೇಕು. ಅದರಿಂದ ಉತ್ತಮ ಬೆಳವಣಿಗೆ ಸಾಧ್ಯ. ನವೋದಯ ಕವಿಗಳನ್ನು ಪ್ರತಿಭಟಿಸಿ, ಅವರ ಕಾವ್ಯದಲ್ಲಿಯ ಗುಣಗಳ ಬಗ್ಗೆ ಕಣ್ಣು ಮುಚ್ಚಿಕೊಳ್ಳುವಂತೆ ಮಾಡಿ, ತಮ್ಮದೇ ಶ್ರೇಷ್ಠ ಕಾವ್ಯ ಎಂದು ಹೇಳಿಕೊಂಡು ಹೊರಟ ಕೆಲವು ನವ್ಯರ ರೀತಿ ನನಗೆ ಹಿಡಿಸಲಿಲ್ಲ. ಅಪ್ಪಟ ನವ್ಯ ಕವಿಯಾಗಬೇಕೆಂಬ ಇಚ್ಛೆ ನಮಗೆ ಇರಲೇ ಇಲ್ಲ.

ಭಿನ್ನ ಭಿನ್ನ ಕಾವ್ಯ ಮಾರ್ಗಗಳಲ್ಲಿ, ಧಾಟಿ-ಧೋರಣೆಗಳಲ್ಲಿ ಸಮನ್ವಯವನ್ನು ಸಾಧಿಸುವುದು ಹಗುರಾದ ಕೆಲಸವಲ್ಲ. ಅದಕ್ಕೆ ಹಿತಮಿತವಾದ ವಿಶಿಷ್ಟ ಮನೋಧರ್ಮ ಬೇಕಾಗುತ್ತದೆ. ನವೋದಯ-ನವ್ಯಗಳ ಸಮನ್ವಯ ನನ್ನ ಕಾವ್ಯದಲ್ಲಿ ಸಹಜವಾಗಿ, ಸ್ವಾಭಾವಿಕನವಾಗಿ ಸಂಭವಿಸಿದ್ದೇ ಹೊರತು ಉದ್ದೇಶಪೂರ್ವಕವಾಗಿ ಮಾಡಿದ್ದಲ್ಲ. ಭಾವ-ಬುದ್ಧಿಗಳು ಸಮನ್ವಯಗೊಳ್ಳದಿದ್ದರೆ ಗಟ್ಟಿಕಾವ್ಯ ರೂಪುಗೊಳ್ಳುವುದು ಹೇಗೆ ಸಾಧ್ಯ? ಅಂದ ಮೇಲೆ, ಸಮನ್ವಯದ ಗುಣ ಲಕ್ಷಣಗಳನ್ನು ಗುರುತಿಸಬಹುದೇ ಹೊರತು 'ಸಮನ್ವಯ ಕವಿ' ಎಂಬ ಹಣೆಪಟ್ಟಿ ಹಚ್ಚುವುದು ಸಮಂಜಸವಲ್ಲ. ಯಾಕೆಂದರೆ ಅದು ಕೂಡ ಬೆಳವಣಿಗೆಯನ್ನು ಸಾಧಿಸುತ್ತ ಮುನ್ನಡೆಯಬೇಕಾಗುತ್ತದೆ.

**ಕವಿಗೆ ಸಾಮಾಜಿಕ ಬದ್ಧತೆ ಇರಬೇಕು. ಆದರೆ ಅದು ರಾಜಕೀಯ ಘೋಷಣೆಯಾಗ ಬಾರದು ಎಂಬ ಮಾತು ಕೇಳಿಬರುತ್ತಲಿದೆ. ಹಾಗಿದ್ದರೂ ಇಂದಿನ ಪರಿಸ್ಥಿತಿಯಲ್ಲಿ ರಾಜಕೀಯವನ್ನು ದೂರವಿರಿಸುವುದು ಸಾಧ್ಯವಿಲ್ಲ ಎನಿಸುತ್ತದೆ. ಕವಿಗಳು ಇದನ್ನು ಹೇಗೆ ನಿಭಾಯಿಸಬಹುದು?**

ಕವಿಯೂ ಒಬ್ಬ ಸಮಾಜ ಜೀವಿ. ಅದರ ಆಗು-ಹೋಗುಗಳಲ್ಲಿ ಅವನೂ ಪಾಲುಗಾರ. 'ಬದ್ಧತೆ' ಎಂಬ ಶಬ್ದಕ್ಕಿಂತ 'ಪ್ರಜ್ಞೆ' ಎಂಬ ಪದಕ್ಕೆ ನಾನು ಒತ್ತು ಕೊಡುತ್ತೇನೆ. ಕವಿಗೆ ಸಾಮಾಜಿಕ ಪ್ರಜ್ಞೆಯಿದ್ದರೆ ಅವನು ಜನಜೀವನಕ್ಕೆ ಹೆಚ್ಚು ಸೂಕ್ತವಾಗಿ ಸ್ಪಂದಿಸಬಲ್ಲ. ಇಂದಿನ ಪರಿಸ್ಥಿತಿಯಲ್ಲಿ ರಾಜಕೀಯವನ್ನು ದೂರವಿಡುವ ಪ್ರಶ್ನೆಯೇ ಇಲ್ಲ. ರಾಜಕೀಯ ಪ್ರಜ್ಞೆಯಿಂದ ಕಾವ್ಯಕ್ಕೆ ಹೊಸ ಆಯಾಮ ದೊರಕುತ್ತದೆ. ಆದರೆ ಉಳಿದ ವಸ್ತುಗಳಂತೆ ರಾಜಕೀಯ ಕಾವ್ಯದಲ್ಲಿ ಬೇಗ ಕರಗುವುದಿಲ್ಲ. ಅದಕ್ಕಾಗಿ ಕಾಯಬೇಕು. ತಾತ್ಕಾಲಿಕವಾದ ಪ್ರತಿಕ್ರಿಯೆ ಪಕ್ಷಾತೀತವಾಗಿರಲು ಸಾಧ್ಯವಿಲ್ಲ. ಕೇವಲ ಬೀದಿಯ ಕೂಗುಗಳು, ಘೋಷಣೆಗಳು ಕಾವ್ಯವಾಗಲಾರವು.

**ಈ ಎರಡು ದಶಕಗಳಲ್ಲಿ ಕವಿಗಳ ಸಂಖ್ಯೆ ಬಹುಪ್ರಮಾಣದಲ್ಲಿ ಹೆಚ್ಚಿದೆ. ಆದರೆ ಗಟ್ಟಿಕಾಳುಗಳ ಕೊರತೆ ಕಂಡು ಬರುತ್ತಿದೆ. ಈ ಬಗ್ಗೆ ನಿಮ್ಮ ಅನಿಸಿಕೆ ಏನು?**

ಜನಸಂಖ್ಯಾ ಪ್ರಮಾಣಕ್ಕೆ ತಕ್ಕಂತೆ ಕವಿಗಳ ಸಂಖ್ಯೆಯೂ ಹೆಚ್ಚಾಗಿದ್ದರೆ, ಅದರಲ್ಲಿ ಆಶ್ಚರ್ಯ ಪಡುವಂತಹದೇನೂ ಇಲ್ಲ. ಆದರೆ ಬಹಳ ಜನರು ಕವಿಗಳಾಗಬೇಕೆಂದು ಆತುರ ಪಡುತ್ತಾರೆಯೇ ಹೊರತು ಕಾವ್ಯದ ಬಗ್ಗೆ ನಿಜವಾದ ಕಲ್ಪನೆಯನ್ನೇ ಹೊಂದಿರುವದಿಲ್ಲ. ಅದು ಒಂದು ಕಲೆಯೆಂಬುದನ್ನು ಅವರು ಅರಿಯರು. ಕಾವ್ಯದ ಅಭ್ಯಾಸವನ್ನಂತೂ ಕೇಳುವುದೇ ಬೇಡ. ನಿಜವಾದ ಕಾವ್ಯ ಪರಿಣಾಮವೇ ಬೇರೆ ಎಂಬುದನ್ನು ಅಂಥವರು ತಿಳಿದು ಕೊಳ್ಳುವವರೆಗೆ, ಅವರು ಬರೆಯುವುದೆಲ್ಲ ವ್ಯರ್ಥ.

ಕಾವ್ಯ ರಚನೆ ಮಾಡುವುದು ಸುಲಭವಲ್ಲ. ಪ್ರತಿಭೆಯೊಂದಿಗೆ ಪರಿಶ್ರಮದಿಂದ ಸಾಧಿಸಬೇಕಾದ ಕಲೆ ಅದು. ನಾವು ಬರೆದದ್ದೆಲ್ಲವೂ ಉತ್ತಮವಾಗಿರುವುದಿಲ್ಲ. ಎಲ್ಲ ದೃಷ್ಟಿಯಿಂದ ಯಶಸ್ವೀ ಎನಿಸುವಂಥವು ಎಲ್ಲಿಯೋ ಕೆಲವು ಮಾತ್ರ. ಹೀಗಿರುವಾಗ ಗಟ್ಟಿಕಾಳುಗಳ ಕೊರತೆ ಕಂಡುಬರದೇನು ಮಾಡೀತು?

**ದೂರದರ್ಶನದ ಪ್ರಭಾವ, ಇಂಗ್ಲೀಷ್ ಮಾಧ್ಯಮ ಶಾಲೆಗಳ ಆಕರ್ಷಣೆ ಕನ್ನಡ ಭಾಷೆ, ಮತ್ತು ಸಾಹಿತ್ಯಗಳ ಮೇಲೆ ದಾಳಿ ನಡೆಸಿರುವುದು ಕಂಡು ಬರುತ್ತಿದೆ. ಈ ದಾಳಿಯನ್ನು ಎದುರಿಸುವುದು ಹೇಗೆ?**

ಪ್ರಾಥಮಿಕ ಏಳನೆಯ ತರಗತಿಯವರೆಗಿನ ಶಿಕ್ಷಣ ಮಾತೃಭಾಷೆಯಲ್ಲಿಯೇ ನಡೆಯಬೇಕು. ಆಗ ಕನ್ನಡ ಭಾಷೆ, ಸಾಹಿತ್ಯಗಳ ಬಗ್ಗೆ ಸರಿಯಾದ ಜ್ಞಾನವುಂಟಾಗಿ ಅಭಿರುಚಿಯೂ ಬೆಳೆಯುತ್ತದೆ. ಇಂಗ್ಲೀಷ್ ಮಾಧ್ಯಮದಿಂದ ನಿಜವಾದ ತಿಳಿವಳಿಕೆಯುಂಟಾಗದೆ ಉರು ಹೊಡೆಯುವ ಕೆಟ್ಟ ಅಭ್ಯಾಸಕ್ಕೆ ಎಳೆಯ ಮನಸ್ಸಗಳನ್ನು ಈಡು ಮಾಡಿ ಹಿಂಸಿಸಲಾಗುತ್ತಿದೆ. ನಾವು ನೀವು ಕಲಿಯುವಾಗ ಕನ್ನಡ ಮುಲ್ಕೀ ಪರೀಕ್ಷೆಯ ನಂತರ ಇಂಗ್ಲೀಷ್ ಶಾಲೆಗೆ ಹೋಗುತ್ತಿದ್ದೆವು. ಮಾತೃಭಾಷೆಯ ಮೂಲಕ ಪಡೆದ ಜ್ಞಾನದಿಂದ ಇಂಗ್ಲೀಷ್ ಕಲಿಯುವುದೂ ಸುಲಭವೆನಿಸುತ್ತಿತ್ತು. ಇಂಗ್ಲಿಷನ್ನು ಒಂದು ಭಾಷೆಯಾಗಿ ಕಲಿಯುವುದಕ್ಕೂ ಹಾಗೂ ಆ ಭಾಷೆಯ ಮೂಲಕ ಇತರ ವಿಷಯಗಳನ್ನು ಕಲಿಯುವುದಕ್ಕೂ ಇರುವ ವ್ಯತ್ಯಾಸವೇ ಇದು.

ದೂರದರ್ಶನವನ್ನು ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಉದ್ದೇಶಗಳಿಗಾಗಿ ಬಳಸಿದರೆ ಅದು ಕೆಲಮಟ್ಟಿಗೆ ಪ್ರಯೋಜನಕಾರಿಯಾಗಬಹುದು. ಆದರೆ ಸ್ಥಿತಿ ಅದಕ್ಕೆ ವಿರುದ್ಧವಾಗಿದೆ. ಮಕ್ಕಳಿಗಂತೂ ಅವರ ಮಾನಸಿಕ ಹಾಗೂ ಬೌದ್ಧಿಕ ಬೆಳವಣಿಗೆಗೆ ಸಹಾಯಕವಾಗಬಲ್ಲ ಕಾರ್ಯಕ್ರಮಗಳು ದೂರದರ್ಶನದಲ್ಲಿ ಬಹಳ ಕಡಿಮೆ. ಅಪದ್ದ, ಅಶ್ಲೀಲ ಜಾಹೀರಾತುಗಳು ಬೇರೆ. ಪಾಲಕರು ಆಯ್ಕೆ ಮಾಡಿ ಯೋಗ್ಯ ಕಾರ್ಯಕ್ರಮಗಳನ್ನು ಮಕ್ಕಳಿಗೆ ನೋಡಲು ಬಿಡಬೇಕು. ಆದರೆ ಅದೊಂದು ಚಟವಾಗಿ ಎಲ್ಲವನ್ನೂ ನೋಡುತ್ತ ಕೂಡುವುದರಿಂದ ಮಕ್ಕಳಲ್ಲಿ ಪುಸ್ತಕ ಓದುವ ಹವ್ಯಾಸವೇ ಇಂಗಿ ಹೋಗುತ್ತದೆ.

ಈ ದಾಳಿಯನ್ನು ತಪ್ಪಿಸಲು ದೂರದರ್ಶನದಲ್ಲಿ ಒಳ್ಳೆಯ ಕಾರ್ಯಕ್ರಮ ಬರುವಂತೆ ಸರಕಾರದ ಮೇಲೆ ಒತ್ತಡ ತರಬೇಕು. ಒಳ್ಳೊಳ್ಳೆಯ ಕತೆ, ಕಾದಂಬರಿಗಳನ್ನು ಧಾರವಾಹಿಯಾಗಿ ನೀಡುವಂತಾಗಬೇಕು. ಮನರಂಜನೆಯ ಜೊತೆಗೆ ಮನೋವಿಕಾಸವೂ ಸಾಧಿಸುವಂತಾಗಬೇಕು. "ಟಿ.ವಿ. ಬಿಡಿ, ಪುಸ್ತಕ ಹಿಡಿ" ಎಂಬ ಆಂದೋಲನ ಶಾಲೆಗಳಲ್ಲಿ

ಹಾಗೂ ಶಾಲೆಗಳ ಮುಖಾಂತರ ನಡೆಯಬೇಕು.

**ಇನ್ನೊಂದು ಸಮಸ್ಯೆ, ಪ್ರತಿಭಾವಂತ ಹುಡುಗರು ತಾಂತ್ರಿಕ ಮತ್ತು ವೃತಿಪರ ಶಿಕ್ಷಣದ ಕಡೆಗೆ ಸಾಗುತ್ತಿರುವುದರಿಂದ, ಸಾಮಾನ್ಯ ಮಟ್ಟದವರು ಸಾಹಿತ್ಯ ಕ್ಷೇತ್ರದಲ್ಲಿ ಉಳಿದುಕೊಳ್ಳುತ್ತಿರುವುದು ಕಂಡು ಬರುತ್ತಿದೆ. ಪ್ರತಿಭಾವಂತರ ಅಭಾವವಾದರೆ ಉತ್ತಮ ಸಾಹಿತ್ಯ ಬೆಳೆಯುವುದೆಂತು? ಇದು ಯೋಚಿಸಬೇಕಾದ ವಿಷಯವಷ್ಟೇ?**

ಹೌದು, ಇದು ನಿಜವಾಗಿಯೂ ಯೋಚಿಸಬೇಕಾದ ವಿಷಯ. ಹಿಂದೆ ಶಿಕ್ಷಣ ಮಾಧ್ಯಮದ ಪ್ರಶ್ನೆ ಬಂದಾಗಲೇ ಈ ಬಗ್ಗೆ ಒಂದೆರಡು ಮಾತು ಹೇಳಿದ್ದೇನೆ.

ವೃತಿಪರ ಶಿಕ್ಷಣದ ಕಡೆಗೆ ಹೋಗುವ ಪೂರ್ವದಲ್ಲಿಯೇ ಅವರಿಗೆ ಭಾಷೆ, ಸಾಹಿತ್ಯಗಳಲ್ಲಿ ಅಭಿರುಚಿ ಹುಟ್ಟಿಸುವಂಥ, ಪಠ್ಯಕ್ರಮವಿರಬೇಕು. ನಿಜವಾಗಿಯೂ ಸಾಹಿತ್ಯದಲ್ಲಿ ಒಲವಿದ್ದವರು ತಾವು ಯಾವ ವೃತ್ತಿಯಲ್ಲಿದ್ದರೂ ಅದನ್ನು ಬೆಳೆಸಿಕೊಳ್ಳುತ್ತಾರೆ. ಅವರಿಂದಲೂ ಒಳ್ಳೆಯ ಸಾಹಿತ್ಯ ನಿರ್ಮಾಣ ಸಾಧ್ಯವೆಂಬುದಕ್ಕೆ ಬೇರೆ ವೃತ್ತಿಯಲ್ಲಿದ್ದು ಇಂದು ಬರೆಯುತ್ತಿರುವ ಕೆಲವು ಲೇಖಕರ ಉತ್ತಮ ಕೃತಿಗಳೇ ಸಾಕ್ಷಿ.

ಇನ್ನುಳಿದವರಲ್ಲಿ ಎಲ್ಲರೂ ಸಾಮಾನ್ಯ ಮಟ್ಟದವರಾಗಿರುವುದಿಲ್ಲ, ಕೆಲವರಾದರೂ ನಿಜವಾದ ಸಾಹಿತ್ಯಾಸಕ್ತಿಯನ್ನು ಹೊಂದಿದವರು ಇದ್ದೇ ಇರುತ್ತಾರೆ. ಅಲ್ಲದೆ ಇನ್ನೂ ಒಂದು ಮಾತೆಂದರೆ ಸೃಜನಶೀಲ ಪ್ರತಿಭೆಗೂ ಇಂದಿನ ಶಿಕ್ಷಣಕ್ರಮ ಹಾಗೂ ಪದವಿಗಳಿಗೂ ಸಂಬಂಧವನ್ನು ಕಲ್ಪಿಸಬಾರದು. ಇದನ್ನು ಹೊರತು ಪಡಿಸಿ ಅವರು ಕೈಗೊಳ್ಳುವ ಅಧ್ಯಯನ ಮತ್ತು ಮಾಡುವ ಸಾಧನೆಗಳು ಹೆಚ್ಚು ಮಹತ್ವದವಾಗಿವೆ. ನಮ್ಮ ಲೇಖಕರಲ್ಲಿ ಕಾರಂತ, ಡಿ.ವಿ.ಜಿ. ಕಟ್ಟೀಮನಿ, ಅ.ನ.ಕೃ. ನಿರಂಜನ, ತ.ರಾ.ಸು., ಶಂಬಾ ಜೋಶಿ, ಮಧುರಚೆನ್ನ, ಆನಂದಕಂದ, ಸಿಂಪಿಲಿಂಗಣ್ಣ, ಮಿರ್ಜಿ ಅಣ್ಣಾರಾಯ, ಎಂ.ಕೆ. ಇಂದಿರಾ, ಶಾಂತಾದೇವಿ ಮಾಳವಾಡ ಮುಂತಾದವರು ಪದವಿ ಪಡೆದವರಿಗಿಂತ ಹೆಚ್ಚಿನ ಸಾಧನೆ ಮಾಡಿರುವುದನ್ನು ಕಾಣುತ್ತೇವೆ. ಹೊಸ ತಲೆಮಾರಿನಲ್ಲಿಯೂ ಅಂಥವರು ಇಲ್ಲದಿಲ್ಲ.

**'ಹಸಿರು ಕ್ರಾಂತಿ'**

ದೀಪಾವಳಿ ವಿಶೇಷಾಂಕ ೧೯೯೬.

*

# ಭಾರತೀಯತೆಯ ಪುನಶ್ಯೋಧ

● ಪ್ರೇಮಕುಮಾರ ಹರಿಯಬ್ಬೆ

ಚೆನ್ನವೀರ ಕಣವಿ ಅವರಿಗೆ ಈಗ ೬೮ರ ಹರೆಯ. ಅವರ ಕಾವ್ಯ ರಚನೆಯ ಸುವರ್ಣ ಮಹೋತ್ಸವ ವರ್ಷ ಇದು. ಸ್ವಾತಂತ್ರ್ಯ ನಂತರದ ಅರ್ಧ ಶತಮಾನದ ಅವಧಿಯಲ್ಲಿ ಕನ್ನಡ ನಾಡು ಕಂಡ ಅತ್ಯಂತ ಮಹತ್ವದ ಕವಿ ಅವರು. ನವೋದಯ, ನವ್ಯ ಹಾಗೂ ನವ್ಯೋತ್ತರ ಸಾಹಿತ್ಯ ಚಳುವಳಿಗಳ ಪ್ರಭಾವಕ್ಕೆ ಸಿಕ್ಕಿಯೂ ಸಿಕ್ಕದಂತೆ ಎಲ್ಲ ಪಂಥಗಳಿಂದ ದೂರ ಉಳಿದು ಸದಾ ಪ್ರಯೋಗಶೀಲರಾಗಿ ಕಾವ್ಯ ರಚನೆ ಮಾಡಿದ ಕಣವಿ ಅವರು ಸ್ವಾತಂತ್ರ್ಯಾನಂತರದ ಅರ್ಧ ಶತಮಾನದ ಕಾಲದ ಕನ್ನಡ ಕಾವ್ಯದ ಬೆಳವಣಿಗೆಯೊಂದಿಗೆ ಬೆಳೆದು ಬಂದವರು. ನಿಸರ್ಗ ಮತ್ತು ಮಾನವೀಯ ಸಬಂಧಗಳನ್ನು ಅವರು ತಮ್ಮ ಕವಿತೆಗಳಲ್ಲಿ ಅಭಿವ್ಯಕ್ತಿಸಿದ್ದಾರೆ.

ಕಣವಿ ಅವರ ಸಾಹಿತ್ಯಸೇವೆಗೆ ಜನರ ಮನ್ನಣೆ ಸಿಕ್ಕಿದೆ. ಕನ್ನಡಗರ ಪ್ರಾತಿನಿಧಿಕ ಸಂಸ್ಥೆಯಾದ ಕನ್ನಡ ಸಾಹಿತ್ಯ ಪರಿಷತ್ತು ಅವರನ್ನು ಈಗ ಹಾಸನದಲ್ಲಿ ನಡೆಯುವ ೬೪ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರನ್ನಾಗಿ ಆರಿಸಿದೆ. ಸಮ್ಮೇಳನದಲ್ಲಿ ಭಾಗವಹಿಸಲು ಸಿದ್ಧರಾಗಿರುವ ಕಣವಿ ಅವರು 'ಪ್ರಜಾವಾಣಿ'ಗೆ ನೀಡಿದ ವಿಶೇಷ ಸಂದರ್ಶನದಲ್ಲಿ ತಮ್ಮ ಸಾಹಿತ್ಯೇತರ ಆಸಕ್ತಿಗಳನ್ನು, ದೇಶದ ಇಂದಿನ ಸ್ಥಿತಿಗತಿಗಳನ್ನು ಕುರಿತು ಮುಕ್ತವಾಗಿ ಮಾತನಾಡಿದರು:

"ದೇಶಕ್ಕೆ ಸ್ವಾತಂತ್ರ್ಯ ಬಂದ ನಂತರ ಜನರ ಸ್ಥಿತಿಗತಿಗಳು ಸುಧಾರಿಸುತ್ತವೆ ಎನ್ನುವ ಕನಸು ಕೇವಲ ಭ್ರಮೆ ಎನ್ನುವ ಪರಿಸ್ಥಿತಿ ನಿರ್ಮಾಣವಾಗಿದೆ. ಕೇವಲ ೫೦ ವರ್ಷಗಳ ಅವಧಿಯಲ್ಲಿ ದೇಶ ಸಾಗುತ್ತಿರುವ ದಾರಿ, ಮೌಲ್ಯಗಳ ಕುಸಿತ, ಎಲ್ಲರಂಗಗಳನ್ನು ಆವರಿಸಿದ ಭ್ರಷ್ಟಾಚಾರ, ಎಲ್ಲೆ ಮೀರಿದ ಸ್ವಾರ್ಥವನ್ನು ನೋಡಿದರೆ ದೇಶ ಅಧೋಗತಿಯತ್ತ ಸಾಗುತ್ತಿದೆ ಅನ್ನಿಸಿ ವಿಷಾದ ಮೂಡುತ್ತದೆ. ಇತ್ತೀಚಿನ ವರ್ಷಗಳಲ್ಲಿ ಬೆಳಕಿಗೆ ಬಂದ ನಮ್ಮ ರಾಜಕೀಯ ನಾಯಕರ ಭ್ರಷ್ಟಾಚಾರದ ಹಗರಣಗಳನ್ನು ನೋಡಿದರೆ ಈ ದೇಶಕ್ಕೆ ಉತ್ತಮ ಭವಿಷ್ಯವೇ ಇಲ್ಲವೇನೋ ಎನ್ನುವ ಜಿಗುಪ್ಸೆ

ಮೂಡುತ್ತದೆ. ದೇಶದ ಆಡಳಿತ ನಡೆಸಿದ ವ್ಯಕ್ತಿಗಳ ಮನೆಗಳಲ್ಲಿ ಸಿಕ್ಕ ಕೋಟಿಗಟ್ಟಲೆ ಹಣ, ಕೇಜಿಗಟ್ಟಲೆ ಬಂಗಾರ, ಬೆಳ್ಳಿ ಇತ್ಯಾದಿಗಳನ್ನು ಕುರಿತ ಮಾಹಿತಿಗಳನ್ನು ಓದಿ ನನಗೆ ಆಶ್ಚರ್ಯವಾಗಿದೆ. ಇದು ಸ್ವಾರ್ಥದ ಪರಾಕಾಷ್ಠೆ. 'ದೇವದೂತರು ಮತ್ತೆ ಬಂದು ದೇಶವನ್ನು ಸರಿ ಮಾಡುತ್ತಾರೆಯೋ' ಎಂದು ಕಾಯುತ್ತ ಕುಳಿತುಕೊಳ್ಳುವ ಸ್ಥಿತಿ ನಮ್ಮದು. ಸದ್ಯದ ಪರಿಸ್ಥಿತಿಯನ್ನು ನಿಭಾಯಿಸಿದರೆ ಸಾಕು ಎನ್ನುವಂತಹ ಧೋರಣೆಯನ್ನು ನಾವು ಬೆಳೆಸಿಕೊಂಡಿದ್ದರ ಪರಿಣಾಮ ಇದು. ತುರ್ತು ಪರಿಸ್ಥಿತಿಯ ಸಮಯದಲ್ಲಿ ನವ ನಿರ್ಮಾಣ ಕ್ರಾಂತಿಗೆ ಲೋಕನಾಯಕ ಜಯಪ್ರಕಾಶ ನಾರಾಯಣರು ಕರೆ ನೀಡಿದ್ದರು. ಈ ಕ್ರಾಂತಿ ಕೆಲವು ರಾಜ್ಯಗಳಿಗಷ್ಟೇ ಸೀಮಿತವಾಗಿತ್ತು. ಈಗ ಇಡೀ ದೇಶದ ಸಮಗ್ರ ಬದಲಾವಣೆಗಾಗಿ ಇಂತಹ ಚಳುವಳಿಯ ಅಗತ್ಯವಿದೆ. ಆದರೆ ಈ ಚಳುವಳಿಯ ಕರೆ ಕೊಡುವವರು ಯಾರು? ಈ ಪ್ರಶ್ನೆಯನ್ನು ತಮ್ಮ 'ಮೂರಾಬಟ್ಟೆ' ಎನ್ನುವ ಕವಿತೆಯಲ್ಲಿ ನಾನೇ ಕೇಳಿಕೊಂಡಿದ್ದೇನೆ. 'ದುಷ್ಟ ಪರಿಹಾರ ಸರಿ. ಎಲ್ಲಿದ್ದಾರೆ ಶಿಷ್ಟರು?' ಎಂದು ಶಿಷ್ಯರು ಬರುವಿಕೆಗಾಗಿ ಕಾಯುತ್ತ ಕುಳಿತಿರುವ ಸ್ಥಿತಿ ನಮ್ಮದು" ಎನ್ನುತ್ತಾರೆ ಕಣವಿ. ಅವರು ಮುಂದುವರಿದು:

"ದೇಶ, ಸಮಾಜ ಮತ್ತು ಪರಿಸರದ ಹಿತವನ್ನು ಬಲಿ ಕೊಡುವ ಪ್ರವೃತ್ತಿಯನ್ನು ಮೊದಲು ತಡೆಯಬೇಕು. ಸರಳ ಮತ್ತು ಸಂತೋಷದ ಜೀವನ ಕ್ರಮಗಳನ್ನು ಆಡಳಿತಗಾರರು ಅಳವಡಿಸಿಕೊಳ್ಳಬೇಕು. ಧಾರ್ಮಿಕ ಸ್ವಾತಂತ್ರ್ಯ ಉಳಿಸಲು ಸರ್ಕಾರದ ನೆರವು ನೀಡುವ ಪದ್ಧತಿ ತಪ್ಪಬೇಕು. ಬದಲಾದ ಜೀವನ ಕ್ರಮದಿಂದ ನಾವು ನಮ್ಮ ಸಾಮಾಜಿಕ ಹೊಣೆಗಾರಿಕೆಯನ್ನು ಕಳೆದುಕೊಂಡಿದ್ದೇವೆ. ಎಲ್ಲ ಕ್ಷೇತ್ರಗಳಲ್ಲಿ ಅನುಕರಣೆ ಎದ್ದು ಕಾಣುತ್ತಿದೆ. ಭಾರತೀಯತೆಯ ಪುನಃಶೋಧ ತುರ್ತಾಗಿ ಆಗಬೇಕಾಗಿದೆ. ಭಾರತೀಯ ಜೀವನ ಕ್ರಮದ ಉತ್ತಮ ಅಂಶಗಳನ್ನು ಎತ್ತಿ ತೋರಿಸುವ ಮತ್ತು ಪ್ರಸ್ತುತ ಸಂದರ್ಭದಲ್ಲಿ ಅವುಗಳಿಗೆ ಹೊಸ ವ್ಯಾಖ್ಯಾನ ನೀಡುವ ಕಾರ್ಯ ಈಗ ತುರ್ತಾಗಿ ಆಗಬೇಕಾಗಿದೆ. ಸಾಹಿತಿಗಳು, ಬರಹಗಾರರು ಈ ನಿಟ್ಟಿನಲ್ಲಿ ಯೋಚಿಸಬೇಕಾಗಿದೆ. ಬದಲಾವಣೆ ಬಯಸಿದ ಜನರಿಗೆ ಮಾರ್ಗದರ್ಶನ ಮಾಡುವ ಕೆಲಸದಲ್ಲಿ ಅವರ ಜವಾಬ್ದಾರಿ ದೊಡ್ಡದು. ಭಾರತೀಯತೆಯ ಹೊಸ ರೂಪಗಳನ್ನು ಗುರುತಿಸಿದ ಗಾಂಧಿ, ರಾಜಾರಾಮ, ಮೋಹನ ರಾಯ್, ಲೋಹಿಯಾ, ಅಂಬೇಡ್ಕರ್ ಅವರೂ ಸೇರಿದಂತೆ ಹಲವಾರು ಪುಣ್ಯಪುರುಷರು ಮಾಡಿದ ಕಾರ್ಯವನ್ನು ಈಗ ಮುಂದುವರಿಸಬೇಕಾಗಿದೆ. ಇದು ಸುಲಭವಾಗಿ ಆಗುವ ಕೆಲಸವಲ್ಲ. ದಾರಿ ತಪ್ಪಿ ಸಾಗುತ್ತಿರುವ ದೇಶವನ್ನು ಸರಿದಾರಿಗೆ ತರಬೇಕಾದರೆ ಇದು ಆತ್ಯವಶ್ಯ. ದೇಶಕ್ಕೆ ಭವಿಷ್ಯವೇ ಇಲ್ಲ ಎಂದು ಕೈ ಚೆಲ್ಲಿ ಕುಳಿತುಕೊಳ್ಳುವ ಬದಲು ಪರಿಸ್ಥಿತಿಯನ್ನು

ಸುಧಾರಿಸುವ ಕಾರ್ಯ ಯಾರಾದರೂ ಆರಂಭಿಸಬೇಕು. ಹೊಸ ಹಾಗೂ ಸ್ವಚ್ಛ ಸಮಾಜದ ನಿರ್ಮಾಣಕ್ಕೆ ಸನ್ನದ್ಧರಾದ ಜನರಿಗೆ ಮಾರ್ಗದರ್ಶನ ಮಾಡುವ ಕಾರ್ಯವನ್ನು ಬರಹಗಾರರು ನಿರ್ವಹಿಸಬೇಕಾಗಿದೆ. ಕಣವಿಯವರ ವಿಚಾರ ಸರಣಿ ಹೀಗೆ ಮುಂದುವರೆಯಿತು.

"ನಮ್ಮ ಸಾಂಸ್ಕೃತಿಕ ಲೋಕದ ವಿಷಾದದ ಸಂಗತಿ ಎಂದರೆ ಇಂದಿನ ಮತ್ತು ಭವಿಷ್ಯದ ತಲೆಮಾರಿನ ಜನರ ಸೃಜನಶೀಲ ಶಕ್ತಿಯನ್ನು ನಾಶಪಡಿಸುವ ವಿದ್ಯುನ್ಮಾನ ಮಾಧ್ಯಮಗಳ ದಾಳಿ. ಇದಕ್ಕೆ ಕಡಿವಾಣ ಹಾಕುವ ಕೆಲಸ ಈ ಕ್ಷಣದಿಂದಲೇ ಆರಂಭವಾಗಬೇಕಾಗಿದೆ. ವಿದೇಶಿ ಟಿ.ವಿ.ಚಾನೆಲ್‌ಗಳಿಗೆ ಅವಕಾಶಕೊಡುವ ಮೂಲಕ ನಮ್ಮ ಭವಿಷ್ಯದ ಜನರ ಅಭಿರುಚಿ ಕೆಡಿಸುವ ಕೆಲಸವನ್ನು ಸರ್ಕಾರ ಮಾಡಿದೆ. ವಿದೇಶಿ ಚಾನೆಲ್‌ಗಳ ಮಾತು ಹಾಗಿರಲಿ, ದೇಶೀಯ ಚಾನೆಲ್‌ಗಳಲ್ಲಿ ಎದ್ದು ಕಾಣುವ ವ್ಯಾಪಾರಿ ಮನೋಧರ್ಮದ ಜಾಹೀರಾತುಗಳು ಯುವಜನರ ಮೇಲೆ ದುಷ್ಪರಿಣಾಮ ಬೀರುತ್ತಿವೆ. ದೂರದರ್ಶನವನ್ನು ಬಳಸಿಕೊಂಡು ಜನರಲ್ಲಿ ಸಾಹಿತ್ಯ ಮತ್ತು ಸಂಸ್ಕೃತಿಗಳ ಬಗ್ಗೆ ಉತ್ತಮ ಅಭಿರುಚಿ ಬೆಳೆಸಲು ಸಾಧ್ಯ. ಈ ಕೆಲಸವಷ್ಟೇ ಆಗುವುದಾದರೆ ದೂರದರ್ಶನ ಒಂದು ವರವಾಗುತ್ತಿತ್ತು. ಆದರೆ ಅಭಿರುಚಿಗಳನ್ನು ಕೆಡಿಸುವಂತಹ ನೂರಾರು ಕಾರ್ಯಕ್ರಮಗಳ ನಡುವೆ ಒಳ್ಳೆಯ ಕಾರ್ಯಕ್ರಮಗಳ ಸದ್ದು ಕೇಳುವುದಿಲ್ಲ. ದೂರದರ್ಶನದಿಂದ ಮಕ್ಕಳ ಅಭಿರುಚಿ ಕೆಡದಂತೆ ನೋಡಿಕೊಳ್ಳುವ ಹೊಣೆ ಪಾಲಕರದ್ದು. ವಿದೇಶಿ ಚಾನೆಲ್‌ಗಳ ವಿರುದ್ಧ ಜಾಗೃತಿ ಮೂಡಿಸುವ "ಟಿ.ವಿ. ಬಿಡಿ. ಪುಸ್ತಕ ಹಿಡಿ" ಆಂದೋಲನ ಶಾಲಾ ಮಕ್ಕಳಿಂದಲೇ ಆರಂಭವಾಗಬೇಕು. ದೂರದರ್ಶನದ ಕೆಟ್ಟ ಪರಿಣಾಮವನ್ನು ಮೊದಲು ಪಾಲಕರು ಅರ್ಥಮಾಡಿಕೊಳ್ಳ ಬೇಕಾಗಿದೆ. ಇದು ಸಾಧ್ಯವಾದರೆ ವಿದೇಶಿ ಚಾನೆಲ್‌ಗಳ ಹಾವಳಿಯನ್ನು ತಡೆಯಲು ಸಾಧ್ಯ."

"ಉತ್ತರ ಕರ್ನಾಟಕವನ್ನು ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಆಲಕ್ಷಿಸುತ್ತಿವೆ ಎನ್ನುವ ಭಾವನೆ ಉತ್ತರ ಕರ್ನಾಟಕದ ಜನರಲ್ಲಿ ಬೇರು ಬಿಟ್ಟಿದೆ. ಕರ್ನಾಟಕದ ಏಕೀಕರಣದ ಕನಸು ನನಸಾದರೂ ಮನಸ್ಸುಗಳು ಒಂದಾಗಿಲ್ಲ. ಪ್ರತ್ಯೇಕ ಉತ್ತರ ಕರ್ನಾಟಕ ರಾಜ್ಯದ ಬೇಡಿಕೆಯ ಮಾತು ಈಗ ಸಣ್ಣದಾಗಿ ಕೇಳಿ ಬರುತ್ತಿವೆ. ಈ ಬೇಡಿಕೆ ನ್ಯಾಯಸಮ್ಮತ ಎಂದು ನನಗೆ ಅನಿಸಿಲ್ಲ. ಸರ್ಕಾರ ಈ ಪ್ರದೇಶದ ಅಭಿವೃದ್ಧಿಯನ್ನು ಇನ್ನು ಮುಂದೆಯೂ ಅಲಕ್ಷಿಸಿದರೆ ಪ್ರತ್ಯೇಕ ರಾಜ್ಯದ ಬೇಡಿಕೆಯ ಧ್ವನಿ ದೊಡ್ಡದಾಗ- ಬಹುದು. ನೈರುತ್ಯ ರೈಲ್ವೆ ವಲಯವನ್ನು ಹುಬ್ಬಳ್ಳಿಯಲ್ಲಿ ಸ್ಥಾಪಿಸಿದ್ದರೆ ಜನರ ಮನಸ್ಸಿಗೆ ಎಷ್ಟೋ ನೆಮ್ಮದಿ ಆಗುತ್ತಿತ್ತು. ಜನರ ಭಾವನೆಗಳು

ಸರ್ಕಾರಕ್ಕೆ ಅರ್ಥವಾಗಲಿಲ್ಲ. ಏಕೀಕರಣಕ್ಕೆ ಹೋರಾಡಿದವರು ಉತ್ತರ ಕರ್ನಾಟಕದ ಜನ. ಅವರೇ ಪ್ರತ್ಯೇಕ ಉತ್ತರ ಕರ್ನಾಟಕ ರಚನೆಗೆ ಒತ್ತಾಯಿಸಲು ಆರಂಭಿಸಿದರೆ ಅದಕ್ಕಿಂತ ದೊಡ್ಡ ದುರಂತ ಬೇರೆ ಇಲ್ಲ......

"ಇನ್ನು ಕನ್ನಡದ ಅಭಿವೃದ್ಧಿಗಾಗಿ ಇರುವ ಆಕಾಡೆಮಿಗಳು, ಕನ್ನಡ ಅಭಿವೃದ್ಧಿ ಪ್ರಾಧಿಕಾರ ಇತ್ಯಾದಿಗಳ ಕೇಂದ್ರ ಸ್ಥಾನ ಬೆಂಗಳೂರಿನಲ್ಲಿರುವ ಬದಲು ಧಾರವಾಡ, ಬೆಳಗಾವಿ ಕಲ್ಬುರ್ಗಿಗಳಲ್ಲಿ ಇರಬೇಕು. ಈ ಎಲ್ಲ ಸಂಸ್ಥೆಗಳೂ ಬೆಂಗಳೂರಿನಲ್ಲಿಯೇ ಕಾರ್ಯ ನಿರ್ವಹಿಸುತ್ತಿರುವುದರಿಂದ ಅವುಗಳ ಮೇಲೆ ವಿಧಾನಸೌಧದ ರಾಜಕೀಯ ನೆರಳು ಬಿದ್ದು ಅವುಗಳೂ ರಾಜಕೀಯದ ಕೇಂದ್ರಗಳಾಗುತ್ತಿವೆ. ಇದನ್ನು ತಪ್ಪಿಸಲು ಅವುಗಳ ಕೇಂದ್ರ ಕಚೇರಿಗಳನ್ನು ರಾಜಧಾನಿಯಿಂದ ಹೊರಗೆ ಸ್ಥಾಪಿಸಬೇಕು. ಇದು ಸಾಂಸ್ಕೃತಿಕ ಚಟುವಟಿಕೆಗಳ ವಿಕೇಂದ್ರಿಕರಣಕ್ಕೆ ನೆರವಾಗುತ್ತದೆ ಎನ್ನುವುದು ತಮ್ಮ ಖಚಿತ ನಿಲುವು. ಇದನ್ನು ಸರ್ಕಾರದ ಗಮನಕ್ಕೂ ತಂದಿದ್ದೇನೆ" ಎಂದು ಕಣವಿ ಸ್ಪಷ್ಟಪಡಿಸಿದರು.

"ಐವತ್ತು ವರ್ಷಗಳಷ್ಟು ದೀರ್ಘಕಾಲ ಕಾವ್ಯ ರಚನೆಯಲ್ಲಿ ತೊಡಗಿದರೂ ಈ ಅವಧಿಯಲ್ಲಿನ ನವೋದಯ, ನವ್ಯ ಇತ್ಯಾದಿ ಸಾಹಿತ್ಯ ಚಳುವಳಿಗಳ ಜೊತೆ ಗುರುತಿಸಿ ಕೊಳ್ಳದೇ ನಾನು ದೂರ ಉಳಿದೆ ಎನ್ನುವ ಮಾತು ಆಗಾಗ ಕೇಳಿ ಬರುತ್ತಿದೆ. ಇದು ಸರಿಯಲ್ಲ, ಕಳೆದ ೫೦ ವರ್ಷಗಳ ಅವಧಿಯಲ್ಲಿನ ಎಲ್ಲ ಕಾವ್ಯ ಪ್ರಕಾರಗಳಲ್ಲಿಯೂ ನನಗೆ ಆಸಕ್ತಿ ಇತ್ತು. ಅವುಗಳಿಗೆ ನಾನು ಕಾವ್ಯದ ಮೂಲಕ ಪ್ರತಿಕ್ರಿಯಿಸುತ್ತಲೇ ಬೆಳೆದಿದ್ದೇನೆ. ಉಳಿದವರ ಹಾಗೆ ಕಾವ್ಯದ ಉದ್ದೇಶ ಇತ್ಯಾದಿಗಳನ್ನು ಹೇಳಿಕೊಂಡು ಬರೆಯಲಿಲ್ಲ ಅಷ್ಟೇ. ನವೋದಯ ಮತ್ತು ನವ್ಯಕಾವ್ಯ ಪ್ರಕಾರದ ಎಲ್ಲ ಉತ್ತಮ ಅಂಶಗಳನ್ನು ನಾನು ಸ್ವೀಕರಿಸಿದ್ದೇನೆ. ಅಭಿವ್ಯಕ್ತಿಗೆ ನನ್ನದೇ ಆದ ದಾರಿಯನ್ನು ಕಂಡುಕೊಂಡಿದ್ದರಿಂದ ನಾನು ಎಲ್ಲರಿಗಿಂತ ಭಿನ್ನವಾಗಿ ಬರೆದೆ" ಎಂದು ತಮ್ಮ ಅನುಭವವನ್ನು ನಿರೂಪಿಸುತ್ತ ಹೀಗೆ ನುಡಿದರು:

ವಿದ್ಯಾರ್ಥಿ ದೆಸೆಯಲ್ಲಿಯೇ ಕಾವ್ಯ ರಚನೆಗೆ ತೊಡಗಿದ ಅವರಿಗೆ ಧಾರವಾಡದ ಪರಿಸರ (ನಿಸರ್ಗ)ಕಾವ್ಯ ರಚನೆಗೆ ಒತ್ತಾಸೆ ನೀಡಿದೆ. ಬೇಂದ್ರೆ, ವಿನಾಯಕ, ಬೆಟಗೇರಿ ಶರ್ಮರಂತಹ ಹಿರಿಯ ಕವಿಗಳು ನೀಡಿದ ಪ್ರೋತ್ಸಾಹ ಅವರನ್ನು ಅದೇ ದಾರಿಯಲ್ಲಿ ಮುಂದುವರಿಯಲು ನೆರವಾಗಿದೆ. ಆದರೆ ಈಗ ಧಾರವಾಡದಲ್ಲಿ ಮೊದಲಿನ ಪರಿಸರ ಉಳಿದಿಲ್ಲ ಮತ್ತು ಹಿರಿಯರ ಅನುಪಸ್ಥಿತಿ ನಿಮ್ಮ ಮೇಲೆ ಯಾವ ಬಗೆಯ ಪರಿಣಾಮ ಬೀರಿದೆ ಎನ್ನುವ ಪ್ರಶ್ನೆಗೆ ಉತ್ತರಿಸುವ ಮುನ್ನ ಕಣವಿ ಒಂದು ನಿಮಿಷ ಮೌನ ವಹಿಸುತ್ತಾರೆ. 'ಆ ಒಳ್ಳೆಯ ದಿನಗಳು ಮುಗಿದು ಹೋದುವಲ್ಲ ಎನ್ನುವ ನೆನಪು

ಮಾಡಿಕೊಂಡರೆ ನಿಜವಾಗಿಯೂ ನೋವಾಗುತ್ತದೆ. ಕಳೆದ ಈ ದಿನಗಳ ನೆನಪು ಮಾಡಿಕೊಳ್ಳುತ್ತಲೇ ಇರಬೇಕು ಎನಿಸುತ್ತದೆ. ಕುಟುಂಬದ ಹಿರಿಯರನ್ನೆಲ್ಲ ಒಬ್ಬೊಬ್ಬರನ್ನಾಗಿ ಕಳೆದುಕೊಳ್ಳುತ್ತಾ ಹೋಗುವ ವ್ಯಕ್ತಿಯೊಬ್ಬನ ಮನಸ್ಸಿನಲ್ಲಿ ಹುಟ್ಟುವಂತಹ ಶೂನ್ಯದ ಭಾವನೆ ಆಗಾಗ ಸುಳಿಯುತ್ತದೆ. ಆದರೆ ಧಾರವಾಡದ ನಿಸರ್ಗ ಸಂಪೂರ್ಣ ನಿರಾಸೆ ಮೂಡಿಸುವಷ್ಟು ಬದಲಾಗಿಲ್ಲವೆಂಬುದು ಅವರ ಅನಿಸಿಕೆ.

"ಬೇಂದ್ರೆಯವರ ನಂತರ ಕಣವಿ, ಕಣವಿ ನಂತರ ಯಾರು ಎಂದು ಕೆಲವರು ನನ್ನನ್ನೇ ಪ್ರಶ್ನಿಸುತ್ತಾರೆ. ಕಾವ್ಯ ರಚನೆಯ ಪ್ರಕ್ರಿಯೆ ನನ್ನ ನಂತರ ನಿಲ್ಲುತ್ತದೆ ಎಂದು ಯಾರೂ ಭಾವಿಸುವ ಅಗತ್ಯವಿಲ್ಲ. ಈಗ ಬರೆಯುತ್ತಿರುವವರಲ್ಲಿ ಕೆಲವರು ಸಮರ್ಥರಿದ್ದಾರೆ. ಆದರೆ ಅವರು ಗುಂಪಿನಲ್ಲಿದ್ದಾರೆ. ಧಾರವಾಡದ ನೆಲದ ಕಾವ್ಯಗುಣ ಬತ್ತಿ ಹೋಯಿತೇ ಎಂದು ಒಮ್ಮೊಮ್ಮೆ ಕೆಲವರಿಗೆ ನಿರಾಸೆ ಆಗಿದ್ದೂ ಉಂಟು. ಆದರೆ ಸಮರ್ಥರಾದ, ಕವಿಗಳು ಈ ನೆಲದಲ್ಲಿಯೇ ಹುಟ್ಟಿ ಬರುತ್ತಾರೆ ಎನ್ನುವ ಭರವಸೆ ನನ್ನದು.'

"ವಿದ್ಯಾರ್ಥಿಗಳಿಗೆ ಸಾಹಿತ್ಯದ ಪಾಠ ಹೇಳಬೇಕು ಎನ್ನುವ ಆಸೆ ನನಗಿತ್ತು. ಆದರೆ ಅದು ಫಲಿಸಲಿಲ್ಲ."

"ನಾನು ಎಂ.ಎ. ಮುಗಿಸಿ ಹೊರ ಬಂದಾಗ ಕಾಲೇಜುಗಳ ಸಂಖ್ಯೆ ತುಂಬಾ ಕಡಿಮೆ ಇತ್ತು. ಆದುದರಿಂದ ಅಧ್ಯಾಪಕ ವೃತ್ತಿಗೆ ನಾನು ಆಗ ಹಾತೊರೆಯಲಿಲ್ಲ. ಆದರೆ ಪ್ರಸಾರಾಂಗದ ಆಡಳಿತ ನೋಡಿಕೊಳ್ಳುವ ಹೊಣೆಯನ್ನು ಯಶಸ್ವಿಯಾಗಿ ಮಾಡಿದ್ದೇನೆಂಬ ತೃಪ್ತಿಯಿದೆ. ತರಗತಿಯ ಹೊರಗೆ ವಿದ್ಯಾರ್ಥಿಗಳು ಮತ್ತು ಆಸಕ್ತರು ನನ್ನ ಜೊತೆ ಕಾವ್ಯವನ್ನು ಕುರಿತು ಸಾಕಷ್ಟು ಸಂವಾದ ನಡೆಸಿದ್ದಾರೆ. ಇದು ನನಗೆ ನೆಮ್ಮದಿ ನೀಡಿದೆ" ಎನ್ನುತ್ತಾರೆ ಕಣವಿ.

"ಕಾವ್ಯ ರಚನೆ ನನಗೆ ಅತ್ಯಂತ ಸಂತೋಷ ಕೊಡುವ ಕ್ರಿಯೆ, ಕವಿತೆ ಬರೆಯುವುದನ್ನು ನಿಲ್ಲಿಸುವುದನ್ನು ಊಹಿಸಲು ಸಾಧ್ಯವಿಲ್ಲ. ಇಂತಹದನ್ನು ಬರೆಯಬೇಕು ಎಂದು ಯೋಜನೆ ಹಾಕಿಕೊಂಡು ಬರೆದವನಲ್ಲ. ಮುಂದೆಯೂ ಏನು ಬರೆಯುತ್ತೇನೆ ಎನ್ನುವ ಕಲ್ಪನೆಯೂ ನನಗಿಲ್ಲ. ಕುಟುಂಬದ ಸದಸ್ಯರು, ಮೊಮ್ಮಕ್ಕಳ ಜೊತೆ ಕಾಲ ಕಳೆಯುವುದು, ಮನೆಯ ಮುಂದಿನ ತೋಟದಲ್ಲಿ ಹೂಗಳನ್ನು ಬೆಳೆಸುವುದು ಗೆಳೆಯರೊಡನೆ ಮಾತುಕತೆ ಇತ್ಯಾದಿಗಳನ್ನು ಬಿಟ್ಟರೆ ಬೇರೆ ಯಾವ ಆಸಕ್ತಿಗಳೂ ನನಗಿಲ್ಲ. ಮಕ್ಕಳೆಲ್ಲ ಒಳ್ಳೆಯ ಕೆಲಸಗಳಲ್ಲಿದ್ದಾರೆ. ನನಗೀಗ ಯಾವ ಕೌಟುಂಬಿಕ ಜವಾಬ್ದಾರಿಗಳೂ ಇಲ್ಲ ಎನ್ನುವ ಕಣವಿ ಅವರಿಗೆ ಉತ್ತಮ ಸ್ಥಿತಿಯಲ್ಲಿರುವ ಮಕ್ಕಳ ಬಗ್ಗೆ ಅಪಾರ ಅಭಿಮಾನ.

"ಸಮ್ಮೇಳನದ ಅಧ್ಯಕ್ಷ ಸ್ಥಾನ, ಪ್ರಶಸ್ತಿಗಳನ್ನು ನಾನು ಎಂದೂ ನಿರೀಕ್ಷಿಸಲಿಲ್ಲ. ಸಭೆ ಸಮಾರಂಭಗಳಲ್ಲಿ ತಮ್ಮನ್ನು ಜನರು ಹೊಗಳಿದಾಗ ತುಂಬಾ ಮುಜುಗರವಾಗುತ್ತದೆ. ಸಭೆಗೆ ಹೋಗದೆಯೂ ಇರಲು ಸಾಧ್ಯವಿಲ್ಲ. ಕವಿತೆ ಬರೆದು ಬಹಳ ದೊಡ್ಡ ಸಾಧನೆ ಮಾಡಿದ್ದೇನೆ ಎಂದು ನಾನು ಭಾವಿಸಿಲ್ಲ. ಕಳೆದ ೫೦ ವರ್ಷಗಳ ಅವಧಿಯಲ್ಲಿ ಸಾಹಿತ್ಯದ ವಿದ್ಯಾರ್ಥಿಗಳು ಕಾವ್ಯಸಕ್ತರು ಮಾತ್ರವಲ್ಲದೆ ಹಳ್ಳಿಯ ಜನ ಸಾಮಾನ್ಯರು ನನ್ನ ಕವಿತೆಗಳನ್ನು ಮೆಚ್ಚಿಕೊಂಡಿದ್ದಾರೆ. ಕೆಲವರು ಅದನ್ನು ಬರೆದು ತಿಳಿಸುತ್ತಾರೆ. ಅವರ ಪತ್ರಗಳನ್ನು ಓದುವಾಗ ಕನ್ನಡಿಗರ ಅಖಂಡವಾದ ಪ್ರೀತಿ ವಿಶ್ವಾಸಗಳನ್ನು ಪಡೆದೆ ಎನ್ನುವ ಭಾವನೆ ನನಗೆ ತಿಳಿಯದಂತೆ ಆವರಿಸುತ್ತದೆ. ಇವು ನನ್ನ ಸಂತೋಷದ ಕ್ಷಣಗಳು. ಇದಕ್ಕಿಂತ ದೊಡ್ಡ ಸನ್ಮಾನ ಬೇರೆ ಯಾವುದಿದೆ ಹೇಳಿ?" ಎಂದು ಪ್ರಶ್ನಿಸುವ ಕಣವಿಯವರ ಬಗ್ಗೆ ಗೌರವ ಭಾವನೆ ತಾನಾಗಿಯೇ ಹುಟ್ಟುತ್ತದೆ.

**'ಪ್ರಜಾವಾಣಿ'**, ೨೧-೧೨-೧೯೯೬

*

# ಬಂಡಾಯ ಮನೋಧರ್ಮ ಸಾಹಿತ್ಯದುದ್ದಕ್ಕೂ ಇದ್ದದ್ದೇ

● ಮೋಹನ ನಾಗಮ್ಮನವರ

ಹರಿವ ನದಿ ನೀರಿನ ಉದ್ವೇಗಲ ಬಲ್ಲವನೊಬ್ಬ ಎಲ್ಲಿ ಬೇಕಾದರೂ ತಡೆಯೊಡ್ಡು ಕಟ್ಟಬಲ್ಲೆನೆಂಬ ಕುಶಲ ಎಂಜನಿಯರ್‌ನ ಗತ್ತಿನಲ್ಲಿ ಚೆನ್ನವೀರ ಕಣವಿಯವರೆದುರು ಕುಳಿತರೆ, ಕೂಡಲೇ ಅರ್ಥವಾಗುತ್ತದೆ-ಕಣವಿತನವೆಂಬುದು ಬರೀ ನದಿಯಲ್ಲ, ಅದು ಇದ್ದಲ್ಲಿಯೆ ನಿರಂತರ ಮೊರೆಯುವ ಕಡಲೆಂದು. ನಮ್ಮೆದುರು ತೋರುವ ಬೆಂಕಿಯಲ್ಲೂ ಬೆಣ್ಣೆಯ ತಣ್ಣನೆಯ ಭಾವ ಮೂಡಿಸುತ್ತ, ಅಂಗೈಯೊಳಗಿನ ಬೆಣ್ಣೆಯೊಳಗೂ ಬೆಂಕಿ ತುಂಬಿ ಬೆರಗುಗೊಳಿಸುವ ಚೆನ್ನವೀರ ಕಣವಿಯವರು ನಡೆದು ಬಂದ ಹಾದಿಯ ತುಂಬ ಸಾಲು ಸಾಲು ಗೀತೆಗಳು, ನಾಡಿನುದ್ದಕ್ಕೂ ಲಯದ ತೋರಣ, ಇಕ್ಕೆಲದಲ್ಲೂ ಮಾನವೀಯ ಧೋರಣೆಗಳನ್ನೇ ಪ್ರತಿಪಾದಿಸಿದ ವೀರಗಲ್ಲುಗಳು, ಕನಸುಗಳ ನಂಬಿ ಕವಿತೆ ಬರೆದವನದ್ದೇ ಸ್ವಂತ ಛಾಪು, ಅದು ಕಣವಿತನ.

ಅರವತ್ತೈದು ವರ್ಷದ ತರುಣ ಬದುಕಿನ ಹಾದಿಯಲ್ಲಿ ಕವಿತೆಗಳ ದಂಡು ಕಟ್ಟಿ ಪಯಣ ಹೊರಟವ ದಣಿದದ್ದೇ ಇಲ್ಲ. ಅದೊಂದು ಕಾವ್ಯ ಯಾತ್ರೆ. ಸ್ವಾತಂತ್ರ್ಯ ಪೂರ್ವದ ದಿನಗಳು. ಪಂಪ, ಕುಮಾರವ್ಯಾಸ, ನಯಸೇನರ ಗದುಗಿನ-ಹೊಂಬಳದ ಈ ಚಿಗುರು-ಚೇತನ ಶಿಕ್ಷಕರಾಗಿದ್ದ ತಂದೆ ಸಕ್ಕರೆಪ್ಪನವರಿಂದ ಸಕ್ಕರೆಯಂತೆ ಸವಿಯಾಗಿರುವುದನ್ನು ಕಲಿತವ. ಮನೆಯ ಪಕ್ಕದ ಕುಂಬಾರರ ಮನೆಯಲ್ಲಿ ಮಣ್ಣು ಹೂವಿನಂತರಳುವುದನ್ನು, ಮಣಿಯದ ಕಬ್ಬಿಣ ಕಮ್ಮಾರರ ಕುಲುಮೆಯಲ್ಲಿ ಮೇಣದಂತಾಗುವುದನ್ನೂ ನಿಬ್ಬೆರಗಾಗಿ ನಿಟ್ಟಿಸಿದವ. ಸ್ವಾತಂತ್ರ್ಯ ಹೋರಾಟದ ಶಕ್ತಿ ಕೇಂದ್ರವಾಗಿದ್ದ ಗರಗದ ತುಪ್ಪರೀ ಹಳ್ಳದ ದಂಡೆಯ ಮೇಲೆ ಘಂಟೆಗಟ್ಟಲೆ ಕುಳಿತು ಸ್ವಾತಂತ್ರ್ಯದ ಘೋಷಣೆಗಳನ್ನು, ವ್ಯಾನಿಗೆ ದಬ್ಬುವ ಪೋಲೀಸರನ್ನು, ಅರಳಿಸಿದ ಕಣ್ಣುಗಳಲ್ಲೇ ನೋಡುತ್ತ, ಮಡಚಿದ ಮೊಣಕಾಲುಗಳ ಮೇಲೆ ತಲೆಯಿಟ್ಟು ಪುಟ್ಟ ಮಿದುಳಿನಲ್ಲಿ ಎಷ್ಟೋ ದಿಟ್ಟ ಕನಸುಗಳ ಕಂಡವ. ಮುಲ್ಕೀ ಪರೀಕ್ಷೆಗೆಂದು ಧಾರವಾಡದ ಮುರುಘಾಮಠದಲ್ಲುಳಿದು ಮತ್ತೊಂದು ಮರಳಿ ನೋಡದೆ ಧಾರವಾಡದ ಸಹವಾಸದಲ್ಲಿ

ಕವಿತೆಯ ಹೂವರಳಿಸುತ್ತ ತಾನೇ ಹೂದೋಟವಾದವ, ಕಾವ್ಯದ ಕತೆಯಾದವ. ಪುಸ್ತಕದ ನೆವದಲ್ಲಿ ದೊರೆತದ್ದು ಗೀತಪ್ರಿಯಳಾದ ಶಾಂತಾದೇವಿ. ವರ್ಷಗಳ ಕಾಲದ ಪರಿಣಯದಲ್ಲೇ ತೇಲಿದ ಕವಿಯ ಮನೆಗೇ ಮಡದಿಯಾಗಿ ಬಂದ ಮನದನ್ನೆ ಕಾವ್ಯದೊರತೆ ನದಿಯಾಗಿ, ಕಡಲಾಗಿ ತುಳುಕುತ್ತಿರುವ ಹೊತ್ತಿನಲ್ಲಿ ಮನೆ ತುಂಬ ಶಿವಾನಂದ, ಚಂದ್ರಮೌಳಿ, ಪ್ರಿಯದರ್ಶಿ, ರಂಜನಾ, ಕರುಣಾಪ್ರಸಾದರೆನ್ನುವ ಮಕ್ಕಳು, ಮೊಮ್ಮಕ್ಕಳ ನಡುವೆ ಮಾಗಿದ ಅಜ್ಜ. ಎಲ್ಲವನ್ನೂ ಕಂಡ ಧಾರವಾಡದ ನೆಲಕ್ಕೆ ಮಾತ್ರ ಇನ್ನೂ ಮತ್ತೆ ಮತ್ತೆ ರಸಲೋಕವ ತೆರೆದಿಡುವ ಹುರುಪು ಬತ್ತದ ಬೆಡಗು. ಬರೀ ನಿಲುವಿನಲ್ಲಿ ಎತ್ತರವಾಗಿರದೆ ಸಾಧನೆಯ ಹಾದಿಯಲ್ಲೂ ಎತ್ತರವಾಗಿಯೇ ಇರುವ ಕವಿ ಕಣವಿಯವರ ಕಿರೀಟಕ್ಕೆ ಗರಿಯಾಗಿ ೬೪ನೇಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ. ಈ ಹೊತ್ತಿನಲ್ಲಿ ಅದೇ ಸರಳತೆ, ದಿಕ್ಕು ತಪ್ಪಿಸುವ ಸಂಕೀರ್ಣತೆ ಇಲ್ಲದ ಸಮರ್ಥ ಪಾಂಡಿತ್ಯ, ಮಗುವಿನಂತಹ ಸಹಜತೆ.

> ಎಷ್ಟು ಹಣತೆಗಳಿಂದ ಕತ್ತಲೆಯು ಕರಗುವುದು?
> ಎಷ್ಟು ಕವಿತೆಗೆ ಜಗದ ಕಣ್ಣು, ತೆರೆಯುವುದು?
> ಒಂದಿದ್ದರೂ ಸಾಕು ಮನೆಗೆ ಬೆಳಕಾಗುವುದು
> ಒಂದು ಕವಿತೆಗೂ ಕೂಡ ಮನ ಕರಗಬಹುದು.

ಪೀಡಿಸಿದ ಪ್ರಶ್ನೆಗಳಿಗೆಲ್ಲ ತಾವೇ ಪಡೆದುಕೊಂಡ ಉತ್ತರಗಳನ್ನು ನಮ್ಮ ಕೈಗಿಟ್ಟ ಕವಿ ಚೆನ್ನವೀರ ಕಣವಿ ಕನ್ನಡದ ಶ್ರೇಷ್ಠ ಕವಿಗಳಲ್ಲೊಬ್ಬರು. 'ಪತ್ರಿಕೆ'ಯ ಅಭಿಮಾನಿ ಹಿರಿಯರು. ಸಂದರ್ಶನದ ಔಪಚಾರಿಕತೆಯನ್ನು ಬದಿಗಿಟ್ಟು ಇರುವ ಮಿತಿಯಲ್ಲಿ ಅವರು ಪತ್ರಿಕೆಯೊಂದಿಗೆ ಹಂಚಿಕೊಂಡದ್ದು.

**'ಸಮನ್ವಯ ಕವಿ' ಎಂಬುದು ವಿಶೇಷಣವೆ?**

ಸಮನ್ವಯ ಎಂದ ಕೂಡಲೇ ಸುಮ್ಮನೇ ಕೂಡೋದು ಕೂಡಿಸಿಕೊಳ್ಳೋದು ಅಲ್ಲ. ಎಲ್ಲ ಕಾಲದಲ್ಲೂ ಈ ಒಳಗೊಳ್ಳೋದು ಇದ್ದೇ ಇತ್ತು. ಅದು ಪಂಪನ ಕಾಲದಿಂದ ನವೋದಯದವರೆಗೂ ಈ ಸಮನ್ವಯ ಇದ್ದೇ ಇತ್ತು. ಒಡಕು ಕಂಡದ್ದೇ ನವ್ಯದ ಕಾಲದಲ್ಲಿ. ಅಭಿಪ್ರಾಯ ಭೇದ ಇದ್ದಾಗಲೂ ಎದುರಿನವರ ಅಭಿಪ್ರಾಯ ಗೌರವಿಸೋದು ಸಜ್ಜನಿಕೆ. ನವೋದಯದ ಹಂತದಲ್ಲಿ ಬರೆಯೋದಕ್ಕೆ ಆರಂಭ ಮಾಡಿದ ನಾನು ನವ್ಯದ ಕಾಲದಲ್ಲಿ ನನ್ನ ಶೈಲಿಯನ್ನು ಬಿಟ್ಟು ಕೊಡಲಿಲ್ಲ. ನವ್ಯದ ನಂತರವೂ ನನ್ನ ಶೈಲಿ ಬದಲಿಸಲಿಲ್ಲ. ಸಮನ್ವಯ ಅನ್ನೋದು ವ್ಯಂಗ್ಯವಾಗಿದ್ದರೆ ಅದು ಅದನ್ನ ಗ್ರಹಿಸಿದೋರ ತಪ್ಪು. ಬರೀ ಸಾಹಿತ್ಯದಲ್ಲಷ್ಟೇ ಅಲ್ಲ ಬದುಕಿನೊಳಗೂ ಸಮನ್ವಯ

ಬಂಡಾಯ ಮನೋಧರ್ಮ ಸಾಹಿತ್ಯದುದ್ದಕ್ಕೂ ಇದ್ದದ್ದೇ

ಇರಬೇಕು ಅನ್ನೋನು ನಾನು. ಇರುವ ಪರಿಸರದಲ್ಲಿ ಪರಸ್ಪರರನ್ನು ಗೌರವದಿಂದ ಕಾಣೋದನ್ನೇ ಹಾಸ್ಯ ಮಾಡಿದರೆ ಬೆಳವಣಿಗೆ ಹೇಗೆ ಸಾಧ್ಯ? ನಾವು ಇದ್ದಲ್ಲಿಯೇ ನಿಲ್ಲಬೇಕಾದವರಲ್ಲ, ಬೆಳೆಯಬೇಕಾದವರು.

**ಇಡೀ ನವ್ಯದ ಸಂದರ್ಭ ತಮ್ಮನ್ನು ಪರಕೀಯನಂತೆ ಕಂಡಿತ್ತು. ಅದರ ಬಗೆಗೇನು ಹೇಳ್ತೀರಿ?**

ಕಾವ್ಯದ ಹೊಸ ಮಾರ್ಗ ಬಹುಕಾಲ ಉಳಿಯೋದಿಲ್ಲ. ನಮ್ಮ ಕಾವ್ಯ ಪರಂಪರೆ ಅದನ್ನೇ ಹೇಳ್ತಾ ಬಂದಿದೆ. ಆದಿ ಕಾಲದಿಂದ ಆಯಾ ಕಾಲದಲ್ಲಿ ತನ್ನದೇ ಆದ ಭಿನ್ನ ಜಾಡು ಹುಡುಕಿಕೊಂಡು ಬೆಳೆದು ಬಂದಿದೆ. ಅಂದಿನ ಕಾವ್ಯದ ದೋಷ ಏನಿದೆಯೋ ಅದನ್ನೇ ತೊಡೆದು ಮತ್ತೊಂದು ಹೊಸ ಮಾರ್ಗ ಬೆಳೆಯುತ್ತದೆ. ಹಾಗೆ ಬೆಳೆದ ಕಾವ್ಯದ ಕೊರತೆ ಗ್ರಹಿಸಿದ ಮತ್ತೊಂದು ಹೊಸ ಮಾರ್ಗಕ್ಕೆ ದಾರಿ ಮಾಡಿಕೊಡುತ್ತದೆ. ನವ್ಯರು ಮಾಡಿದ ತಪ್ಪೆಂದರೆ ಹಿಂದಿನವರು ಬರೆದದ್ದು ಕಾವ್ಯವೇ ಅಲ್ಲ ಎಂಬ ಪ್ರತಿಭಟನಾತ್ಮಕ ನಿರಾಕರಣೆ. ಅತಿ ಲೌಕಿಕತೆ. ತನ್ನ ದೋಷಗಳನ್ನು ತಾನೇ ಹೇಳಿಕೊಳ್ಳೋದು ಇತ್ಯಾದಿ. ಭಾಷೆ ದೃಷ್ಟಿಯಿಂದಲೂ ನೋಡಿದ್ರೆ ನವೋದಯದಲ್ಲಿ ಆಡು ಮಾತು ಬಳಸ್ತಿದ್ರು. ಅದು ವಚನಕಾರರ ಕಾಲದಲ್ಲಿ ಇತ್ತು. ಪಂಪನ ಕಾಲದಲ್ಲಿ ಇತ್ತು. ಹೆಚ್ಚಾಗಿ ಕಂಡು ಬಂದದ್ದು ನವ್ಯೋತ್ತರ ಸಂದರ್ಭದಲ್ಲಿ. ಸಮಾಜಮುಖಿ ಸಾಹಿತ್ಯ, ಜನಸಾಮಾನ್ಯನಿಗೂ ಅರ್ಥವಾಗುವ ಸಾಹಿತ್ಯ ಬರಲಿ ಅನ್ನೋ ಮಾತಿಗೆ ಬಲ ಬಂತು. ಈ ಮಾತಿನಿಂದಾರೂ ದೂರ ಹೋದವರಲ್ಲ. ನಾವು 'ಕಾವ್ಯಮಾನಂದಾಯ' ಎನ್ನುವುದು ನಿಜ. ಗೇಯತೆ, lyrical quality ಇಟ್ಟುಕೊಂಡು ಮುನ್ನಡೆಯಬೇಕು. ನಾನು ಬರೆಯುವ ಕಾವ್ಯ ನನಗೆ ಖುಷಿ ಕೊಡದಿದ್ರೆ ಅದು ಯಾರಿಗೂ ಆನಂದ ನೀಡೋದಿಲ್ಲ. ಈ ನಂಬುಗೆಯಿಂದ ಸಾಹಿತ್ಯ ನೋಡಿದ ನಾನು ಲಯ, ಗೇಯತೆಗಳನ್ನು ನಿರಾಕರಿಸಿದ ಕೆಲವರಿಗೆ ಬೇರೆಯೇ ಅಂತನ್ನಿಸಿರಬಹುದು.

**ಜನಸಾಮಾನ್ಯನಿಗೂ ಕಾವ್ಯ ಮುಟ್ಟುವ ಧಾವಂತದಲ್ಲಿ ಬರೆದು ಕೊಂಡವರೆಲ್ಲ ಕವಿಗಳಾದರಲ್ಲ?**

ಅಭಿವ್ಯಕ್ತಿ ಶಕ್ತಿ ಇರೋನೇ ಕವಿ. ಈ ಶಕ್ತಿ ಇದ್ದ ಕಾರಣಕ್ಕೆ ಆತ ಉಳಿದವರಿಗಿಂತ ಭಿನ್ನ. ಅಭಿವ್ಯಕ್ತಿಸುವ ಕಾರಣಕ್ಕೆ ಆತನಿಗೆ ಗೌರವ. ಬರೆದವನ ಕಾವ್ಯವನ್ನು ಅನುಭವಿಸಿದವರು ಕೊಡುವ ಮನ್ನಣೆಯನ್ನು ಕವಿ ತಲೆಗೇರಿಸಿಕೊಳ್ಳದೆ ನಿರ್ಲಿಪ್ತತೆಯಿಂದ ಸ್ವೀಕರಿಸಿಬೇಕು. ಗೌರವ, ಸನ್ಮಾನ ಅಲ್ಲಿಯೇ ಮರೆಯಬೇಕು. ಇನ್ನು ಮುದ್ದಾಮಾಗಿ ಕವಿಗಳಾಗೇತೀರಬೇಕೆಂದು ಹೊರಟವರಿಗೆ ಕಾವ್ಯ ಗೊತ್ತಿರೋದಿಲ್ಲ. ಅದು ಸುಲಭದ

ಪ್ರಕಾರ ಅನ್ನೋ ತಿಳುವಳಿಕೆ, ಕವಿ ಎನಿಸಿಕೊಳ್ಳೋ ಚಪಲ ಬೇರೆ. ಅದಕ್ಕೊಂದು Craftmanship ಇದೆ ಅನ್ನೋದು ತಿಳಿದು ಬರೆಯಬೇಕು. ಲಕ್ಷಣಕಾರ ನಾಗವರ್ಮನ ಮಾತು ನನಗೆ ನೆನಪಾಗುತ್ತದೆ.

> ಪ್ರತಿಭಾನಂ ಕಾವ್ಯವಿದ್ಯಾ ಪ್ರಚಯ ಪರಿಚಯಂ
> ವೃದ್ಧ ಸೇವಾನುರಾಗಂ, ಸತತಾಭ್ಯಾಸ ಪ್ರಯತ್ನಂ
> ಕವಿತೆಗೆ ನಿಯತಂ ಕಾರಣಂ

ಅನ್ನೋದನ್ನ ಸೂಕ್ತ ರೀತಿಯಲ್ಲಿ ಹೇಳಿದ್ದಾನೆ. ವಿಶೇಷ ಶಕ್ತಿ, ಲೋಕಾನುಭವ, ಹಿರಿಯ ಕವಿಗಳೊಂದಿಗೆ ಒಡನಾಟ, ಸತತ ಅಭ್ಯಾಸ, ಪ್ರಯತ್ನ ಕವಿತೆ ಹುಟ್ಟೋದಕ್ಕೆ ಕಾರಣವಾಗ್ತದೆ ಅಂತ. ಎಲ್ಲ ಕಾಲದಲ್ಲೂ ಬಂದದ್ದೆಲ್ಲ ಗಟ್ಟಿಯೇ ಅಂತಿರಲಿಲ್ಲ. ಜೊಳ್ಳೂ ಬಂತು. ಆದರೆ ಕಾಲದೊಂದಿಗೆ ಕೊಚ್ಚಿ ಹೋಗದೆ ಗಟ್ಟಿಯಾಗಿ ನಿಂತದ್ದು ಗಟ್ಟಿಯಾದದ್ದು. ಗಟ್ಟಿಯಾದ ಕಾವ್ಯ ಅರಿತಷ್ಟೂ ಹೊಸ ಹೊಸ ಹೊಳಹುಗಳನ್ನು ಕೊಡುತ್ತ ಹೋಗುತ್ತದೆ. ಉದಾಹರಣೆಗೆ ಬೇಂದ್ರೆಯವರದ್ದೇ ಕವಿತೆ ನೋಡಿ 'ಹೂತದ ಹುಣಿಸೆಯಾ ಚಿಗುರು.....' ಮೊದಲು ಓದುವಾಗ ನಾನದನ್ನು ಗಮನಿಸಿರಲಿಲ್ಲ. ಮೊನ್ನೆ ಮತ್ತೊಮ್ಮೆ ವಿಚಾರ ಮಾಡಿದೆ. ಹುಣಿಸೆಯ ಚಿಗುರು ಹೂವು ಬಿಟ್ಟಿದೆ ಎನ್ನುವ ಅರ್ಥ ಬರೋದನ್ನ ಗಮನಿಸಿದೆ. ಹುಣಿಸೆ ಮರದಲ್ಲಿ ಚಿಗುರು ಮತ್ತು ಹೂವು ಒಂದೇ ಕಾಲಕ್ಕೆ ಕಾಣಿಸಿಕೊಳ್ಳುವ ಸಾಮಾನ್ಯ ಸಂಗತಿಯನ್ನು ನಾವು ಗಮನಿಸಿದ್ದೇ ಇಲ್ಲ. ತಿಳಿಯೋದಕ್ಕೆ ಹೋದಷ್ಟೂ ತೆರೆದುಕೊಳ್ಳೋದು ಕವಿತೆಯ ಗುಣ.

**ಕಾವ್ಯದ ಶಕ್ತಿ ಸಾಧಿಸಿರೂ ತಾವು ಏನೇ ಕೊಟ್ಟರೂ ಅದನ್ನು ಕವಿತೆ ಮಾಡ್ತೀರಿ ಅನ್ನೋ ಅಪವಾದ ಇದೆ. ವಿಶ್ವಭಾರತಿಯಿಂದ ಹಿಡಿದು ವೀರೇಂದ್ರ ಹೆಗ್ಗಡೆಯವರೆಗೂ ಸುಲಭವಾಗಿ ಕವಿತೆ ಬರೆದು ಬಿಡ್ತೀರಿ ಅಂತ....!**

ಇರಬಹುದು. ಕವಿಗೊಂದು ಸಿದ್ಧತೆ ಇರ್ತದೆ. ಯಾವುದು ತನಗೆ ಹೆಚ್ಚು ಪ್ರಿಯವಾದದ್ದೋ, ಸಂದರ್ಭಕ್ಕೆ ಹೊಂದಬಲ್ಲದೋ ಅದಕ್ಕೆ ಕವಿತೆಯ ರೂಪ ಕೊಡಬಹುದು. ಮೂಲವಾಗಿ ಬರೆದವನಿಗೆ ತೃಪ್ತಿ ಇರಬೇಕು. ಅಂತರಂಗದಿಂದ ಬರೆದಾಗ ಅದು ತೃಪ್ತಿ ನೀಡುತ್ತದೆ. ಯಾರ ಬಗ್ಗೆ ಪ್ರೀತಿ, ಆಸಕ್ತಿ ಇದೆಯೋ ಅದನ್ನ ಲೇಖನಕ್ಕಿಂತ ಕವಿತೆಯಾಗಿಸೋದನ್ನು ಮಾಡಿದೆ. 'ವಿಶ್ವಭಾರತಿಗೆ ಕನ್ನಡದಾರತಿ' ಕವಿತೆ ಆಗ ಉಪಕುಲಪತಿಯಾಗಿದ್ದ ಡಿ.ಸಿ.ಪಾವಟೆಯವರು ಘಟಿಕೋತ್ಸವಕ್ಕೆ ಕೇಳಿದಾಗ ಬರೆದದ್ದು. ಶಾರದಾ ಹಾನಗಲ್ ಆವಾಗ ರಾಗ ಸಂಯೋಜನ ಮಾಡಿ ಹಾಡಿದ್ರು. ಇನ್ನು ವೀರೇಂದ್ರ ಹೆಗ್ಗಡೆಯವರ ಬಗ್ಗೆ.... ಯಾರೂ ಪರಿಪೂರ್ಣ ಅಲ್ಲ. ಕೆಲವು

ಲೋಪದೋಷ ಇರಬಹುದು. ಎದುರಿಗೆ ಇರೋ ವ್ಯಕ್ತಿ ಜನರಿಗೆ ಉಪಕಾರ ಆಗೋವಂಥದ್ದು ಏನು ಮಾಡಿದ್ರೋ ಅದನ್ನ ನೋಡಬೇಕು. ಅವರ ಗ್ರಾಮಾಭಿವೃದ್ಧಿ ಕಾರ್ಯಕ್ರಮ ನನಗ ಭಾಳ ಸೇರಿತು. ನನ್ನ ಕವಿತೆ ನೋಡಿರಬಹುದು. ನಂಬಿಕೆಯ ಮಾತಿರಲಿ, ನಂಬಿಕೆಯನ್ನು ಹೊರಗಿಟ್ಟೇ ವಸ್ತುಶಃ ಅವರು ನಮ್ಮೆದುರಿಗೆ ಸಾಧಿಸಿದ್ದನ್ನು ಮೆಚ್ಚಿದ್ದು, ಓದುವವರು ಸಮಗ್ರ ದೃಷ್ಟಿಯಿಂದಲೇ ನೋಡ್ಲಿ, ಪೂರ್ವಗ್ರಹ ಬೇಡ.

**ತಮ್ಮ ಮೇಲೆ ಸಂಶಯಗಳನ್ನು ಆರೋಪಿಸುತ್ತಲೇ ಬಂದ ಬಂಡಾಯದ ಬಗೆಗೇನು ಹೇಳುತ್ತೀರಿ?**

ಅವರ ಧ್ಯೇಯ ಒಳ್ಳೆಯದೆ. ಕ್ರೌರ್ಯ, ಹಿಂಸೆ, ಶೋಷಣೆ, ಅಸಮಾನ ವ್ಯವಸ್ಥೆ ಇದರ ವಿರುದ್ಧ ಹೋರಾಟ ಮಾಡಬೇಕು. ಇದು ಒಳ್ಳೆಯದು. ಯಾವುದು ಅಮಾನವೀಯವೋ ಅದನ್ನ ತಿರಸ್ಕರಿಸಬೇಕು. ಅದು ಅಬ್ಬರದ ರೂಪದಲ್ಲಿ ಇರ್ತದೆ. ಮೊದ ಮೊದಲು ಸಿದ್ಧಲಿಂಗಯ್ಯ, ದೇವನೂರು ಮಹಾದೇವ ಆಕ್ರೋಶ ತೋರಿದರೂ ನಾವು ಅದನ್ನ ಸಹಿಸಬೇಕು. ಆಮೇಲೆ ಅವರೇ ಸಮಚಿತ್ತರಾದರು. ಯಾರು ಆ ಸಾಹಿತ್ಯ ಬರೆದರೋ ಅವರ ವೈಯಕ್ತಿಕ ನೆಲೆಯನ್ನು ನಾವು ಗಮನಿಸಬೇಕು. ಬಂಡಾಯದ ಧೋರಣೆಯಿಂದ ಟೀಕೆ ಮಾಡಿದ್ದನ್ನ ಉಳಿದವರು ಹೇಗೆ ಸಹಿಸಿದ್ರೊ ಹಾಗೆ ಆ ವಲಯದ ನ್ಯೂನತೆಗಳನ್ನು ಟೀಕೆ ಮಾಡಿದ್ರೆ ಅವರೂ ಸಹಿಸಬೇಕು. ಆದ್ರೆ ಅವರು ಸಹಿಸೋದಿಲ್ಲ. ಬಾಗಲಕೋಟೆಯೊಳಗೆ ಎರಡು ವರ್ಷದ ಕೆಳಗೆ ಬಂಡಾಯ ಸಾಹಿತ್ಯ ಸಮ್ಮೇಳನ ನಡೀತು. ನನಗೆ ಮೊದಲಿಂದ್ಲೂ, ಒಡನಾಟ ಇದ್ದ ಸತ್ಯಾನಂದ ಪಾತ್ರೋಟ ಕರೆದರು ಅಂತ ಅವನ ಪ್ರೀತಿಗೆ ಕಟ್ಟು ಬಿದ್ದು ಹೋದೆ. ದೇವನೂರು ಮಹಾದೇವರ 'ಕುಸುಮಬಾಲೆ'ಗೆ ಇರುವ ಕಾವ್ಯಾತ್ಮಕ ಗುಣವನ್ನು ನಾನು ಮೆಚ್ಚಿ ಸಮರ್ಥಿಸಿಕೊಂಡೆ. ಬಂಡಾಯದವರೇ ಅದನ್ನ ನಿರಾಕರಿಸಿದ್ರು, ಮಹಾದೇವ ಉತ್ತಮ ಲೇಖಕನಾಗಿ ಬೆಳೆಯೋದನ್ನ ಸಹಿಸದವರು ಸಾಮಾನ್ಯರಿಗೆ ತಿಳಿಯದ ಭಾಷೆ ಅಂತ ನೆಪ ಮಾಡಿ ಟೀಕೆ ಮಾಡಿದ್ರು. ಯಾವುದೇ ಪಂಥ, ಪೊರೆ ಕಳಚಿ ಮುಂದುವರೆಯಬೇಕು. ಆದ್ರೆ ಸದ್ಯದ ಬಂಡಾಯ ಸಾಹಿತ್ಯ ಆ ಸ್ಥಿತಿಯಲ್ಲಿಲ್ಲ. ಶಿವರುದ್ರಪ್ಪ ಬಂಡಾಯ ಸಾಹಿತ್ಯ ಸ್ಥಗಿತಗೊಂಡಿದೆ ಅಂದ್ರು. ನಾನು ಬಂಡಾಯ ಸಾಹಿತ್ಯ ಈಗ ಧ್ಯಾನಸ್ಥಸ್ಥಿತಿಯಲ್ಲಿದೆ ಎಂದು ಬಾಗಲಕೋಟೆಯೊಳಗೆ ಹೇಳಿದ್ದೆ. ಅದಕ್ಕೆ ಚಂಪಾ ತುಮಕೂರು ಸಮ್ಮೇಳನದಲ್ಲಿ ಮಾತಾಡಿ ಶಿವರುದ್ರಪ್ಪ ಮತ್ತು ಕಣವಿ ಬಂಡಾಯ ಲೇಖಕರ ವಿರುದ್ಧ ಪಿತೂರಿ ಮಾಡ್ತಿದ್ದಾರೆ ಅಂತ ಅಂದದ್ದನ್ನು ಪ್ರಜಾವಾಣಿಯೊಳಗೆ ನೋಡಿದೆ. ಈ ಸಣ್ಣತನಕ್ಕ ನನಗೆ ಖೇದ ಅನ್ನಿಸ್ತು. ಬಂಡಾಯ, ದಲಿತ ಎಂದು ಪ್ರಾರಂಭ ಆದ್ವೋ

ಅಂದಿನಿಂದ ನಾನು, ಶಿವರುದ್ರಪ್ಪ ಬೆಂಬಲಿಸಿದವರೇ. ತಮಗಿರುವ ಜೀವನಾನುಭವ ದಿಂದಾಗಿ ದಲಿತ ಲೇಖಕರ ಬರವಣಿಗೆ ಗಟ್ಟಿ ಸಾಹಿತ್ಯ. ದಲಿತ ಪ್ರಜ್ಞೆಯ ದಲಿತ ಸಾಹಿತ್ಯವನ್ನು ಬೆಂಬಲಿಸಿ ನಿಂತವರು ನಾವು. ಸಾಹಿತ್ಯದುದ್ದಕ್ಕೂ ಬಂಡಾಯ ಮನೋಧರ್ಮ ಇದ್ದದ್ದೆ. ಸರ್ವಜ್ಞ ವಚನಕಾರರು ಮಾಡಿದ್ದೇನು? ಅದೂ ಬಂಡಾಯವೇ. 'ಹೊಲೆ ಮಾದಿಗರ ಹಾಡು' ಬಂದಾಗ ಇದೇ ಚಂಪಾಗೆ ಕೊಟ್ಟು 'ಕರ್ನಾಟಕ ಭಾರತಿ'ಗೆ ವಿಮರ್ಶೆ ಬರೆಸಿದ್ದೆ. ಎಷ್ಟೋ ಜನ ಘೋಷಣೆ ಕೂಗ್ತೋರ್ವಿಗೆ ಈಗ ಅನ್ನಿಸ್ತಿರಬೇಕು, ಇಲ್ಲಿಗೆ ನಮ್ಮ ಬಂಡವಾಳ ಮುಗೀತು ಅಂತ. ಕೆಲವರು ಪ್ರಾಮಾಣಿಕವಾಗಿಯೇ ಈ ಮಾತು ಒಪ್ತಾರೆ.

**ಬಂಡಾಯ ಚಳವಳಿಯನ್ನು ವಚನ ಚಳವಳಿಗೆ ಸಮೀಕರಿಸಿ ಕೊಂಡಿದ್ದರಲ್ಲ?**

ಯಾವುದನ್ನೂ ನಿರೀಕ್ಷೆ ಮಾಡದೇ ಇದ್ದದ್ದು ವಚನ ಚಳುವಳಿ. ಇವರು ಅನುಕೂಲಕ್ಕೆ ತಕ್ಕಂತೆ ತಮ್ಮ ವಾದ ಬದಲಿಸಿಕೊಂಡೋರು. ವ್ಯವಸ್ಥೆಯ ವಿರೋಧವಾಗಿ ಇರಬೇಕೆನ್ನೊ ತೀರ್ಮಾನ ಬದಲಿಸಿ, ಯಾವುದೇ ವೇದಿಕೆ ಸಿಕ್ಕರೂ ನಾವದನ್ನ ಬಳಸಿಕೊಳ್ಳಬೇಕು, ಆ ವೇದಿಕೆಯ ಮೇಲೆ ನಮ್ಮ ಸಿದ್ಧಾಂತ ಮಂಡಿಸೋಣವೆಂದು ಕೊಂಡು ಅಕಾಡೆಮಿ, ಪರಿಷತ್ತು, ಸರ್ಕಾರದೆಡೆಗೆ ಕಣ್ಣು ಹಾಕತೊಡಗಿದರು. ಅದಕ್ಕೆ ನಾನನ್ನೋದು, ಯಾವುದೇ ವಾದಕ್ಕೂ 'ಅತಿ' ಇರಬಾರ್ದು. ಆ ಕಾಲಕ್ಕೆ ಬಹಳ ಜನರಿಗೆ ಬಾಯಿ ಬಂತು, ನಿಜ. ಯಾರಿಗೆ ಶಕ್ತಿ ಇತ್ತೋ ಅವರು ಉಳಿದರು. ಬಂಡಾಯದ ಧೋರಣೆ ಇರಲಿ, ಇಲ್ಲದಿರಲಿ, ಇವತ್ತು ಹೀಗೆ ಬರೆದರೇನೇ ನಡೆಯೋದು, ಆದ್ದರಿಂದ ಹೀಗೆಯೆ ಬರೆಯಬೇಕು ಎಂಬ ವಾದ ನಂಬಿ ಬರೆದರು. ಅಂತಹವರ ಸಂಖ್ಯೆಯೇ ಬಹಳವಿತ್ತು. ವಚನಕಾರರ ಚಳುವಳಿಗೆ ವಚನಕಾರರೇ ಸಾಟಿ, ಮತ್ತಾರೂ ಅಲ್ಲ, ಅದು ಶ್ರದ್ಧೆಯ ಯುಗ!

**ಕನ್ನಡದಲ್ಲಿ ವಚನ ಸಾಹಿತ್ಯದ ಪ್ರಾಮುಖ್ಯತೆ ಹೇಗೆ ಗುರುತಿಸ್ತೀರಿ?**

ಕನ್ನಡ ಸಾಹಿತ್ಯದಲ್ಲಿಯೇ ವಿಶಿಷ್ಟವಾದ ಆಡು ಮಾತಿನ ಲಯದಿಂದ ರೂಪಗೊಂಡ ವಚನ ಸಾಹಿತ್ಯ ಸಮಾಜದ ವಿವಿಧ ಸ್ತರಗಳಿಂದ ಬಂದ ಶ್ರೀಸಾಮಾನ್ಯನ ಸಾಹಿತ್ಯಾಭಿವ್ಯಕ್ತಿಯ ಭಾವ. ಭಾಷೆ-ಧೋರಣೆಗಳಲ್ಲಿ ಸಂಪೂರ್ಣ ಭಿನ್ನವಾಗಿರೋದನ್ನ ಕಾಣ್ತೇವೆ. ವಚನ ಸಾಹಿತ್ಯದ ಈ ಪರಂಪರೆ ಹೊಸಗನ್ನಡ ಸಾಹಿತ್ಯದ ಮುಖ್ಯ ಪ್ರೇರಣೆಗಳಲ್ಲಿ ಒಂದಾಗಿದ್ದಲ್ಲದೆ ಮುಂದಿನ ಎಲ್ಲ ಕಾವ್ಯ ಘಟ್ಟಗಳಲ್ಲಿ ಪ್ರೇರಣೆ ಬೀರಿದೆ.

ಹತ್ತು ಸಾವಿರ ಗೀತವ ಹಾಡಿ, ಅರ್ಥವಿಟ್ಟಲ್ಲಿ ಫಲವೇನು?
ಮುಟ್ಟುವ ತೆರನನರಿಯದನ್ನಕ್ಕ-

ಬಸವಣ್ಣನವರ ಈ ಮಾತು ಕಾವ್ಯದ ಸಂವಹನ ಗುಣಕ್ಕೆ ಕೊಟ್ಟಿರುವ ಮಹತ್ವದಿಂದಾಗಿ ಇವತ್ತಿಗೂ ಪ್ರಸ್ತುತ.

**ಒಂದು ಕಾಲದಲ್ಲಿ ವಿನಾಯಕ-ಅಡಿಗರನ್ನು ಜೋಡಿಯಾಗಿ ಗುರುತಿಸಿದಂತೆ ಈಗ ಕಣವಿ-ಶಿವರುದ್ರಪ್ಪ ಎಂದು ಗುರುತಿಸುತ್ತಾರಲ್ಲ?**

ಒಂದು ಕಾಲದೊಳಗೆ ಕಾವ್ಯ majestic ಆಗಿ ಇರಬೇಕು ಅನ್ನೋದಿತ್ತು. ಆದ್ರೆ ಬೇಂದ್ರೆ ಹಕ್ಕಿ ಹಾರುತಿದೆ ನೋಡಿದಿರಾ..... ಎಂದು ಬರೆದೊಡನೆ ಹಕ್ಕಿ ಹಾರೋದೆಲ್ಲಾ ಹೇಗೆ ಕಾವ್ಯವಾಗುತ್ತದೆ ಅಂತ ಕೇಳಿದೋರು ಇದ್ರು. Romantic ಮನೋಧರ್ಮ ಬಹುಶಃ ನಮ್ಮಿಬ್ಬರ ನಡುವೆ ಇದ್ದುದು ಹಾಗೆ ಅನ್ನೋದಕ್ಕೆ ಕಾರಣ ಆಗಿರಬಹುದು. ನಾವಿಬ್ಬರೂ ಬಹಳ ಆತ್ಮೀಯರಾಗಿರುವುದಕ್ಕೂ ಇರಬೇಕು. ನನ್ನಲ್ಲಿ ಶಿವರುದ್ರಪ್ಪನವರ ನಿಷ್ಠುರತೆ ಇಲ್ಲ. ಪು.ತಿ.ನ.ರೇ ಒಂದು ಸಲ ಹೇಳಿದ್ದರು-ಬೇಂದ್ರೆ, ಕುವೆಂಪು ಪ್ರಭಾವದಿಂದ ತಪ್ಪಿಸಿಕೊಂಡು ಬರೆದವನೇ ನಿಜವಾದ ಕವಿ ಅಂತ; ಹಂಗ ತಪ್ಪಿಸಿಕೊಂಡವರು ಚೆನ್ನವೀರ ಕಣವಿ, ಇನ್ನೊಬ್ಬ ಶಿವರುದ್ರಪ್ಪ ಅಂತ.

**ಸಾಹಿತ್ಯದ ಮಾತು ಬಂದಾಗೆಲ್ಲ ತಾವು ಬೇಂದ್ರೆಯವರ ಪ್ರಸ್ತಾಪ ಮಾಡ್ತೀರಿ?**

ನನ್ನ ಕಾವ್ಯಕ್ಕೆ ಬೇಂದ್ರೆ ಪ್ರೇರಣೆ, ಆದರೆ ಪ್ರಭಾವ ಅಲ್ಲ. ಅವರು 'ಪಾತರಗಿತ್ತಿ ಪಕ್ಕಾ ನೋಡಿದ್ದೇನೇ ಅಕ್ಕಾ' ಪ್ರಯೋಗ ಮಾಡಿದ್ರು. ನಾನು 'ಗಿರಿ, ಗಿರಿ ಗಿಂಡಿ' ಬರ್ದೆ. ನನಗೆ ಧೈರ್ಯ ಬಂದದ್ದು ಹೀಗೆ. ಕೆಲವೊಮ್ಮೆ ಅವರು ಕನ್ನಡಕ್ಕೆ ಹೊಂದದೇ ಇದ್ದಂತಹ ಛಂದಸ್ಸು ಬಳಿಸಿದ್ರು. ಜಾನಪದ ಪ್ರಯೋಗ ಮಾಡಿದ್ರು. ನಾನು ನುಡಿಗಟ್ಟು ಬಳಸೋದಕ್ಕೆ ಆದ್ಯತೆ ನೀಡಿದೆ. ಹೊಸಗನ್ನಡ ಸಾಹಿತ್ಯ ಪಡೆದ ಬಹುದೊಡ್ಡ ಪ್ರತಿಭಾನ್ವಿತರಲ್ಲಿ ಒಬ್ಬರು ಬೇಂದ್ರೆ. ದೇಶಿ ಪರಂಪರೆಯನ್ನು ಮೈಗೂಡಿಸಿಕೊಂಡು ಆಧುನಿಕ ಕಾವ್ಯ ರಚನೆಯಲ್ಲಿ ಅದನ್ನು ಎಲ್ಲ ರೀತಿಯಿಂದಲೂ ಶ್ರೀಮಂತಗೊಳಿಸಿದವರು. ಬೇಂದ್ರೆ ನಮ್ಮ ಮೊದಲಿನ ಪರಂಪರೆಯ ನಿರ್ಮಾತೃವೆಂಬ ಕಾರಣಕ್ಕೆ ಅವರ ಪ್ರಸ್ತಾಪ ಬರ್ತಿರಬಹುದು. ಹಾಗೇ ಕುವೆಂಪು ಕೂಡ. ಕುವೆಂಪು ಭಾರತೀಯ ಸಾಹಿತ್ಯ ಕನ್ನಡ ಸಂದರ್ಭದಲ್ಲಿ ಪಡೆದುಕೊಂಡ ಉತ್ಕರ್ಷದ ಪ್ರತೀಕ. ಕುವೆಂಪು ವಿಚಾರ ಕ್ರಾಂತಿಯ ಪ್ರವರ್ತಕ!

**ಪ್ರತಿ ಕವಿಗೂ ಕಾವ್ಯ ಪ್ರೇರಣೆ ಇರುತ್ತಲ್ಲ, ತಮಗಾದ ಪ್ರೇರಣೆ ಏನು?**

ಜನರನ್ನು ಮೆಚ್ಚಿಸುವ ಧಾವಂತಕ್ಕಿಂತ ನನ್ನ ಅನುಭವದ ಅಂತಃಸಾಕ್ಷಿಯನ್ನು

ಮೆಚ್ಚಿಸುವುದೇ ನಿಜದ ಕಾವ್ಯ ಎಂದುಕೊಂಡವನು ನಾನು. ನಿಸರ್ಗ, ಜನಜೀವನ, ಕೆಲವು ಮಹಾನುಭಾವ ವ್ಯಕ್ತಿಗಳು ಮತ್ತವರ ಜೀವನ, ನಮ್ಮ ಕಾವ್ಯ ಪರಂಪರೆ, ಅದರ ಅಭ್ಯಾಸ ಇವು ಬಹುಮುಖ್ಯ ಪ್ರೇರಣೆ. ವಾಸ್ತವವಲ್ಲದ್ದು ನನ್ನದು ಅನ್ನಿಸೋದಿಲ್ಲ. ವಾಸ್ತವದ ಬದುಕೇ ನನಗೆ ಪ್ರೇರಣೆ.

**ತಮ್ಮ ಕವಿತೆಗಳಲ್ಲಿ ಉತ್ತುಂಗದಲ್ಲಿರುವ Romanticism ಗೆ ತಮ್ಮ ಯೌವನ ಕಾಲದಲ್ಲಿಯ ವಿವಾಹಪೂರ್ವದ ಪ್ರಣಯವೇ ಕಾರಣವಿರಬಹುದೆ?**

ಆವಾಗೆಲ್ಲ ಒಬ್ಬರಿಗೊಬ್ರು ಪತ್ರ ಬರೀತಿದ್ವಿ. ಮನೆಯಲ್ಲಿ ಮಾತಾಡೋದಕ್ಕೆ ಅಂತಹ ಆತಂಕ ಇರಲಿಲ್ಲ. ತಾರುಣ್ಯದ ಆತಂಕ ಇತ್ತು. ಒಂದು ಸಂಯಮ ಇದ್ದೇ ಇರ್‍ತಿತ್ತು. ನಾವೇ ಏರ್ಪಡಿಸಿಕೊಂಡಿದ್ದ ಗಡಿ ದಾಟ್ತಿರಲಿಲ್ಲ. ಬಹುಶಃ ಆ ಸಂಯಮದ ಅವಧಿ Romantic ಕಲ್ಪನೆಗೆ ಕಾರಣವಾಗಿದ್ದಿರಬಹುದು. 'ಆಕಾಶ ಬುಟ್ಟಿ', 'ಮಧುಚಂದ್ರ' ಸಂಕಲನಗಳು ಬಂದ್ವು. 'ನಿರೀಕ್ಷೆ', 'ಜೀವ ಜೀವಾಳ'ದಂತಹ ಪದ್ಯಗಳೂ ಬಂದ್ವು.

**ಎಲ್ಲ ಪಂಥಗಳ ನಂತರ ಕನ್ನಡದಲ್ಲೊಮ್ಮೆಲೇ ನಿರ್ವಾತ ಏರ್ಪಟ್ಟಿದೆ. ವ್ಯಾಖ್ಯಾನಿಸಲಾಗದ ಇವತ್ತಿನ ಈ ಸ್ಥಿತಿಯ ಬಗೆಗೇನು ಹೇಳ್ತೀರಿ?**

ನಿರ್ವಾತ ಉಂಟಾಗಿದೆ ನಿಜ. ಬರೆಯೋವ್ರು ಬರೀತಾನೆ ಇದಾರೆ. ಆದ್ರೆ ಲೇಬಲ್ ಇರಲಿಕ್ಕಿಲ್ಲ. ನವ್ಯದಿಂದ ಬಿಡಿಸಿಕೊಂಡು ಲಂಕೇಶ್, ತೇಜಸ್ವಿ ಬರೆಯೋದಿಕ್ಕೆ ತೊಡಗಿದ್ರು. ಇತ್ತೀಚಿನ ಲಂಕೇಶ್‌ರ 'ಉಲ್ಲಂಘನೆ' ಕೃತಿ ಆಂತರಂಗಿಕವಾಗಿ ಅರಗಿಸಿಕೊಂಡು ಬರೆದ ಉತ್ತಮ ಕೃತಿ. ಉಲ್ಲಂಘನೆಯ ಕೊನೆ ಕಾಡುತ್ತಲೇ ಇರುತ್ತದೆ. ಅದನ್ನು ನೆನಪಿಟ್ಟುಕೊಂಡು ನಾವು ನೋಡಬೇಕು.

ಸಮಗ್ರವಾಗಿ ಸಾಹಿತ್ಯದ ಬಗ್ಗೆ ಪ್ರೀತಿ ಇಟ್ಟುಕೊಂಡವರು ಕಡಿಮೆ. ನಾವು ಬರೀ ಪಂಥಾಭಿಮಾನಿಗಳೇ ಆಗಿದ್ದೇವೆ. ಬರೆಯೋದು ಇಲ್ಲವೆ ಸಮರ್ಥಿಸಿ ಕೊಳ್ಳೋದೇ ಎಲ್ಲಕ್ಕಿಂತ ಜಾಸ್ತಿಯಾಗಿದೆ. ಸ್ವಲ್ಪ ಕಾಲದ ತಾಟಸ್ಥ್ಯ ವ್ಯಕ್ತಿಗೆ, ಕಾಲಕ್ಕೆ ಸಿದ್ಧಲಿಂಗಯ್ಯನವರ 'ಊರು ಕೇರಿ' ನೋಡಿರಿ, ತನ್ನ ನೋವು ತಾನೇ ತೋರಿಸಿ ನಗುವ ಸ್ಥಿತಿ ಆರೋಗ್ಯ ಪೂರ್ಣ.

ಇವತ್ತಿನ ಈ ತಾಟಸ್ಥ್ಯದಿಂದ ಮುಂದೇನು ಎಂದು ಊಹಿಸೋದು ಕಷ್ಟ. ರಾಜಕೀಯವಾಗಿ ದೇಶಾದ್ಯಂತ ಸ್ಥಿತ್ಯಂತರಗಳು ನಡೀತಿವೆ. ಈ ಭ್ರಷ್ಟತೆಯನ್ನು ತಡೆಯೋದಕ್ಕೆ ನಾವು ಪ್ರಯತ್ನಿಸಬೇಕು. ಭ್ರಷ್ಟತೆ ವಿಷವ್ಯೂಹವಾಗಿ ಅದಿಲ್ಲದ ರಂಗವಿಲ್ಲ ಎನ್ನುವಂತಾಗಿದೆ. ಭಾರತೀಯ ಸಂಸ್ಕೃತಿ..... ಅದರ ಉಪಸಂಸ್ಕೃತಿ.....

ಅಲ್ಲದೆ ಅಜ್ಞಾತ ಸಂಸ್ಕೃತಿ. ಇಂಥವೆಲ್ಲ ಇದ್ದು ಭಾರತೀಯ, ಭಾರತ.... Rediscovery of Indianness.... ಭಾರತೀಯತೆಯ ಪುನಃಶೋಧ ನಾವು ಮಾಡಿಕೊಳ್ಳಬೇಕಾಗಿದೆ. ಗಾಂಧಿ, ನೆಹರೂ, ಟ್ಯಾಗೋರ್, ಅರವಿಂದೋ ಮಾಡಿದ್ದು. ಮತ್ತೆ ನಮ್ಮ ಮೇಲೆ ಪರಕೀಯ ಸಂಸ್ಕೃತಿಯ ಹಾಗೂ ವಾಣಿಜ್ಯದ ಆಕ್ರಮಣ ನಡೀತಿದೆ. ನಮ್ಮಲ್ಲೇ ನಮ್ಮ ಮಾದರಿಗಳನ್ನು ಹುಡುಕಬೇಕಿದೆ. ಅದರ ಪುನರ್ ವ್ಯಾಖ್ಯಾನ ನಡೀಬೇಕಿದೆ. ಭಾರತೀಯತೆ ಎಂದರೆ ಹಿಂದುತ್ವ ಎನ್ನುವುದಲ್ಲ. ಯಾವುದನ್ನ ತ್ಯಾಜ್ಯ ಮಾಡಬೇಕೋ ಅದನ್ನ ನಿರ್ದಾಕ್ಷಿಣ್ಯವಾಗಿ ವರ್ಜಿಸಬೇಕು. ಯಾವುದು ದೇಶ ಕಟ್ಟಬಲ್ಲದೋ ಅದನ್ನು ನಾವು ಮುನ್ನಡೆಸಬೇಕು. ಭಾರತೀಯತೆ ಈ ಕಾಲದ Urgency.

ನವೋದಯದಿಂದ ಇಲ್ಲಿಯವರೆಗೂ ಯಾವುದು ಉತ್ತಮ ಕೃತಿ ಅಂತ ನೋಡಿದೆವೋ ಅಲ್ಲೆಲ್ಲ ಭಾರತೀಯತೆ ಇದ್ದೇ ಇದೆ. ಎಲ್ಲವನ್ನೂ ರಾಜಕೀಕರಣ ಗೊಳಿಸುವುದನ್ನು ಬಿಡಬೇಕು. ಯಾವುದಕ್ಕೂ ತಾತ್ಕಾಲಿಕ ಪ್ರತಿಕ್ರಿಯೆಯನ್ನು ಕೊಡೋದನ್ನ ಕಲಿತಿದ್ದೀವಲ್ಲ, ಅದು ನಿಷ್ಪ್ರಯೋಜಕ. ಅಲ್ಲಿ ನಿಷ್ಪಕ್ಷಪಾತತೆ ಇರೋದಿಲ್ಲ. ಈಗ ಹಳಬರೂ, ಹೊಸಬರೂ ಕೂಡಿಯೇ ಸಾಹಿತ್ಯ ನಿರ್ಮಿತಿಯಲ್ಲಿ ತೊಡಗಿದ್ದಾರೆ. Oldest and the youngest are at work with the strongest ಎಂಬ ವರ್ಡ್ಸ್‌ವರ್ಥನ ಮಾತು ಇವತ್ತಿನ ಸಾಹಿತ್ಯದ ಪ್ರವೃತ್ತಿಯನ್ನು ಹೋಲುತ್ತದೆ.

ಎರಡು ವರ್ಷದ ಹಿಂದೆ ಅಗ್ರಸ್ಥಾನದಲ್ಲಿದ್ದ ಈ ದೇಶದ ನೂರು ಕಂಪನಿಗಳು ಹೊಂದಿದ್ದ ಆಸ್ತಿಯೇ ಅರವತ್ತಾರು ಸಾವಿರ ಕೋಟಿಯಾಗಿತ್ತು. ಅವುಗಳ ಲಾಭಾಂಶವೇ ಹತ್ತು ಸಾವಿರಕೋಟಿ ಮಿಕ್ಕಿತ್ತು. ಬ್ರಿಟಿಷ್ ವಸಾಹತುಶಾಹಿಯ ನಂತರ, ಜಮೀನ್ದಾರರು ರಾಜರುಗಳ ಜಾಗದಲ್ಲಿ ಬಹುರಾಷ್ಟ್ರೀಯ ಕಂಪನಿಗಳನ್ನು ನೋಡುವ ದಿನ ದೂರವಿಲ್ಲ. ಭಾರತೀಯ ಸಂಕಲ್ಪ ಶಕ್ತಿಯೂ ಕಡಿಮೆಯದ್ದೇನಲ್ಲ. ಭಾರತೀಯತೆ ಬದುಕಾಗಬೇಕು. ಆವಾಗ ಯಾವ ಆಕ್ರಮಣ, ಒಪ್ಪಂದ ಏನೂ ಮಾಡೋಕಾಗೋದಿಲ್ಲ. ಎಲ್ಲ ದಿಕ್ಕಿನಿಂದ ಭಾರತೀಯನೆಂಬ ಹೊಣೆಗಾರಿಕೆ ಬೆಳೆಯಬೇಕು. ಇದು ವರ್ತಮಾನದ ಸಾಹಿತ್ಯದ ಪ್ರಣಾಳಿಕೆಯಾಗಲಿ.

**ಭಾರತೀಯತ್ವದ ಪುನಃಶೋಧ ಈ ಕಾಲದ ತುರ್ತ ಎಂದಿರಲ್ಲ, ಬರಹಗಾರರನ್ನುದ್ದೇಶಿಸಿ ಹೇಳಿದಿರಾ?**

ಬರೀ ಬರಹಗಾರಿಕೆ ಅಂತ ಅಲ್ಲ. ಅದು ಎಲ್ಲ ರಂಗದಲ್ಲೂ ಆಗಬೇಕಾದದ್ದು. ಭಾರತೀಯ ದೃಷ್ಟಿಯನ್ನು ಬೆಳಸಬೇಕಾದದ್ದು ಲೇಖಕರ ಹೊಣೆಗಾರಿಕೆ. ಭಾರತ ತನ್ನನ್ನು ತಾನು ಸ್ಪಷ್ಟಗೊಳಿಸಬೇಕಾದ ಅವಶ್ಯಕತೆಯನ್ನು ತಿಳಿದುಕೊಂಡು ಲೇಖಕರಾದ ನಾವು

ನಮ್ಮ ಸೃಜನಾತ್ಮಕ ಬರವಣಿಗೆ ಹಾಗೂ ವಿಮರ್ಶೆಯ ಮುಖಾಂತರವೇ ಅದಕ್ಕೆ ದಾರಿ ಮಾಡಬೇಕಾದದ್ದು ಇದೆ. ಸಂಕ್ರಮಣ ಕಾಲದಲ್ಲಿರುವ ನಮ್ಮ ರಾಷ್ಟ್ರಕ್ಕೊಂದು ಕ್ರಿಯಾಯೋಜನೆ ಸೂಚಿಸುವಲ್ಲಿ ಎಲ್ಲರ ಕಾಣಿಕೆಯೂ ಬರಹ ರೂಪದಲ್ಲಿ ಸಲ್ಲಬೇಕಿದೆ. ಮನುಷ್ಯರ ನಡುವಣ ಸಂಬಂಧ, ವ್ಯಕ್ತಿ ಹಾಗೂ ಸಮುದಾಯದ ನಡುವಿನ ದ್ವಂದ್ವಾತ್ಮಕ ಸಂಬಂಧಗಳು, ಇವುಗಳ ಅಂತಃಶೋಧ ಕನ್ನಡದ ಉತ್ತಮ ಕೃತಿಗಳಲ್ಲಿ ನಡೆದಿದೆ. ಇಂತಹ ಕೃತಿಗಳಿಂದ ಭಾರತೀಯತೆಯ ಸಾರವನ್ನು ಎತ್ತಿ ತೋರಿಸುವುದೂ ನಡೆಯಬೇಕು.

**ಭಾರತೀಯತ್ವವೇ ಭಾರತೀಯ ಸಮಸ್ಯೆಗಳಿಗೆ ಪರಿಹಾರ ಎಂದಾದಲ್ಲಿ ಇದ್ದವರೆಲ್ಲ ಭಾರತೀಯೇತರ ವಿಚಾರಗಳಿಂದಲೇ ಪರಿಹಾರ ಹುಡುಕ ಹೊರಟರಲ್ಲ?**

ಸಮಸ್ಯೆ ಉಲ್ಬಣಿಸಿದ್ದು ಇಲ್ಲಿಯೇ. ಪ್ರಚಲಿತ ಯುರೋಪಿಯನ್ ಕೇಂದ್ರಿತ ದೃಷ್ಟಿಕೋನ ಅಥವಾ ಪೌರಾಸ್ತ್ಯ ಪಂಡಿತರ ದೃಷ್ಟಿಯಿಂದ ಇದನ್ನ ಪರಿಹರಿಸೋದು ಸಾಧ್ಯ ಇಲ್ಲ. ಉದಾಹರಣೆಗೆ ಬಾಬರಿ ಮಸೀದಿಯ ಪತನದ ನಂತರದ ಕೋಮು ಗಲಭೆಗಳಿಂದ ನಮ್ಮಲ್ಲಿ ಹೆಚ್ಚು ಹೆಚ್ಚು ಕೋಮು ಸೌಹಾರ್ದದ ಬಗ್ಗೆ ಚರ್ಚೆ ನಡೆಯುತ್ತಲಿದೆ, ಆಳಕ್ಕಿಳಿಯುತ್ತಿಲ್ಲ. ಈ ದಿಕ್ಕಿನಲ್ಲಿ ಪರಿಹಾರಕ್ಕಾಗಿ ಕೈ ಚಾಚುವವರೆಲ್ಲ ೧೮ನೆಯ ಶತಮಾನದ ಫ್ರೆಂಚ್ ಕ್ರಾಂತಿಯ ವಿಚಾರಕ್ಕೆ ಮೊರೆ ಹೋಗುತ್ತಾರೆ. ನಮ್ಮಲ್ಲೇ ಇಂಥದೊಂದು ಸಮಾನ ಸಮಾಜ ವ್ಯವಸ್ಥೆಗೆ ಶರಣರು ಹೋರಾಡಲಿಲ್ಲವೇ? ಎಲ್ಲ ಸಾಮಾಜಿಕ ನೀತಿ-ನಿಯಮಗಳೂ ಮನುಷ್ಯ ನಿರ್ಮಿತ, ಅವು ಪ್ರಶ್ನಾತೀತವೇನೂ ಅಲ್ಲ ಎಂಬ ದಿಟ್ಟತನವೇ ದೈವೀಕರಣದ ಸರಪಳಿಯಿಂದ ಕಟ್ಟಿದ ಶೋಷಣೆಯ ತಂತ್ರಗಳನ್ನು ತೊಡೆದು ಹಾಕಿತು. ಅಲ್ಲಿಂದ ಹದಿನೇಳನೆಯ ಶತಮಾನದವರೆಗೆ ಜಾತಿ ಪದ್ಧತಿಯ ವಿರೋಧದ ಆಂದೋಲನಗಳಿಗೆಲ್ಲ ಕಾರಣವಾಯಿತು ಊಳಿಗಮಾನ್ಯ ಪದ್ಧತಿಯ ಮೌಲ್ಯವೆಂದು ತಿಳಿದರು. ಭಾರತೀಯ ಜಾತ್ಯತೀತತೆ ಎಂದರೆ ಖಂಡಿತವಾಗಿಯೂ ಎಲ್ಲ ಧರ್ಮಗಳಿಗೆ ಸರಕಾರ ನೀಡುವ ಬೆಂಬಲವಲ್ಲ. ಹುಸಿ ಅನರ್ಥಕಾರಿಗಳು ಒಂದೆಡೆಯಾದರೆ, ಇನ್ನೊಂದೆಡೆ ಪೂರ್ವಾಗ್ರಹಪೀಡಿತ ಹಿಂದೂತ್ವದ ಬೆಂಬಲಿಗರು. ಹೊರ ತೋರಿಕೆಗೆ ಭಾರತೀಯತ್ವ ಹೇಳಿದರೂ ಒಳಗೊಳಗೆ ಪ್ರಗತಿಯ ವಿರೋಧವಾಗಿ ಇನ್ನುಳಿದವರನ್ನು ದ್ವೇಷಿಸುತ್ತ ವಿಭಜಕ ಶಕ್ತಿಯಂತೆಯೇ ಕಾಣುತ್ತಾರೆ. ತನ್ನ ಸ್ವಂತ ಅಂಗಾಗಗಳನ್ನೇ ಕಳೆದುಕೊಂಡ ದೇಹ ಉಳಿಯಬಲ್ಲುದೆ? ತನ್ನವರನ್ನೇ ಕೊಲ್ಲಲೆಳೆಸುವ ದೇಶವಾದರೂ ಹೇಗೆ ಉಳಿಯಬಲ್ಲದು? ಅಂತಹವರ ಕೈಯಲ್ಲಿ ಭಾರತೀಯತೆ ಎಂಬುದು ಹೆಂಡ ಕುಡಿದ ಮಂಗನ ಕೈ ಸೇರಿದ ಮಾಣಿಕ್ಯ.

**.ಒಂದು ನಾಡಿನ ಜನರ ಭಾಷೆಯ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಯ ಸ್ಥಾನದಿಂದ ತಾವು ಬಯಸುವುದೇನು?**

ಮುಖ್ಯವಾಗಿ ಪ್ರಾದೇಶಿಕ ಅಸಮತೋಲನ ಹೋಗಲಾಡಿಸಿ. ಅದು ದೇಶದ ರಾಜಧಾನಿ ದೆಹಲಿ ಇರಬಹುದು. ಕರ್ನಾಟಕದ ರಾಜಧಾನಿ ಬೆಂಗಳೂರು ಇರಬಹುದು. ಅಭಿವೃದ್ಧಿ ಕಾರ್ಯಗಳೆಲ್ಲ ರಾಜಧಾನಿ ಸುತ್ತವೇ ಕೇಂದ್ರಿತವಾಗಿವೆ ಎಂಬ ಆರೋಪವನ್ನು ನಮ್ಮ ಆಡಳಿತಗಾರರು ನಿವಾರಿಸಿಕೊಳ್ಳಲಿ. ನಿರ್ಲಕ್ಷ್ಯ, ಬೇಜವಾಬ್ದಾರಿತನದ ನಮ್ಮ ಸರಕಾರದ ಶಿಕ್ಷಣ ವಲಯ ಹಾಗೂ ಶೈಕ್ಷಣಿಕ ವ್ಯಾಪಾರಿಗಳು ಮಾಡಿದ ಶಿಕ್ಷಣದ ವ್ಯಾಪಾರೀಕರಣವನ್ನು ಕೊನೆಗೊಳಿಸಬೇಕು. ಗ್ರಾಹಕ ಕೇಂದ್ರಿತ ವ್ಯವಸ್ಥೆಯೆಡೆಗೇ ಎಲ್ಲವನ್ನೂ ಎಳೆದುಕೊಳ್ಳುವ, ವಿಶೇಷವಾಗಿ ಎಳೆಯರನ್ನು ಕಲುಷಿತಗೊಳಿಸುವ ಟಿ.ವಿ. ಚಾನಲ್, ಚಲನಚಿತ್ರಗಳ ವಿರೋಧವಾಗಿ ಶಿಕ್ಷಣತಜ್ಞರು ಏನಾದರೂ ಮಾಡಬೇಕು. ಪ್ರಾಥಮಿಕ ಶಿಕ್ಷಣ ಮುಗಿಯುವವರೆಗೂ ಪ್ರತಿಯೊಂದನ್ನೂ ಅವರ ಮಾತೃಭಾಷೆಯ ಮೂಲಕವೇ ಕಲಿಸಬೇಕು. ಹೆಚ್ಚಿನ ಭಾಷೆಗಳನ್ನು ಪ್ರಾಥಮಿಕ ಹಂತದ ನಂತರವೇ ರೂಢಿಸಿಕೊಂಡು ಮಕ್ಕಳು ಕಲಿಯುವಂತಾಗಬೇಕು. ಭಾರವಾದ ಪಠ್ಯ, ಪಠ್ಯಕ್ರಮದ ಹೊರೆ ತಗ್ಗಬೇಕು. ಪುಸ್ತಕ, ಹಣ, ಕಂಪ್ಯೂಟರ್, ಪದವಿ ಇವೆಲ್ಲವುಗಳನ್ನು ಮೀರಿದ್ದು ಜೀವನ ಎಂಬುದನ್ನು ಮನಗಾಣಿಸುವಂತಾಗಬೇಕು. ಇನ್ನು ಕನ್ನಡದ ಬಗೆಗೆ, ಕನ್ನಡ ನಾಡು ಕಟ್ಟುವುದನ್ನೋದು ಬರೀ ರಾಜಕೀಯ, ಭೌಗೋಳಿಕ ಸೀಮಾರೇಖೆಯಲ್ಲ. ಅದು ಜೀವಂತ ಸೃಜಶೀಲ ಜನಪದ ಸೃಷ್ಟಿ. ಕನ್ನಡದ ಕೆಲಸಗಳನ್ನು 'ಆಡದೆಯೇ ಮಾಡಿ ರೂಢಿಯೊಳಗುತ್ತಮ' ಎನ್ನಿಸಿಕೊಳ್ಳುವ ಸರಕಾರ ಇವತ್ತಿಗೂ ಕನಸು. ಅದು ನನಸಾಗಬೇಕಾದರೆ, ಆಗಲೇ ಹೇಳಿದೆನಲ್ಲ, ಪ್ರಾದೇಶಿಕ ಅಸಮಾನತೆ ಅಂತ. ನೈಋತ್ಯ ರೈಲ್ವೆ ವಲಯ ಸ್ಥಾಪನೆಗೆ ಹುಬ್ಬಳ್ಳಿ ಯಾಕೆ ಕೈ ಬಿಡಲ್ಪಟ್ಟಿತು? ಇವತ್ತಿಗೂ ಉತ್ತರ ಕರ್ನಾಟಕದಲ್ಲಿ ಹೈಕೋರ್ಟ್ ಪೀಠ ಸ್ಥಾಪನೆ ಏಕಾಗುತ್ತಿಲ್ಲ? ಎಲ್ಲ ಅಕಾಡೆಮಿಗಳನ್ನು ಬೆಂಗಳೂರಿಗೆ ತುರುಕುವ ಬದಲು ಉಳಿದ ಕಡೆಗೇಕೆ ವಿಕೇಂದ್ರೀಕರಿಸಬಾರದು? ವೈದ್ಯಕೀಯ ವಿಶ್ವವಿದ್ಯಾಲಯಕ್ಕೆ ದಾವಣಗೆರೆ, ಬೆಳಗಾವಿ, ಏಕೆ ಅನರ್ಹವಾದವು? ನಾಡಿನ ಏಕತೆಗೆ, ಸಮಗ್ರತೆಗೆ ಮಾರಕವಾಗಬಲ್ಲ ಈ ಸಂಗತಿಗಳನ್ನು ಜವಾಬ್ದಾರಿ ಸ್ಥಾನದಲ್ಲಿದ್ದವರು ಮೊದಲು ಅರ್ಥ ಮಾಡಿಕೊಳ್ಳಲಿ. ಗಡಿ ಕನ್ನಡಿಗರ ರಕ್ಷಣೆ, ಸಾಂಸ್ಕೃತಿಕ ನೀತಿ, ಅವರಿಗೊಂದು ಅಭಿವೃದ್ಧಿ ಪ್ರಾಧಿಕಾರ, ಕನ್ನಡ ಭಾಷಾ ಬೋಧನೆಗೊಂದು ತರಬೇತಿ ಸಂಸ್ಥೆ.... ಪಟ್ಟಿ ಮುಗಿಯೋದೇ ಇಲ್ಲ. ಕೆ.ಪಿ.ಎಸ್.ಸಿ.ಯೊಳಗೆ ಕನ್ನಡ ಪೇಪರ್ ಏಕೆ ಕಡ್ಡಾಯ ಮಾಡಬಾರದು? ಆಯಾ

ಪ್ರದೇಶದ ಭಾಷೆ ಆ ನೆಲದ ಬದುಕಿನ, ಅಸ್ತಿತ್ವದ ಪ್ರಶ್ನೆಯಾಗಿರ್ತದೆ. ಅದ್ರಲ್ಲಿ ಯಾರ ಮೇಲೂ ದ್ವೇಷ ಸಾಧಿಸೋದು ಇಲ್ಲ. ಕನ್ನಡ ಆಡಳಿತ ಭಾಷೆ ಅಂದರೂ ಕಟ್ಟು ನಿಟ್ಟಾಗಿ ಪಾಲನೆ ಆಗ್ತಿಲ್ಲ.

ಎಲ್ಲಕ್ಕಿಂತ ಮುಖ್ಯವಾಗಿ, ಜಾಗತಿಕ ಪಿತೂರಿಯೊಂದು ಎಲ್ಲ ನೆಲದ ಮೂಲ ಸಂಸ್ಕೃತಿಗಳ ಮೇಲೆ ನಡೆಯುತ್ತಿದೆ. ಬೇರು ಇಲ್ಲದ ಸಂಸ್ಕೃತಿಯೊಂದನ್ನು ವಿಶ್ವಮಾನ್ಯ ಮಾಡಲಾಗುತ್ತಿದೆ. ಯಾರು ಮೂಲ ಸಂಸ್ಕೃತಿಯನ್ನು ಕತ್ತಲೆಗೆ ತಳ್ಳುತ್ತಾರೋ ಅವರೇ ಅವುಗಳನ್ನು ವಸ್ತು ಸಂಗ್ರಹಾಲಯಕ್ಕೆ ಸೇರಿಸಿ ಮಾನವ ಶಾಸ್ತ್ರ ಅಧ್ಯಯನಕ್ಕೆ ಅನುವು ಮಾಡಿಕೊಟ್ಟು ಮಹದುಪಕಾರ ಮಾಡಿದಂತೆ ನಟಿಸುತ್ತಿದ್ದಾರೆ. ಈ ಹುನ್ನಾರದ ಅನಾವರಣ ಈಗ ಆಗಬೇಕು.

**'ಲಂಕೇಶ್ ಪತ್ರಿಕೆ'**, ೨೫ ಡಿಸೆಂಬರ್ ೧೯೯೬

*

# 'ಚೆಂಬೆಳಕಿ'ನ ಕವಿ

● ಸಿದ್ಧಲಿಂಗ ಪಟ್ಟಣಶೆಟ್ಟಿ

ಹಾಸನದೊಳಗೆ ನಡೆಯುವ ೬೫ನೆಯ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಕಣವಿಯವರು ಆಯ್ಕೆಯಾಗಿದ್ದು ತಿಳಿದ ಕೂಡಲೇ ಅಭಿನಂದನೆ ಹೇಳಿದೆ. ಅದನ್ನ ಅವರು ಸ್ವೀಕರಿಸಿದ ರೀತಿ ನಿರ್ಲಿಪ್ತ ಪ್ರಶಾಂತಿಯಿಂದ ತುಂಬಿತ್ತು. ಬೆರಗಾದೆ.

'ಬರುವುದೇನುಂಟೊಮ್ಮೆ
ಬರುವ ಕಾಲಕೆ ಬಹುದು'

ಅಂತ

'ನನ್ನ ನಂಬಿಕೆಯೊಂದು ಆಕಾಶ
ನಿಜ, ಅದಕ್ಕೆ ತಳಬುಡವಿಲ್ಲ. ನಾನೆಷ್ಟು ಬೆಳೆದರೂ
ನನಗೆ ನಿಲುಕುವುದಿಲ್ಲ, ದೂರದಿಂದಲ್ಲದೆ ನಾನದನು
ಮುಟ್ಟಿ ಅನುಭವಿಸಿಲ್ಲ. ಮೇಲೆ ನೋಡದೆ ಸೆಟೆದಕೊಂಡೇ
ನಡೆದರೂ ಅದು ಸದಾ ತಲೆಯ ಮೇಲೆ'

ಅನ್ನುವ ನಂಬಿಕೆಯನ್ನು ಗೌರವದಿಂದ, ಶ್ರದ್ಧೆಯಿಂದ ಪೋಷಿಸಿಕೊಂಡು ಬಂದವರು ಕಣವಿ. ಬೇಂದ್ರೆಯವರ ನಂತರ ಸಾಹಿತ್ಯ ಪ್ರಪಂಚದೊಳಗೆ ಧಾರವಾಡದ, ಉತ್ತರ ಕರ್ನಾಟಕದ, ತನ್ಮೂಲಕ ಕನ್ನಡದ ಕೀರ್ತಿಕೇತುವನ್ನ ಎತ್ತರಕ್ಕೆ ಒಯ್ದವರು. ಸರಳತೆ, ಸೌಜನ್ಯ, ಸ್ನೇಹದ ನಡವಳಿಕೆಗೆ ಹೆಸರಾದವರು. ತಮ್ಮ ಕಣ್ಣರಿವಿನೊಳಗ ಮೂಡಿದ ತಿಳಿವಳಿಕೆಯ ನುಡಿಗಳಿಗೆ ಅರ್ಥದ ಜೀವ ತುಂಬಿದವರು.

ನಾ ಆರನ್ನೇತ್ತ ಕಲಿಯೂ ಮುಂದ ಮೊಟ್ಟಮೊದಲು ಕಣವಿಯವರ ಹೆಸರು ಕೇಳಿದ್ದೆ.

ಕಾಸಾರದ ಕೆಸರಿನಿಂದ
ಪಾಚಿಜೊಂಡು ನೀರಿನಿಂದ
ವಿಮಲ ಕಮಲ ಮೇಲಕೆದ್ದು

ಕೊಳದ ಎದೆಯನಮರಿ ಗೆದ್ದು
ದಲ ದಲ ದಲವರಳುವಂತೆ
ಥಳ ಥಳ ಥಳ ತೊಳಗುವಂತೆ
ಎತ್ತು ಮೇಲಕ್ಕೆನ್ನನು
ಜೀವಪಥದಿ ಪತಿತನು

ಅನ್ನುವ ಅವರ ಹಾಡು ಬಾಯಿಪಾಠ ಮಾಡಿ ಹಾಡಿದ್ದೆ. ಆ ಸಂದರ್ಭದೊಳಗ ಅವರನ್ನು ಮೊದಲು ಕಂಡಿದ್ದೆ. ಇಂಥ ಪ್ರಾರ್ಥನೆಯ ಧ್ವನಿಯಿಂದ ತನ್ನನ್ನ ಶುದ್ಧೀಕರಿಸಿಕೊಂಡು, ಸ್ವಚ್ಛತೆ, ಶುಭ್ರತೆ, ಮಾರ್ದವತೆಯ ಪ್ರಭೆಗೆ, ಹೊಳೆಯುವ ಬೆಳಕಿಗೆ ನಿರಂತರ ಹಂಬಲಿಸಿದ ಕವಿ ಅವರು.

ಮಾರ್ಚ್ ಏಪ್ರಿಲ್ ಮೇ ತಿಂಗಳದಾಗಿನ ಧಾರವಾಡದ ನಿಸರ್ಗ ಮತ್ತು ಜೀವಧ್ವನಿಯ ಸಾರಚಿತ್ರ ಕಣವಿ.

ಆ ಗಿಡಾ, ಈ ಗಿಡಾ
ಒಂದೊಂದೂ ಜೇಗೊಂಡಾ
ಬಾಂದೇವಿಗೆ
ನೆಲದಾಯಿಯ
ಹೂಗೊಂಡೆಯ ಹೊಂಗೊಡಾ

ಅಂತ ಅವರ 'ಕಾವ್ಯಾಕ್ಷಿ' ಆಗಲೂ ಹಾಡತಿದ್ದಳು. ಈಗಲೂ ಹಾಡ್ತಾಳ.

ಅಲ್ಲ ಸಲ್ಲದ ವಿಷಮ ವಿಪರೀತ ಭಾವನೆಯ
ವಿಷಗಾಳಿ ಎನ್ನ ಬಳಿ ಸುಳಿಯದಿರಲಿ,
ಸೊಲ್ಲು ಸೊಲ್ಲಿಗೆ ಪರರನಣಕಿಸುವ ಕೆಣಕಿಸುವ
ಅಶಿವ ನುಡಿ ಎನ್ನ ಕಿವಿ ಸೇರದಿರಲಿ

ಅಂತ ದಿಟ್ಟವಾಗಿ ನಿರ್ಧರಿಸಿ ಹಂಗ ನಡಕೊಂಡು ಸಾಧಿಸಿದ ಕಣವಿಯವರ ಸಾಹಿತ್ಯ ಸಾಧನೆ ಅವರ ಬದುಕಿನ ಪ್ರತಿರೂಪ. ನಮ್ಮಲ್ಲಿ ಬಾಳ ಮಂದಿ ಬದುಕಿದ್ದನ್ನ ಬರೆಯೂದಿಲ್ಲ. ಬರೆದಿದ್ದಂಗ ಬದುಕೂದಿಲ್ಲ. ಕಣವಿಯರದು ಮಾತ್ರ ಸಹಿತಾರ್ಥ ಬದುಕು-ಬರವಣಿಗೆಯ ಸಮನ್ವಯ. ಅವರ ಕಾವ್ಯಮಾರ್ಗಗಳ ವಿಶ್ಲೇಷಣೆಗೆ ವ್ಯಂಗ್ಯದಿಂದ ಬಳಸಿ ಆ ಪದವನ್ನ ಸಂಕುಚಿತಗೊಳಿಸಬಾರದು.

ಗರಗದ ಸಾಲ್ಯಾಗಿದ್ದಾಗ ಕಣವಿಯವರು ಯಾವದೋ ನಾಟಕದಾಗ ಪಾರ್ಟು ಮಾಡಿದ್ದರಂತ ಕೇಳಿದ್ದೆ. ಅದನ್ನ ನೆನಪಿಸಿ ಮುಂದ ಬ್ಯಾರೆ ಯಾವ ನಾಟಕದಾಗೂ ಪಾರ್ಟ್ ಮಾಡಲಿಲ್ಲೇನ್ರಿ? ಮತ್ತ ಸಾಹಿತಿ ಆದ ಮ್ಯಾಲ ನಾಟಕದ ಆ ಚುಂಗ

ಹಿಡಕೊಂಡು ನೀವ್ಯಾಕ ನಾಟಕಾ ಬರೀಲಿಲ್ಲ?'ಅಂದೆ.

"ಗರಗದ ಸಾಲ್ಯಾಗಿದ್ದಾಗ 'ಗಾಂಧಿ ಟೋಪಿ'ನಾಟಕದಾಗ ವಡಿ ಮಾರು ಸಾವಕ್ಕನ ಪಾತ್ರ ಮಾಡಿದ್ದೆ. ಅದಕ್ಕ ಬಹುಮಾನಾನೂ ಸಿಕ್ಕಿತು. ಮುಂದ ಸ್ವಲ್ಪ ದಿವಸ ನನ್ನ ಗೆಳ್ಯಾರು, ಊರಾಗಿನ ಕೆಲವು ಮಂದಿ ನನಗ ಅದ ಹೆಸರು ಹಿಡಿದು ಚ್ಯಾಷ್ಟಿ ಮಾಡತಿದ್ದರು. ಅದರಿಂದ ನನಗ ಬ್ಯಾಸರ ಬಂತು. ಮುಂದ ಆ ಗೊಡವಿಗೆ ಹೋಗಲಿಲ್ಲ.

ಧಾರವಾಡದ ರೇಡಿಯೊ ಸ್ಟೇಶನ್ ಸುರುವಾದ ಮ್ಯಾಲೆ ಆವಾಗ ನಾನು ಕಾಲೇಜ್ ಸೇರಿದ್ದೆ. ಮೂರು ವರ್ಷ ರೇಡಿಯೊ ನಾಟಕದೊಳಗ ತಪ್ಪದ ಭಾಗವಹಿಸಿದ್ದೆ. ಅಲ್ಲಿ ಎಚ್.ಕೆ. ರಂಗನಾಥ ಇದ್ದರು. ಅವರ ಒತ್ತಾಯಕ್ಕ ನಾಲ್ಕೈದು ರೇಡಿಯೊ ನಾಟಕ, ಒಂದೆರಡು ಗೀತರೂಪಕ ಬರೆದಿದ್ದೆ. ಕಾವ್ಯದ ಕಡೇನ ನನ್ನ ಮನಸ್ಸು ಪೂರಾ ಹೊರಳಿಬಿಟ್ಟಿತು. ಅದಕ್ಕ ಉಳಿದಿದ್ದಕ ಮನಸ್ಸು ಮಾಡಲಿಲ್ಲ."

ಆರಂಭದಲ್ಲಿ ನಿಮ್ಮ ಸಾಹಿತ್ಯಿಕ ವ್ಯಕ್ತಿತ್ವ ರೂಪಿಸುವಲ್ಲಿ ನಿಮ್ಮ ತಂದೆ, ತಾಯಿ, ಅಣ್ಣ ವಿರೂಪಾಕ್ಷಪ್ಪನವರ ಕೊಡುಗೆ ಏನು? ನಂತರ ಕವಿಯಾಗಿ ನಿಮ್ಮೊಳಗಿನ ಸಾಹಿತಿ ನಿಶ್ಚಿತ ನಿಲುವು ಹೊಂದಿ ಮುನ್ನಡೆದಿದ್ದು ಹೆಂಗ? ಅಂತ ಕೇಳಿದೆ. ಹಳೆಯ ದಿನಗಳನ್ನ ಜನಗಳನ್ನ ನೆನೆಸಿ ಕಣವಿಯವರ ಕಣ್ಣು ಮಿಂಚಿದುವು.

"ಶಾಲಾ ಶಿಕ್ಷಕರಾಗಿದ್ದ ತಂದೆಯವರಿಗೆ ಅನುಭಾವ ಪದ್ಯಗಳಲ್ಲಿ ಹೆಚ್ಚು ಆಸಕ್ತಿಯಿತ್ತು. ತಮ್ಮಷ್ಟಕ್ಕೇ ಅವರು ಅವನ್ನು ಹಾಡಿಕೊಳ್ಳುತ್ತಿದ್ದರು. ಅವರದು ಒಂದು ರೀತಿ ಶರಣ ಜೀವನ. ಆದರಿಂದ ನಾನು ಪ್ರಭಾವಿತನಾದೆ. ತಾಯಿ ಹೆಚ್ಚು ಕಲಿತವಳಲ್ಲವಾದರೂ ಸುಸಂಸ್ಕೃತಳು. ಮನೆಗೆಲಸಗಳಲ್ಲಿ ಬಹಳ ಅಚ್ಚುಕಟ್ಟು.

ಹಳ್ಳಿಯ ಮುಗ್ಧ ಜೀವನ, ಅಲ್ಲಿಯ ಪರಿಸರ, ಬೆವರುಹರಿಸಿ ದುಡಿಯುವ ಜನ. ಅವರ ಹಾಡುಗಳು-ಅದರಿಂದ ಹೃದಯ ಮನಸ್ಸು ಸಂಸ್ಕಾರಗೊಂಡವು. ಹಳ್ಳಿಯನ್ನು ಬಿಟ್ಟು ನಗರಕ್ಕೆ ಬಂದಾಗ ಅದರ ಸ್ಮೃತಿಯಿಂದ ನನ್ನೊಳಗಿನ ಕವಿ ಎಚ್ಚೆತ್ತ ಅನಿಸ್ತದ. ಮುಂದೆ ಧಾರವಾಡದ ಸಾಹಿತ್ಯಿಕ ವಾತಾವರಣ, ನನ್ನ ಅಭ್ಯಾಸ, ಸಮಾಜ ಮನೋಧರ್ಮದ ಗೆಳೆಯರ ಒಡನಾಟ ಇವೆಲ್ಲ ಆ ಕವಿಯನ್ನು ಮುನ್ನಡೆಸಿದವು."

**ಇವತ್ತಿಗೂ ನಮ್ಮಲ್ಲಿ ಛಂದ ಕಾವ್ಯವಾಚನ ಮಾಡವರಲ್ಲಿ ಕಣವಿ ಪ್ರಸಿದ್ಧರು. ಅದಕ್ಕ ಕೇಳಿದೆ: 'ಮೊದಲ ಬಾರಿಗೆ ಸಾರ್ವಜನಿಕವಾಗಿ ನೀವು ಕಾವ್ಯವಾಚನ ಮಾಡಿದ್ದು ಯಾವಾಗ? ಆಗಿನ ಅನುಭವ ಸ್ವಲ್ಪ ವಿವರಿಸ್ತೀರಾ?'**

೧೯೪೭ ಸ್ವಾತಂತ್ರ್ಯೋತ್ಸವದ ಸಂದರ್ಭ. ಆಗ ನಾನು ಇಂಟರ್ ಮೀಡಿಯೇಟ್ ನಲ್ಲಿದ್ದೆ. ಕರ್ನಾಟಕ ಕಾಲೇಜಿನ ವಿಶಾಲವಾದ ಮೈದಾನಿನಲ್ಲಿ ಸೇರಿದ ಬೃಹತ್

ಸಭೆಯಲ್ಲಿ 'ಬಂಧದಿಂ ಬಿಡುಗಡೆಗೆ' ಎಂಬ ಕವಿತೆ ಓದಿದೆ. ('ಕಾವ್ಯಾಕ್ಷಿ'ಯಲ್ಲಿ ಈ ಪದ್ಯ ಸೇರಿದೆ.) ಇಡಿಯ ಸಭೆಯೇ ರೋಮಾಂಚನಗೊಂಡಿತು. ನಾನೂ ಸಾಕಷ್ಟು ಆವೇಶ ಪೂರ್ಣವಾಗಿಯೇ ಓದಿದೆ. ಆ ಒಂದು ಅಪೂರ್ವ ಅನುಭವದಿಂದ ಕಾವ್ಯವಾಚನದ ಬಗ್ಗೆ ನನ್ನಲ್ಲೆ ಆತ್ಮವಿಶ್ವಾಸ ದೃಢಗೊಂಡಿತು. ಪ್ರಸಿದ್ಧ ಇಂಗ್ಲಿಷ್ ಕವಿಗಳಾದ ಪ್ರೊ. ಮೆನೆಜಿಸ್ ಅವರೂ 'ವಂದೇ ಮಾತರಂ' ಎಂಬ ತಮ್ಮ ಇಂಗ್ಲಿಷ್ ಕವನವನ್ನು ಇದೇ ಸಂದರ್ಭದಲ್ಲಿ ತುಂಬ ಭಾವಪೂರ್ಣವಾಗಿ ವಾಚಿಸಿದರು.

ಸಾಹಿತಿಗಳಿಗೆ ತಮ್ಮ ಮೊದಲ ಪ್ರಕಟಣೆ ಒಂದು ಅದ್ಭುತ ಮತ್ತು ವಿಚಿತ್ರ ನೆನಪಾಗಿ ಉಳಿದಿರತೈತಿ. ಅದನ್ನು ಕೆಲವರು ಹೇಳ್ತಾರ. ಕೆಲವರು ಹೇಳೂದುಲ್ಲ. "ಮೊಟ್ಟಮೊದಲು ಪ್ರಕಟವಾದ ನಿಮ್ಮ ಕವನ ಯಾವುದು? ಎಲ್ಲಿ ಪ್ರಕಟ ಆಗಿತ್ತು? ಆಗ ನಿಮಗೆ ಹೆಂಗನಿಸಿತ್ತು?" ಅಂದಾಗ ಕಣವಿಯವರು ಕೊಟ್ಟ ವಿವರ ಉತ್ತರದ ಒಂದು ಸಣ್ಣ ಭಾಗ ಇದು:

"ಸೃಷ್ಟಿಯ ಸೊಬಗು" ಅಂತ. ಹಾಯ್‌ಸ್ಕೂಲ್ ಮಿಸೆಲನಿಯಲ್ಲಿ ಪ್ರಕಟವಾಯಿತು. ಸಂತೋಷವೆನಿಸ್ತು. ಇನ್ನಷ್ಟು ಬರೆಯುಬೇಕೆನಿಸ್ತು. ನನ್ನ ಕವಿತೆಗಳನ್ನ ಮುಖ್ಯಾಧ್ಯಾಪಕರಾಗಿದ್ದ ವೀ.ರು. ಕೊಪ್ಪಳ ಅವರು ಬೇರೆ ವರ್ಗಗಳಲ್ಲಿ ಓದಿ ತೋರಿಸ್ತಿದ್ದರು ಅನ್ನುವುದು ಆಮೇಲೆ ಗೊತ್ತಾಗಿ ಸ್ವಲ್ಪ ಸಂಕೋಚವೂ ಆಯ್ತು. ಯಾಕೆಂದರೆ ನಾನು ಉಳಿದವರ ಕಣ್ಣಲ್ಲಿ ಒತ್ತುವಂತಿರಬಾರದು ಅಂತ ನನಗನ್ನಿಸ್ತಿತ್ತು."

ಕಣವಿ ಒಂದು ಕಿಮ್ಮತ್ತಿನ ಗಟ್ಟಿಮುಟ್ಟು ಸ್ಪಂಜ್ ಇದ್ದಾಂಗದಾರ. ಎಲ್ಲಾ ಹೀರಿಕೊಂಡರೂ ತಾನಾಗಿ ಉಳಿಯುವ ಕಲಾ, ಕಲೆಗಾರಿಕೆ ಎರಡೂ ಅವರಿಗೆ ಗೊತ್ತು.

'ಧಾರವಾಡದೊಳಗೆ ಬೇಂದ್ರೆ, ಮೆನೆಜಿಸ್, ಗೋಕಾಕ್, ಮಾಳವಾಡ, ಕಟ್ಟೀಮನಿ, ಹಿರೇಮಲ್ಲೂರ ಮುಂತಾದ ಗಣ್ಯರ ಸಂಬಂಧ ಬಂದ್ಹಾಂಗ ಹೊರಗ ಕುವೆಂಪು, ಅಡಿಗ, ಪುತಿನ, ಕೆಎಸ್‌ನ ಮುಂತಾದವರ ಸಂಬಂಧ ಬಂದಾಗಲೂ ಅವರ ಪ್ರಭಾವಗಳಿಂದ ನಿಮ್ಮನ್ನ ರಕ್ಷಿಸಿಕೊಳ್ಳಲಿಕ್ಕೆ ಹೆಂಗ ಪ್ರಯತ್ನ ಮಾಡಿದಿರಿ?' ಎಂದಾಗ ಅವರು ಕೊಟ್ಟ ಉತ್ತರ ಅವರ ವ್ಯಕ್ತಿತ್ವವನ್ನೇ ದ್ಯೋತಿಸುವಂಥಾದ್ದು:

"ಪ್ರಭಾವಗಳಿಂದ ರಕ್ಷಿಸಿಕೊಳ್ಳೋದು' ಅಂದರ ಅವರ ಕೃತಿಗಳನ್ನ ಅರಗಿಸಿಕೊಳ್ಳೋದು. ನಮ್ಮತನವನ್ನು ಉಳಿಸಿಗೊಂಡು ನಮ್ಮ ಬರವಣಿಗೆಗೆ ಹೊಸ ಆಯಾಮ ತಂದುಕೊಳ್ಳೋದು. ಈ ಒಬ್ಬೊಬ್ಬರನ್ನೂ ನಾನು ಒಂದು ರೀತಿ ಮೆಚ್ಚಿಕೊಂಡವನು, ಕವಿಗಳಾಗಿ ಹೇಗೋ ಹಾಗೇ ವ್ಯಕ್ತಿಗಳಾಗಿಯೂ ಅವರ ಬಗ್ಗೆ ಗೌರವ ತಾಳಿದವನು. ನನ್ನದು ಗುಣ ಸ್ವೀಕಾರ ದೃಷ್ಟಿ."

ನಂತರ ಕೇಳಿದ ಪ್ರಶ್ನೆಗಳಿಗೆ ಅವರು ಸಮಾಧಾನದಿಂದ ಅವರು ಉತ್ತರಿಸಿದರು.

*** ನೀವು ವಿದ್ಯಾರ್ಥಿಯಾಗಿದ್ದಾಗಿನ ಧಾರವಾಡದ ಸಾಹಿತ್ಯಿಕ ವಾತಾವರಣಕ್ಕೂ ಈಗಿನ ವಾತಾವರಣ್ಕಕೂ ಏನ ಫರಕಯ್ತಿ?**

ಆಗ ಸಾಹಿತ್ಯಿಕ ವಾತಾವರಣ ಉತ್ಸಾಹದಿಂದ ಕೂಡಿತ್ತು. ಪ್ರೋತ್ಸಾಹದಾಯಕ ವಾಗಿತ್ತು. ಹಿರಿಯರ ಬಗ್ಗೆ ಕಿರಿಯರಲ್ಲಿ ಗೌರವ. ಕಿರಿಯರ ಬೆಳವಣಿಗೆಯ ಬಗ್ಗೆ ಹಿರಿಯರಿಗೆ ಅಭಿಮಾನ ಇರ್‍ತಿತ್ತು. ಈಗ ಪಂಥಾಭಿಮಾನ, ಸ್ವಪ್ರತಿಷ್ಠೆ ಮತ್ತು ಮಾತ್ಸರ್ಯಗಳಿಂದ ವಾತಾವರಣ ಅಷ್ಟು ಹಿತಕರವಾಗಿಲ್ಲ ಅನಿಸ್ತದೆ." ಅಂತ ಹೇಳಿದ ಮ್ಯಾಲ ಹರಟೆಯೊಳಗೆ ಕಣವಿಯವರು ಇವತ್ತಿನ ಧಾರವಾಡದ ಸಾಹಿತ್ಯಕ ಶಾಂತಿಯನ್ನ ಕಲಕಿದ ಅನೇಕ ವ್ಯಕ್ತಿಗಳ ಬಗ್ಗೆ, ಪ್ರಸಂಗಗಳ ಬಗ್ಗೆ ನೊಂದು ಸೂಚ್ಯವಾಗಿ ಹೇಳಿದ್ದನ್ನು ಮರೆಯೂದ ಲೇಸು.

*** ಧಾರವಾಡದಾಗ ಮೊದಲಿನಿಂದಲೂ ದುಮುಡೀ ಹಾಕಿದ ಬ್ರಾಹ್ಮಣ-ಬ್ರಾಹ್ಮಣೇತರ ಭಾವನಾದ ಹಾವಳಿ ನಿಮ್ಮನ್ನ ಕಾಡಲಿಲ್ಲೇನ್ರಿ?**

"ಅಷ್ಟರಮಟ್ಟಿಗೆ ಕಾಡಿಲ್ಲ" ಅಂದರು.

'ಅಂದರ ಸ್ವಲ್ಪರಮಟ್ಟಿಗೆ ಕಾಡಿತ್ತು ಅಂದಂಗಾತು' ಅಂದಾಗ ಕಣವಿ ಹಾರಕೀ ನಗಿ ನಕ್ಕುಬಿಟ್ಟರು.

**'ನಿಮ್ಮ ಬದುಕಿನೊಳಗೆ ಗೆಳೆಯರು ಬಂದಂಗ ಗೆಳತಿಯರು ಬರಲಿಲ್ಲವೆ? ಪ್ರಣಯ ಪ್ರಸಂಗಗಳು ಘಟಿಸಲಿಲ್ಲವೇನು?'** ಸ್ವಲ್ಪ ನೇರವಾಗಿ, ಸೂಕ್ಷ್ಮವಾಗಿ ಕೆದಕೇ ಕೇಳಿದ್ದೆ.

"ನನ್ನದು ಸಂಕೋಚದ ಸ್ವಭಾವಃ ಈಗಲೂ" ಅಂತ ಅವರು ಕೊಟ್ಟ ಉತ್ತರ ಸರಿಯಾದ ಉತ್ತರ. ಬರೇ ಉತ್ತರ ಅಲ್ಲನ್ನೂದು ಯಾರಿಗಾದ್ರೂ ತಿಳೀತೈತಿ.

**ಒಂದು ನಿಶ್ಚಿತ ಕಥಾನಕ ಇರದಿದ್ದರೂ 'ಭಾವಜೀವಿ'ಯಂಥ ಖಂಡ ಕಾವ್ಯವನ್ನು ಆ ಕಾಲಕ್ಕೇ ಬರೆದಿದ್ದೀರಿ. ನಂತರ ಇಂಥಾ ಪ್ರಯತ್ನ ಯಾಕ ಮಾಡಲಿಲ್ಲ?**

"ಈಗ ಆ ಬಗ್ಗೆ ಹೊಳಹು ಹಾಕ್ತಾ ಇದ್ದೇನೆ; ನೋಡಬೇಕು."

**'ಗೆಳೆಯರ ಬಳಗ ಒಡೆದುಹೋಗಿತ್ತು. ನೀವು ಅಂಥ ಒಂದು ಬಳಗ ಕಟ್ಟಿ ಅದರ ಕೇಂದ್ರ ಆಗಬಹುದಿತ್ತು.'** ಭಾಳ ದಿವಸದಿಂದ ನನ್ನ ಮನಸ್ಸಿನ್ಯಾಗ ಕಟೀತಿದ್ದಂಥ ಒಂದು ಪ್ರಶ್ನೆ ಇದು.

ವಿದ್ಯಾರ್ಥಿ ಜೀವನದಲ್ಲಿ 'ಕಾವ್ಯಾನುಭವ ಮಂಟಪ' ಇತ್ತು. ಆದರೆ ಮುಂದೆ ಉದ್ಯೋಗಕ್ಕ ತೊಡಗಿದಾಗ 'ಪ್ರಸಾರಾಂಗ'ವೇ ಒಂದು ದೊಡ್ಡ ಗೆಳೆಯರ ಬಳಗವಾಯಿತು. ಅಲ್ಲದೆ, ವಿದ್ಯಾವರ್ಧಕ ಸಂಘದ ಮೂಲಕ ಅಂಥ ಸಾಹಿತ್ಯಿಕ

ಚಟುವಟಿಕೆಗಳು ನಡೆದೇ ನಡೆಯುತ್ತಿದ್ದವು. ಹೀಗಾಗಿ ಪ್ರತ್ಯೇಕ ಬಳಗ ಕಟ್ಟುವ ಅವಶ್ಯಕತೆ ಕಾಣಲಿಲ್ಲ. ಅದೂ ಅಲ್ಲದೆ 'ಕೇಂದ್ರ'ದಲ್ಲಿ ಕಾಣಿಸಿಕೊಳ್ಳುವುದು ನನಗೆ ಯಾವಾಗಲೂ ಇಷ್ಟವಿಲ್ಲದ ಸಂಗತಿ.

*** ಪ್ರಸಾರಾಂಗ ನಿಮ್ಮನ್ನ ಬಳಸಿಕೊಂಡಿತು. ಆದರೆ ನಿಮ್ಮ ಪ್ರತಿಭೆಯ ವಿಕಾಸಕ್ಕ ಸಹಕಾರಿಯಾಗಲಿಲ್ಲ್ವಾಂತ ಅನಸತೈತಿ....**

ಹಾಗೇನಿಲ್ಲ, ಪ್ರಸಾರಾಂಗ ಕಟ್ಟಿ ಬೆಳಸೂ ಕೆಲಸದೊಳಗ ನಾನು ನನ್ನನ್ನ ಸಂಪೂರ್ಣ ತೊಡಗಿಸಿಕೊಂಡಿದ್ದರಿಂದ ಅದು ದೊಡ್ಡದಾಗೇ ಬೆಳೀತು. ಕುಲಪತಿಗಳು, ಅಧ್ಯಾಪಕ ವರ್ಗ, ಸಾರ್ವಜನಿಕರು ಎಲ್ಲರೂ ಅದನ್ನ ಮೆಚ್ಚಿಕೊಂಡಿದ್ದರಿಂದ ಮನಸ್ಸಿಗೆ ತೃಪ್ತಿಯಿತ್ತು. ಅದರ ಆರೋಗ್ಯ ಅಷ್ಟು ಚೆನ್ನಾಗಿ ಉಳೀಲಿಲ್ಲ ಅನ್ನೋದೇ ಒಂದು ಅಸಮಾಧಾನ ಅಷ್ಟೆ.

**ಗೋಕಾಕ ಚಳವಳಿಯೊಳಗೆ ಒಮ್ಮಿಗಿಲೆ ಮೈಛಳಿ ಬಿಟ್ಟು ಹೊರಗ ಬಂದಿರಿ? ಆಗಿನ ನಿಮ್ಮ ಸಂಗಾತಿಗಳ ಬಗ್ಗೆ ನಿಮ್ಮ ಅನುಭವಗಳೇನು?**

ಗೋಕಾಕ ಚಳವಳಿಯೊಳಗೆ ನಾನು 'ಒಮ್ಮೆಲೆ ಮೈ ಛಳಿ ಬಿಟ್ಟು ಹೊರಗ ಬಂದದ್ದು' ಆಕಸ್ಮಿಕ ಏನೂ ಅಲ್ಲ. ಯಾಕಂದರ ನಾನು ಕಾಲೇಜ ವಿದ್ಯಾರ್ಥಿಯಾಗಿದ್ದಾಗಲೇ ಕರ್ನಾಟಕ ಏಕೀಕರಣದ ಹೋರಾಟಕ್ಕೆ ಧಾರವಾಡ ಕೇಂದ್ರವಾಗಿತ್ತು. ಜೊತೆಗೆ, ವಿಶ್ವವಿದ್ಯಾಲಯ, ಆಕಾಶವಾಣಿ ಕೇಂದ್ರಗಳ ಬಗ್ಗೆ ಬಲವಾದ ಬೇಡಿಕೆ ಇತ್ತು. ನಾನು ಸಾಮಾನ್ಯವಾಗಿ ಏಕೀಕರಣದ ಸಭೆಗಳಿಗೆ ತಪ್ಪದೆ ಹೋಗ್ತಿದ್ದೆ. ಅದರಗುಂಚಿ ಶಂಕರಗೌಡರು ಆಮರಣ ಉಪವಾಸ ಕೈಗೊಂಡ ಸಂದರ್ಭದಲ್ಲಿ ಹುಬ್ಬಳ್ಳಿಯಲ್ಲಿ ಕೆಪಿಸಿಸಿ ಸಭೆ ನಡೆದಾಗ ಹಳ್ಳಿಗಳಿಂದ ಸಾವಿರಾರು ಜನ ಚಕ್ಕಡಿಗಳಲ್ಲಿ ಬಂದು ನೆರೆದಿದ್ದರು. ಗೋಲಿಬಾರ್ ಆಯಿತು. ಅದನ್ನೆಲ್ಲ ನಾನು ಪ್ರತ್ಯಕ್ಷ ಕಂಡಿದ್ದೆ. ಹೀಗೆ ನಾಡು-ನುಡಿಯ ಬಗೆಗಿನ ಪ್ರೇಮ ಹೋರಾಟದ ಲವಲವಿಕೆ ನನ್ನಲ್ಲಿ ಮೊದಲಿನಿಂದಲೂ ಬೆಳೆದು ಬಂದದ್ದು. ಆದ್ದರಿಂದ ಗೋಕಾಕ ಚಳವಳಿಯೊಳಗೆ ನಾನು ಭಾಗವಹಿಸಿದ್ದು ಅತ್ಯಂತ ಸ್ವಾಭಾವಿಕವಾದದ್ದು.

ಆ ಅವಧಿಯಲ್ಲಿ ನನ್ನ ಸಂಗಾತಿಗಳೆಲ್ಲ ಒಗ್ಗಟ್ಟಿನಿಂದ ಒಮ್ಮನಸ್ಸಿನಿಂದ, ಧುರೀಣರಲ್ಲಿ ವಿಶ್ವಾಸವಿಟ್ಟುಕೊಂಡೇ ಕೆಲಸ ಮಾಡಿದರು. ಏಕೀಕರಣದ ನಂತರ ಸಮಗ್ರ ನಾಡನ್ನು ಆವರಿಸಿದ ಅದೊಂದು ಅಭೂತಪೂರ್ವವಾದ ಜನಪರ ಚಳವಳಿ ಎನ್ನುವುದರಲ್ಲಿ ಸಂದೇಹವಿಲ್ಲ. ಕೊನೆ ಕೊನೆಯಲ್ಲಿ ವೈಯಕ್ತಿಕ ದೋಷಾರೋಪಣೆಯಿಂದ ಕಾರ್ಯಕರ್ತರಲ್ಲಿ ಸ್ವಲ್ಪ ವೈಮನಸ್ಸು ತಲೆದೋರಿದ್ದೂ ನಿಜ. ಇದರಿಂದ ನನಗೂ

ಬೇಸರವಾಯಿತು. ನನಗೂ ಅದೊಂದು ಹೊಸ ಅನುಭವವೇ, ಪರಸ್ಪರ ತಿಳಿವಳಿಕೆಯ ಕೊರತೆಯಿಂದ ಹೀಗಾಯಿತೇ ಅಥವಾ ವೈಯಕ್ತಿಕ ಆಶೆ-ಆಕಾಂಕ್ಷೆಗಳು ಕಾರಣವಾದವೊ, ಇಲ್ಲವೆ ಮನುಷ್ಯ ಸಹಜವಾದ ದೌರ್ಬಲ್ಯಗಳು ಮುಂದಾದವೊ ತಿಳಿಯದು. ಅದೇನೇ ಇದ್ದರೂ ಎಲ್ಲರನ್ನೂ ಕಟ್ಟಿಕೊಂಡು ಕನ್ನಡಕ್ಕೆ ಸಾರ್ವಭೌಮತ್ವವನ್ನೂ ಸರ್ವಮಾನ್ಯತೆಯನ್ನೂ ತಂದುಕೊಡುವ ಪ್ರಯತ್ನದಲ್ಲಿ ತಮ್ಮ ಎಲ್ಲ ಶಕ್ತಿಯನ್ನೂ ಪಣಕ್ಕೆ ಹಚ್ಚಿ ಹೋರಾಡಿದ ಮುಖಂಡರ ಕೆಚ್ಚನ್ನು ನೆನೆಯಲೇಬೇಕು."

ಈ ವಿಷಯದೊಳಗೂ ಅಖಿಲ ಕರ್ನಾಟಕ ಕೇಂದ್ರ ಕ್ರಿಯಾಸಮಿತಿಯ ಜೊತೆಗಿನ ಕಣವಿಯವರ ಸಂಬಂಧಗಳು ನಂತರ ಹದಗೆಟ್ಟಿದ್ದವು. ಶಕ್ತಿಕೇಂದ್ರದ ಜೊತೆಗೆ ಅವರ ಸಹಯೋಗವನ್ನು ಕಟುವಾಗಿ ಕಂಡಿದ್ದರಿಂದ ಕಣವಿ ಬಹಳ ನೊಂದಿದ್ದರು. ಆದರೆ ಇಲ್ಲಿನೂ ಅವರು 'ಈಗ್ಯಾಕ ಅದನ್ನೆಲ್ಲಾ ನೆನಸೂದ ಬಿಡ್ರಿ' ಅಂದುಬಿಟ್ಟರು.

**'ರಮ್ಯ, ನವ್ಯ ಮತ್ತು ನಂತರದ ಎಲ್ಲ ಕಾವ್ಯಮಾರ್ಗಗಳ ಜೊತೆಗೆ ಹೆಜ್ಜೇ ಹಾಕಿದವರು ನೀವು. ನನ್ನ ದೃಷ್ಟಿಯೊಳಗೆ ಒಬ್ಬ ಕವಿ ಬರೇ ಶುದ್ಧ ಕವಿಯಾಗಿರಬೇಕು. ಕವಿಗೆ ಕವಿ ಅನ್ನೂದಲ್ಲಿ ಬ್ರ್ಯಾಂಡ್ ಆಗಿರಬೇಕು. ನೀವೂ ಅಲ್ಲಿ ವಿಚಾರದವರಂತ ನಾ ತಿಳಿದೇನಿ. ಆದರೂ ಕೆಲವರು ನಿಮ್ಮನ್ನ 'ಸಮನ್ವಯ ಕವಿ' ಅಂತ ಕರೆದು ಬೇಕಂತಲೇ ನಿಮ್ಮ ಕಾವ್ಯಾಭಿಮಾನಿಗಳನ್ನ ಕಾವ್ಯಾಭ್ಯಾಸಿಗಳನ್ನ ದಾರಿ ತಪ್ಪಸಾಕ ಪ್ರಯತ್ನ ಮಾಡ್ಯಾರಂತ ನಿಮಗ ಅನಿಸೂದಿಲ್ಲವೇ?'**

ಸರಿ. ನಾನೂ ನಿಮ್ಮ ವಿಚಾರದವನೆ. ಸಮನ್ವಯ ಭಾವ ಇಲ್ಲದವ ಕವಿ ಹೇಗೆ ಆಗ್ತಾನ? ನಿಜವಾದ ವಿಮರ್ಶಕರು ಈ ಮಾತನ್ನ ಬಳಸಿಲ್ಲ. ಆದರೆ ಅರ್ಧಮರ್ಧ ತಿಳಿವಳಿಕೆಯುಳ್ಳವರು ಅದೂ ಒಂದು ಬಿರುದು ಅಂತ ಭಾವಿಸಿರಬೇಕು.

**ನಿಮ್ಮ ಬದುಕಿನ್ಯಾಗ ಗೊಂದಲ, ದುಃಖ, ನಿರಾಶೆ, ಅಸಮಾಧಾನಗಳು ಇಲ್ಲವೆ? ಇದ್ದರ ಅವುನ್ನ ಹೆಂಗ ಗೆದ್ದಿರಿ?**

ಎಲ್ಲರ ಬದುಕಿನಲ್ಲಿಯೂ ಗೊಂದಲ, ದುಃಖ ಒಂದೊಂದು ಹಂತದಲ್ಲಿ ಇದ್ದುದವೇ. ಪ್ರಮಾಣ ಹೆಚ್ಚೂ ಕಡಿಮೆ ಇರಬಹುದು. ಆದರೆ ತಾಳ್ಮೆಯನ್ನ ಕಳೆದುಕೊಳ್ಳಬಾರದು. ಹಿತ-ಮಿತ ಅಂತಾರಲ್ಲ ಅದನ್ನು ಸಾಧಿಸುವದರ ಕಡೆಗೇ ಯಾವಾಗಲೂ ನನ್ನ ಗಮನ.

**ನಮ್ಮ ಕಾವ್ಯ ಪರಂಪರೆಯ ಜ್ಞಾನ, ಜೀವನಾನುಭವ, ಭಾಷಾಭ್ಯಾಸ ಇಲ್ಲದ ಎಷ್ಟೋ ಮಂದಿ ಇವತ್ತು ಕವಿಗಳಾಗಿ ಅಲ್ಲ. ಕವಿಗಳಂತ ಹೇಳಿಕೊಂಡು**

**ಮೆರ್‍ಯಾಕ್ಷತ್ತ್ಯಾರಂತ ನಿಮಗನಸೂದಿಲ್ಲಾ? ಇಂಥವರಿಂದ ಕಾವ್ಯ ಉಳೀಬೇಕೆಂದರ ಏನ ಮಾಡಬೇಕು? ಅಂಥವರಿಗೆ ಹೆಂಗ ಬುದ್ಧೀ ಹೇಳಬೇಕು?**

ಹೌದು, ನಿಮಗಿಂತಲೂ ನನಗ ಹೆಚ್ಚು ಅನಿಸೇದ. ಅಂಥವರನ್ನ ಪೂರಾ ನಿರ್ಲಕ್ಷಿಸಿ ಬಿಡೋದು ಒಳ್ಳೇದು. ನಾ ಕವಿತಾ ಬರದಃ ಸಾಯ್ತೀನಿ ಅನ್ನೋವರಿಗೆ ಯಾವ ಔಷಧಾನೂ ನಾಟೂದಿಲ್ಲ.

***ವಿಜ್ಞಾನದ ತೀವ್ರ ವಿಕಾಸ, ರಾಜಕೀಯದ ವಿಚಿತ್ರ ತಾಕಲಾಟಗಳ ನಡುವೆ ಸಿಲುಕಿದ ಇಂದಿನ ಸಮಾಜದೊಳಗ ಕಾವ್ಯಕ್ಕ ಭವಿಷ್ಯ ಇದೆಯೆ?'**

ಕಾವ್ಯಕ್ಕ ಭವಿಷ್ಯ ಅದ. ಯಾವ ಕಾಲಕ್ಕೂ ಅಲ್ಪ ಪ್ರಮಾಣದಲ್ಲಾದರೂ ಅದಕ್ಕ ಓದುಗರು ಸಿಗ್ತಾರ. ಹೃದಯ, ಅಂತಃಕರಣ ಇದ್ದಲ್ಲೆಲ್ಲ. ಅದರಲ್ಲೂ ನಮ್ಮದು ಕಾವ್ಯಸಂಸ್ಕೃತಿ ಅಲ್ಲವೆ?

**ನಿಮ್ಮ ಮ್ಯಾಲ ಪ್ರಭಾವ ಬೀರಿದ ಸಾಹಿತಿಗಳು?**

ಎಷ್ಟಂತ ಹೇಳಬೇಕು? ಹಿಂದಿನವರಲ್ಲಿ ಪಂಪ, ಬಸವಣ್ಣ, ಹರಿಹರ, ಕುಮಾರವ್ಯಾಸ, ಸರ್ವಜ್ಞ, ಅನುಭಾವಿ ಕವಿಗಳು; ಆಮೇಲೆ ಟಾಗೋರ್, ಬೇಂದ್ರೆ, ಮಧುರಚೆನ್ನ, ಕುವೆಂಪು, ಮಾಸ್ತಿ, ಕಟ್ಟೀಮನಿ ಮೊದಲಾದವರು. ಸಮಕಾಲೀನ ಕವಿಮಿತ್ರರು. ಇಂಗ್ಲಿಷಿನ ವರ್ಡ್ಸ್‌ವರ್ಥ್, ಶೆಲ್ಲಿ, ಕೀಟ್ ಹಾಗೂ ಕೆಲವು ಆಧುನಿಕ ಕವಿಗಳು. ಇದರ ಜೊತೆಗೆ ನಮ್ಮ ಜನಪದ ಕಾವ್ಯ.

**'ವ್ಯಂಗ್ಯ ಹಾಗೂ ರಾಜಕೀಯ ಪದ್ಯಗಳಿಗೆ ನೀವು ಒಲವು ತೋರಿದ್ದು ಕಡಿಮೆ ಅಲ್ಲವೆ?'**

ರಾಜಕೀಯ ಪದ್ಯ ಕಡಿಮೆ ಇರಬಹುದು. ಆದರೆ ನವುರಾದ ವ್ಯಂಗ್ಯ ವಿಡಂಬನೆ ಬಗ್ಗೆ ಮೊದಲಿನಿಂದಲೂ ಒಲವಿದೆ.

**ನಿಮ್ಮ ಬರವಣಿಗೆಯ ರೀತಿ ಹೆಂಗ? ಅಂದರ ಸ್ಫೂರ್ತಿ ಬಂದೊಡನೆ ಬರೆದು ಹಾಕ್ತಿರೋ ಅಥವಾ ಕಾದು ಏಕಾಂತದೊಳಗೆ ಬರೀತೀರೋ? ಬರದ ಮ್ಯಾಲ ತಿದ್ದಿಕೋತೀರೇನು?**

ಸ್ಫೂರ್ತಿ ಬಂದೊಡನೆ ಬರೆಯುವುದಿಲ್ಲ. ಅದನ್ನು ಉಳಿಸಿಕೊಂಡು ನಿಧಾನವಾಗಿ ಬರೀತೀನಿ. ಏಕಾಂತ ಬೇಕು. ಬರದ ಮ್ಯಾಲ ತಿದ್ದಿಕೊಳ್ಳತೀನಿ. ಒಂದೊಂದು ಸಲ ಅಚ್ಚಾದ ಮೇಲೂ ತಿದ್ದೀನಿ.

**ನಿಮ್ಮ ಪುಸ್ತಕಗಳಿಗೆ ಬಹುಮಾನ ಬಂದಾಗ ಏನನಿಸಿತ್ತು?**

ಅದರಿಂದ ನಾನು ಹಿಗ್ಗೋದಿಲ್ಲ. ಯಾಕಂದರ ನನ್ನ ಕಾವ್ಯದ ಮೊದಲ ವಿಮರ್ಶಕ ನಾನ ಆಗಿರತೇನಿ.

**ಸಮ್ಮೇಳನದ ಅಧ್ಯಕ್ಷರಂತ ನಿಮ್ಮ ಆಯ್ಕೆ ಆಗಿದ್ದು ತಿಳಿದಾಗ ಏನನಿಸ್ತು?**

ಆಶ್ಚರ್ಯ ಆಯ್ತು. ಜನದ ಪ್ರೀತಿ ನೆನೆಸಿ ಮನಸ್ಸು ಆರ್ದ್ರ ಆಯ್ತು. ಹಾಗೇ ನನಗಿಂತ ಹಿರಿಯರಾದವರಿಗೆಲ್ಲ ಮನಸ್ಸಿನಲ್ಲಿಯೇ ಗೌರವ ಸಲ್ಲಿಸಿದೆ.

**ಸಾಹಿತ್ಯ ಸಮ್ಮೇಳನಗಳು ಒಂದ ನಮೂನಿ ಜಾತ್ರಿ ನಡದಂಗ ನಡೀತಾವು. ಅವುಗಳ ಸ್ವರೂಪ ಹೆಂಗಿರಬೇಕಂತ ನಿಮಗನಿಸತೈತಿ?**

ಆ ಕಾಲಕ್ಕೆ ಕನ್ನಡ ಸಾಹಿತ್ಯದ ಬಗ್ಗೆ ಪ್ರೀತಿ ಹುಟ್ಟಿಸೋದರ ಜೊತೆಗೆ ಕನ್ನಡ ನಾಡು, ನುಡಿ ಬಗ್ಗೆ ಅಭಿಮಾನ ಬೆಳೆಸೋದು ಈ ಸಮ್ಮೇಳನಗಳ ಉದ್ದೇಶ ಆಗಿತ್ತು. ಅದಕ್ಕ ಕನ್ನಡ ತಾಯಿಯ ತೇರು, ಉತ್ಸವ ಅನ್ನೂ ಕಲ್ಪನಾದಿಂದ ಜನಸಾಮಾನ್ಯರನ್ನ, ಸಾಹಿತ್ಯ ಭಕ್ತರನ್ನ ಅದು ಒಂದು ಕಡೆ ಸಂಭ್ರಮದಿಂದ ಕೂಡು ಹಾಂಗ ಮಾಡಿತು. ಅದೊಂದು ಸಂಪ್ರದಾಯನ ಆಗಿ ಬಿಟ್ಟಿತು ಅನ್ನಿರಿ. ಈಚೆಗೆ ಅದರ ಸ್ವರೂಪ ಸ್ವಲ್ಪಮಟ್ಟಿಗೆ ಬದಲಾಗೇದ. ಸಾಮಾನ್ಯ ಸಾಹಿತ್ಯ ಪ್ರೇಮಿಗಳ ಸಲುವಾಗಿ ಕೆಲವು ಕಾರ್ಯಕ್ರಮ ಇರ್ತಾವು. ಇದ್ದುದರಲ್ಲೆ ಗಂಭೀರವಾಗಿ ಚರ್ಚೆ ಮಾಡುವಂಥ ಗೋಷ್ಠಿಗಳೂ ನಡಿತಾವು. ಬ್ಯಾಸರಾದಾಗ ಪುಸ್ತಕ ಮಳಿಗೆಗಳ ಹತ್ತರ ಜನ ಸುಳದಾಡಿ ಕೈತುಂಬ ಪುಸ್ತಕ ಕೊಂಡುಕೊಳ್ಳತಾರ. ಸುಗಮ ಸಂಗೀತವನ್ನ ಮಂತ್ರಮುಗ್ಧರಾಗಿ ಕೇಳ್ತಾರ. ವಿಶೇಷೋಪನ್ಯಾಸಗಳನ್ನ ಲಕ್ಷ್ಯಗೊಟ್ಟ ಕೇಳ್ತಾರ. 'ಜಾತ್ರೆ ನಡದಾಂಗ'ಅನ್ನು ನಿಮ್ಮ ಮಾತನ್ನ ನಾನು ಒಳ್ಳೇ ಅರ್ಥದೊಳಗ ತಗೋತೀನಿ, ಸಮುದಾಯ ಪ್ರಜ್ಞೆಯ ಪ್ರತೀಕ ಅನ್ನೂ ರೀತಿಯೊಳಗ. ಸಮ್ಮೇಳನದ ಹೊರತಾಗಿ ಉಳಿದ ಸಂದರ್ಭದೊಳಗೆ ಪರಿಷತ್ತು ನಡೆಸುವ ಕಾರ್ಯಕ್ರಮಗಳ ಸ್ವರೂಪ ಇದಕ್ಕಿಂತ ಬ್ಯಾರೇನ ಆಗಿರ್ತದಲ್ಲ.

* * *

ಮುಂಜಾವದಲಿ
ಹಸಿರು ಹುಲ್ಲು ಮಕಮಲ್ಲಿನಲಿ
ಪಾರಿಜಾತವು ಹೂವ ಸುರಿದಂತೆ

ಕಣವಿಯವರ 'ಮಾತು'.

ಹೃದಯದಲ್ಲಿ ಝುಗಝುಗಿಸಿ
ಕಿಲ್ಮಿಷವ ಸುಟ್ಟುರಿಸಿ

ಬದುಕ ಸಿಂಗರಿಸಿ
ಬಾ ನಿಜದ ಬೆಳಕೆ;
ಮನ್ಮನೋಮಂದಿರಕೆ
ಓ ಪರಾತ್ಪರ ಬೆಳಕ
ತುಂಬಿ ಬಾ ಸಚ್ಚಿದಾನಂದ ಬೆಳಕೆ!

ಅನ್ನುವುದು ಅವರ ಬಯಕೆ ಬೇಡಿಕೆ.

ಯಾರ ಬಗೆಗೂ ಅವಜ್ಞೆ ತೋರದಂಥ ಕಾಳಜಿ ಎಚ್ಚರಿಕೆಗಳು ಯಾವಾಗಲೂ ಜಾಗೃತ. ವಾತ್ಸಲ್ಯ, ಗೆಳೆತನ, ಬೆಳಕು, ಕಾಲದ ತತ್ವಗಳನ್ನ ನಿಸರ್ಗದ ತೊಟ್ಟಿಲಲ್ಲಿ ತೂಗುವ ಸಮಚಿತ್ತದ ಕಾವ್ಯ ಬರೆದು ವಿಶ್ವಭಾರತಿಗೆ ಕನ್ನಡದಾರತಿ ಬೆಳಗಿರುವ ಕಣವಿ ಅಂದರ ಒಟ್ಟಾರೆ ಕನ್ನಡ ಸಂಸ್ಕೃತಿ.

**ಸುಧಾ,** ೨೯-೧೨-೧೯೯೬

*

# ಜಾತ್ರೆಯಲ್ಲ, ಪವಿತ್ರ ಯಾತ್ರೆ

● ವೀಣಾ ಶಾಂತೇಶ್ವರ

ಕಣವಿಯವರು ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಆಯ್ಕೆಯಾದದ್ದು ಧಾರವಾಡದವರಿಗಂತೂ ಬಹಳ ಅಭಿಮಾನದ ವಿಷಯ. ಆದರೆ ಅನೇಕ ಕಾರಣಗಳಿಂದ ಈ ಸಮ್ಮೇಳನ ಮುಂದೂಡಲ್ಪಡುತ್ತಲೇ ಹೋಯಿತು. ಈ ಬಗ್ಗೆ ಕನ್ನಡಿಗರೆಲ್ಲರಿಗೂ ಸಹಜವಾಗಿಯೇ ಬೇಸರವಾಗಿತ್ತು.

* **ಸ್ವತಃ ಕಣವಿಯವರಿಗೆ?**

O ಇಲ್ಲ. ವೈಯಕ್ತಿಕವಾಗಿ ಅವರಿಗೆ ಏನೂ ಬೇಸರವಿಲ್ಲ.

"ಏಕೆಂದರೆ ನಾನೆಂದೂ ಅಧ್ಯಕ್ಷ ಪದಕ್ಕೆ ಆಸೆಪಟ್ಟವನಲ್ಲ. ಇಷ್ಟು ವರ್ಷ ಅದು ಸಿಗಲಿಲ್ಲವೆಂದು ಕೊರಗಿದವನೂ ಅಲ್ಲ. ಬೇರೆಯವರಿಗೆಲ್ಲ ಸಿಕ್ಕಿತೆಂದು ಅಸೂಯೆ ಪಟ್ಟವನೂ ಅಲ್ಲ. ಅಯಾಚಿತವಾಗಿ ಬಂದುದನ್ನು ಸಂತೋಷದಿಂದ ಸ್ವೀಕರಿಸಿದ್ದೇನೆ. ಸಮ್ಮೇಳನ ಮುಂದೆ ಹೋದಾಗ ನನಗೆ ಬೇಜಾರಾಗದಿದ್ದರೂ ಸಮ್ಮೇಳನಕ್ಕಾಗಿ ಆತುರ-ಉತ್ಸಾಹಗಳಿಂದ ಕಾಯುತ್ತಿರುವ ಅಸಂಖ್ಯಾತ ಅಭಿಮಾನಿಗಳಿಗೆ ನಿರಾಸೆಯೆನಿಸುತ್ತದಲ್ಲಾ ಅಂತ ಕಾಳಜಿಯಾಯಿತು ಅಷ್ಟೆ" ಕಣವಿ ವಿವರಿಸುತ್ತಾರೆ.

* **ಯಾಕೆ ಹೀಗಾಯಿತು? ರಾಜಕೀಯ ಕಾರಣಗಳಿಗಾಗಿ ಸಾಹಿತ್ಯಕ್ಕೆ ಸಂಬಂಧಿಸಿದ ಇಂತಹದೊಂದು ಮಹತ್ವದ ಘಟನೆ ಸಮಸ್ತ ಕನ್ನಡ ಜನಸ್ತೋಮದ ಭಾವನಾಡಿಗಳನ್ನು ಮೀಟುವಂತಹ ಸಮಾರಂಭ ಹೀಗೆ ಮುಂದೂಡಲ್ಪಡುವುದು ಸರಿಯೆ? ಸಾಹಿತ್ಯದ ಮೇಲೆ ರಾಜಕೀಯ ಪ್ರಭಾವ ಎಷ್ಟುಮಟ್ಟಿಗೆ ಇರಬಹುದು ಮತ್ತು ಎಷ್ಟರಮಟ್ಟಿಗೆ ನಾವದನ್ನು ಇರಗೊಡಬಹುದು?**

O "ಸಾಹಿತ್ಯವನ್ನು ರಾಜಕಾರಣವು ಅಪವಿತ್ರಗೊಳಿಸಬಾರದೆಂದು ಪ್ರತಿಯೊಬ್ಬ ಸಂವೇದನಾಶೀಲ ಸಾಹಿತಿಗ ಅನಿಸುತ್ತದೆ; ಆದರೆ ಈಗಿನ ಪರಿಸ್ಥಿತಿಯಲ್ಲಿ ಇದನ್ನು

ತಡೆಗಟ್ಟುವುದೇ ಸಾಧ್ಯವಿಲ್ಲದಂತಾಗಿದೆ. ಸಾಹಿತ್ಯವಷ್ಟೇ ಏಕೆ. ಶೈಕ್ಷಣಿಕ, ಧಾರ್ಮಿಕ, ಸಾಮಾಜಿಕ, ಔದ್ಯಮಿಕ ಹೀಗೆ ಎಲ್ಲ ಕ್ಷೇತ್ರಗಳಲ್ಲೂ ರಾಜಕಾರಣದ ಕೈಯೇ ಮೇಲಾಗುತ್ತಲಿದೆ. ಈ ಅನಿವಾರ್ಯತೆಯನ್ನು ಯಾರಾದರೂ ಒಪ್ಪುವ-ಬಿಡುವ ಪ್ರಶ್ನೆಯೇ ಇಲ್ಲ. ಆದರೂ ಆದಷ್ಟು ಮಟ್ಟಿಗೆ ಇಂತಹ ಸಾಹಿತ್ಯಕ ಕಾರ್ಯಕ್ರಮಗಳನ್ನು ಸಂಪೂರ್ಣವಾಗಿ ರಾಜಕಾರಣದ ಕಪಿಮುಷ್ಟಿಯಲ್ಲಿ ಸಿಕ್ಕಿಹಾಕಿಕೊಳ್ಳಲು ಬಿಡಬಾರದು"-ಕಣವಿ ಸ್ಪಷ್ಟವಾಗಿ ಹೇಳುತ್ತಾರೆ.

ಸಾಹಿತ್ಯ ಸಮ್ಮೇಳನದ ಇತಿಹಾಸವನ್ನು ತೆರೆದಿಡುತ್ತ ಕಣವಿ ಹೇಳುತ್ತಾರೆ: "ಮೊದಲಿನ ದಿನಗಳಲ್ಲಿ ಕನ್ನಡಿಗರನ್ನೆಲ್ಲ ಒಂದೆಡೆ ಸೇರಿಸುವ, ಭಾವೈಕ್ಯ ಮೂಡಿಸುವ, ಕನ್ನಡ ನಾಡು-ನುಡಿಯ ಬಗ್ಗೆ ಜಾಗೃತಿಯುಂಟು ಮಾಡುವ ಉದ್ದೇಶದಿಂದ ಸಮ್ಮೇಳನಗಳು ಶುರುವಾದವು. ಸಾಹಿತಿಗಳು ಹಾಗೂ ಸಾಮಾನ್ಯರನ್ನು ಸಮೀಪ ತರುವ ವೇದಿಕೆಗಳಾಗಿ ಈ ಸಮ್ಮೇಳನಗಳು ಕಾರ್ಯ ನಿರ್ವಹಿಸಿದವು. ಅದರೆ ಬರಬರುತ್ತ ಸಮ್ಮೇಳನಗಳ ಸ್ವರೂಪದಲ್ಲಿ ಬದಲಾವಣೆಗಳಾದವು. ಗಂಭೀರವಾದ ಸಾಹಿತ್ಯಿಕ ಚರ್ಚೆಗೆ ಈ ಸಂದರ್ಭದಲ್ಲಿ ಹೆಚ್ಚಿನ ಮಹತ್ವ ಸಿಗತೊಡಗಿತು. ಈಚೆಗೆ ಜರುಗುತ್ತಿರುವ ಸಂವಾದ ಕಾರ್ಯಕ್ರಮ ಹಾಗೂ ವಿಶೇಷ ಉಪನ್ಯಾಸಗಳಿಂದ ಸಮ್ಮೇಳನಗಳಿಗೊಂದು ಹೊಸ ಆಯಾಮ ಲಭ್ಯವಾದಂತಾಗಿದೆ. ಗೀತ-ಸಂಗೀತ ಕಾರ್ಯಕ್ರಮವೂ ಬಹಳ ಪರಿಣಾಮಕಾರಿಯಾದುದು. ಸಮ್ಮೇಳನಗಳಲ್ಲಿ ನಡೆಯುವ ಚರ್ಚೆಗಳು ಅನೇಕ ಸಲ ಕನ್ನಡ ಸಾಹಿತ್ಯವು ಬರಲಿರುವ ದಿನಗಳಲ್ಲಿ ಕ್ರಮಿಸಲಿರುವ ದಾರಿಯ ಮೇಲೆ ಬೆಳಕು ಚೆಲ್ಲುತ್ತವೆ." ಈ ಎಲ್ಲ ಕಾರಣಗಳಿಗಾಗಿ ಸಮ್ಮೇಳನದ ಬಗ್ಗೆ, ಕಣವಿಯವರಿಗೆ ಬಹಳ ಕೌತುಕವಿದೆ. ಒಳ್ಳೆಯ ಅಭಿಪ್ರಾಯವಾಗಿದೆ.

ಸಾಹಿತ್ಯ ಸಮ್ಮೇಳನವೆಂದರೆ ಒಂದು ದೊಡ್ಡ ಜಾತ್ರೆಯೆಂದು ಜರೆಯುವವರಿಗೆ ಅವರು ಹೇಳುತ್ತಾರೆ. "ಜಾತ್ರೆಯಲ್ಲ ಇದೊಂದು ಪವಿತ್ರ ಯಾತ್ರೆ."

* **ಇಂದು ಸಾಹಿತ್ಯ ಸಮ್ಮೇಳನಗಳಲ್ಲಿ ತಪ್ಪದೆ ಚರ್ಚಿಸಲ್ಪಡುವ ವಿಷಯವೆಂದರೆ ಸಮಗ್ರ ಕರ್ನಾಟಕ ಐಕ್ಯಭಾವಕ್ಕೆ ಒದಗುತ್ತಿರುವ ಅಪತ್ತುಗಳು, ನಮ್ಮ ಹಿರಿಯರು ಕರ್ನಾಟಕದ ಏಕೀಕರಣಕ್ಕಾಗಿ ಎಷ್ಟೊಂದು ಹೋರಾಡಿದರು? ಎಷ್ಟು ಶ್ರಮ ಪಟ್ಟರು? ಎಂತೆಂತಹ ತ್ಯಾಗ ಮಾಡಿದರು? ಕೊನೆಗೆ ಅವರ ತಪಸ್ಸು ಹೇಗೆ ಫಲ ಕೊಟ್ಟಿತು? ಇದೆಲ್ಲ ಸಮಸ್ತ ಕನ್ನಡಿಗರಿಗೂ ಗೊತ್ತಿದೆ. ಆದರೆ ಏಕೀಕರಣವಾಗಿ ಇಷ್ಟು ವರ್ಷಗಳಾದ ನಂತರವಾದರೂ ನಾವು ಭಾವನಾತ್ಮಕವಾಗಿ ಒಂದಾಗಿದ್ದೇವೆಯೆ? ಉತ್ತರ-ದಕ್ಷಿಣ ಅಂತ ನಾವಿನ್ನೂ ಬಡಿದಾಡುತ್ತಿದ್ದೇವಲ್ಲ;**

**ಇದಕ್ಕೆಲ್ಲ ಏನು ಕಾರಣ? ಕರ್ನಾಟಕವು ಮತ್ತೆ ಹೋಳಾಗಬೇಕು? ಈ ಸಮಸ್ಯೆಗೆ ಪರಿಹಾರವೇನು?**

ಈ ಎಲ್ಲ ಪ್ರಶ್ನೆಗಳಿಗೆ ಕಣವಿಯವರದು ಒಂದೇ ಉತ್ತರ; ನೇರವಾದ ಸರಳ ಉತ್ತರ:

O "ಎಲ್ಲರಿಗೂ ಸಮಾನ ಅವಕಾಶಗಳು-ಸೌಲಭ್ಯಗಳು ಸಿಗಬೇಕು, ಕನ್ನಡಿಗರೆಲ್ಲ ಒಂದಾಗಿ ಬಾಳಬೇಕು ಅನ್ನುವ ಉದ್ದೇಶದಿಂದ ಏಕೀಕರಣವಾಯಿತು. ಆದರೆ ನಂತರ ಆಡಳಿತಸೂತ್ರ ಹಿಡಿದವರು ಸ್ವಾರ್ಥಿಗಳಾದರು. ತಮ್ಮ ಹಾಗೂ ತಮ್ಮವರ ಹಿತಸಾಧನೆಯನ್ನು ಮಾತ್ರ ಲಕ್ಷ್ಯದಲ್ಲಿರಿಸಿಕೊಂಡು ಜನತೆಯ ಹಿತಾಸಕ್ತಿಗಳನ್ನು ಕಡೆಗಣಿಸಿದರು. ಅವಕಾಶಗಳೆಲ್ಲಾ ಕೆಲವರಿಗೇ ದಕ್ಕುತ್ತ ಹೋದಂತೆ ಉಳಿದವರು ಅವಕಾಶ ವಂಚಿತರೂ ಅತೃಪ್ತರೂ ಆದರು. ಪರಿಣಾಮ ಉತ್ತರ ಕರ್ನಾಟಕ ಪ್ರತ್ಯೇಕ ರಾಜ್ಯವಾಗಬೇಕೆಂಬ ಬೇಡಿಕೆ. ಇದು ಸಲ್ಲದು, ನಾವೆಲ್ಲ ಒಂದಾಗಿ ಇರಬೇಕು. ನಮಗೆಲ್ಲ ಸಮಾನ ಅವಕಾಶಗಳು ಸಿಗಬೇಕು. ಉತ್ತರ ಕರ್ನಾಟಕದವರಾದ ಶಾಸಕರು ಮತ್ತು ಮಂತ್ರಿಗಳು ಪಟ್ಟು ಹಿಡಿದು ಉತ್ತರ ಕರ್ನಾಟಕದ ಜನರಿಗೆ ನ್ಯಾಯ ಸಿಗುವಂತೆ ನೋಡಿಕೊಳ್ಳಬೇಕು. ಹೆಚ್ಚು ಹೆಚ್ಚು ಆಡಳಿತ ಕಚೇರಿಗಳು, ಹೊಸ ಹೊಸ ಯೋಜನೆಗಳು, ಕಾರ್ಯಾಗಾರಗಳು, ಕಟ್ಟಡ ಸಮುಚ್ಚಯಗಳು, ಅಕಾಡೆಮಿ, ಪ್ರಾಧಿಕಾರ, ನಿಗಮ, ಒಕ್ಕೂಟಗಳ ಶಾಖೆಗಳು ಹುಬ್ಬಳ್ಳಿ, ಧಾರವಾಡ, ವಿಜಾಪುರ, ಕಾರವಾರಗಳಲ್ಲಿ ಶುರುವಾಗ ಬೇಕು. ಮುಖ್ಯವಾಗಿ ಬೆಳಗಾವಿಯಲ್ಲಿ ಕನ್ನಡದ ಕೆಲಸ ಬಲಗೊಳ್ಳಬೇಕು. ಪ್ರಾದೇಶಿಕ ಅಸಮತೋಲನವನ್ನು ಹೋಗಲಾಡಿಸಲು ಸಾಧ್ಯವಾದರೆ ಪ್ರತ್ಯೇಕತೆಯ ಕೂಗು ತಾನಾಗಿಯೇ ಇಲ್ಲದಂತಾಗುವುದು. ಆಡಳಿತ ಸೂತ್ರಧಾರರು ಈ ಕೆಲಸವನ್ನು ನಿಷ್ಠೆಯಿಂದ ಮಾಡಬೇಕು."

* **ಬೆಂಗಳೂರು ಈಗ ಕನ್ನಡಿಗರ ಕೈತಪ್ಪಿಹೋಗುವ ಸ್ಥಿತಿ ಬಂದಿದೆ. ಇದಕ್ಕೆ ಹೊರನಾಡಿನವರ ಕಾರಣವಂತೂ ಮೊದಲಿನಿಂದಲೂ ಇದೆ. ಆದರೆ ಈಗಿನ ಅಪಾಯವೆಂದರೆ ಇಲ್ಲಿನ ಭೂಮಿಯನ್ನು ಒಂದಕ್ಕೆ ನೂರುಪಟ್ಟು ಬೆಲೆ ಕೊಟ್ಟು ಕಬಳಿಸುತ್ತಿರುವ ಹೊರನಾಡಿನ ಹೊರದೇಶಗಳ ಉದ್ಯಮಪತಿಗಳು ಬೆಂಗಳೂರನ್ನು ಕನ್ನಡಿಗರಿಂದ ಕಸಿದುಕೊಳ್ಳುವ ಹುನ್ನಾರ ನಡಿದಿದೆ. ಈ ಬಗ್ಗೆ ಕನ್ನಡಿಗರಲ್ಲಿ ಜಾಗೃತಿ ಮೂಡಿಸಿ ಬೆಂಗಳೂರು ಕನ್ನಡಿಗರದೇ ಆಗಿ ಉಳಿಯುವಂತೆ ಪ್ರಯತ್ನಿಸುವುದು ಸಾಧ್ಯವೆ?**

O "ಹೌದು, ಮನಸ್ಸು ಮಾಡಿದರೆ ಸಾಧ್ಯವಿದೆ" ಅನ್ನುತ್ತಾರೆ ಕಣವಿ.

"ಮಹಿಷಿ ವರದಿಯನ್ನು ಸಂಪೂರ್ಣವಾಗಿ ಜಾರಿಗೊಳಿಸುವುದು ಇದಕ್ಕೆ ಒಳ್ಳೆಯ ಪರಿಹಾರ. ವಲಸೆಗಾರರ ಮೇಲೆ ಸರ್ಕಾರ ನಿರ್ಬಂಧ ಹೇರಬೇಕು. ತ್ರಿಭಾಷಾ ಸೂತ್ರವನ್ನು ಕಟ್ಟುನಿಟ್ಟಾಗಿ ಪಾಲಿಸಬೇಕು. ಕರ್ನಾಟಕದಲ್ಲಿ ನೆಲೆಸುವ ಹೊರನಾಡಿಗರು ಕಡ್ಡಾಯವಾಗಿ ಶಾಲೆ-ಕಾಲೇಜುಗಳಲ್ಲಿ ಕನ್ನಡವನ್ನು ಅಭ್ಯಸಿಸಲೇಬೇಕು. ಲೋಕಸೇವಾ ಆಯೋಗದ ಪರೀಕ್ಷೆಗಳಿಗೆ ಕನ್ನಡವು ಕಡ್ಡಾಯ ವಿಷಯವಾಗಬೇಕು. ವೈದ್ಯಕೀಯ ವಿಶ್ವವಿದ್ಯಾಲಯವು ಬೆಂಗಳೂರಿನಲ್ಲಿ ಸ್ಥಾಪಿತವಾದಂತೆ ತಾಂತ್ರಿಕ ವಿಶ್ವವಿದ್ಯಾಲಯವು ದಾವಣಗೆರೆಯಲ್ಲಿ ಅಥವಾ ಇನ್ನು ಈ ಕಡೆ ಉತ್ತರದಲ್ಲಿ ಸ್ಥಾಪಿತವಾಗಬೇಕು. ಕರ್ನಾಟಕದ ಭೂಮಿ, ನೀರು, ಸಸ್ಯ ಸಂಪತ್ತು, ಖನಿಜ ಸಂಪತ್ತುಗಳಿಗೆ ಸಂಬಂಧಿಸಿದ ವಿಷಯಗಳಲ್ಲಿಯಾವುದೇ ಒತ್ತಡಕ್ಕೂ ಸರಕಾರ ಮಣಿಯಬಾರದು. ಕನ್ನಡನಾಡು ನುಡಿಯ ಕಲ್ಯಾಣವೇ ಮುಖ್ಯ ಉದ್ದೇಶವಾಗಿರುವ ಕಾರ್ಯಕರ್ತರನ್ನು, ಮುಂದಾಳುಗಳನ್ನು ಮಾತ್ರ ಜನ ಬೆಂಬಲಿಸಬೇಕು. ಅಂದಾಗ ಬೆಂಗಳೂರು ಸೇರಿದಂತೆ ಇಡಿಯ ಕರ್ನಾಟಕ ನಮ್ಮದಾಗಿ ಉಳಿದೀತು." -ಇದು ಕಣವಿಯವರ ದೃಢ ನಂಬಿಕೆ ಹಾಗೂ ಎಚ್ಚರಿಕೆ ಕೂಡ.

ಹಿಂದೆ ಕನ್ನಡ ಭಾಷೆ ಮತ್ತು ಸಾಹಿತ್ಯದ ಅಭಿವೃದ್ಧಿಗೆ ಸಾಹಿತ್ಯ ಪರಿಷತ್ತೊಂದೇ ಇತ್ತು. ಈಗ ಅದಕ್ಕಾಗಿ ಪ್ರತ್ಯೇಕ ಸರಕಾರೀ ಇಲಾಖೆಯೇ ಇದೆ. ಅದರ ಅಂಗವಾಗಿ ಅಕಾಡೆಮಿಯೂ ಕೆಲಸ ಮಾಡುತ್ತಿದೆ. ಕನ್ನಡ ಅಭಿವೃದ್ಧಿ ಪ್ರಾಧಿಕಾರವಿದೆ, ಕನ್ನಡ ವಿಶ್ವವಿದ್ಯಾಲಯವಿದೆ. ಆದರೂ ಕನ್ನಡದ ಅಭಿವೃದ್ಧಿ ಕಾರ್ಯ ಆಗಬೇಕಾದಷ್ಟು ಆಗಿದೆಯೇ? "ಇಲ್ಲ" ಎನ್ನುತ್ತಾರೆ ಕಣವಿ.

* **ಇದಕ್ಕೆ ಏನು ಮಾಡಬೇಕು?**

O "ಕನ್ನಡದ ಅಭಿವೃದ್ಧಿ ಕೆಲಸ ಸುಗಮವಾಗಬೇಕಾದರೆ ಪ್ರಾಥಮಿಕ ಶಾಲೆಯ ಹಂತದಿಂದಲೇ ಸುಧಾರಣೆ ಶುರುವಾಗಬೇಕು. ಈಗಿನ ಪಠ್ಯಕ್ರಮ ಜಟಿಲವೂ ದಿಕ್ಕು ತಪ್ಪಿಸುವಂಥದ್ದೂ ಆಗಿದೆ. ಕಲಿಯುವಿಕೆಯನ್ನು ವಿದ್ಯಾರ್ಥಿಗಳಾಗಲೀ ಕಲಿಸುವಿಕೆಯನ್ನು ಶಿಕ್ಷಕರಾಗಲೀ ಸಂತೋಷದಿಂದ ನಿರ್ವಹಿಸುವುದು ಸಾಧ್ಯವಾಗುತ್ತಿಲ್ಲ. ಟ್ಯೂಷನ್‌ಗಳ, ಡೊನೇಶನ್‌ಗಳ ಹಾವಳಿಯಂತೂ ವಿಪರೀತ. ಒಂದು ಜನಾಂಗದ ಭವಿಷ್ಯವನ್ನೇ ಈ ಶಿಕ್ಷಣ ರಂಗದಲ್ಲಿ ನಡೆದಿರುವ ಪ್ರಯೋಗಗಳು ಹಾಳು ಮಾಡುತ್ತಿವೆ. ನಮ್ಮ ಪ್ರಾಥಮಿಕ ಶಿಕ್ಷಣ ಪದ್ಧತಿಯಲ್ಲಿ

ಆಮೂಲಾಗ್ರ ಬದಲಾವಣೆ ಆಗಬೇಕು. ಕನ್ನಡದ ಬಗ್ಗೆ ಪ್ರೀತಿ-ಗೌರವ ಬೆಳೆಸುವಂಥ ಸರಳವಾದ ಆನಂದದಾಯಕವಾದ ಪಠ್ಯಕ್ರಮ ಜಾರಿಗೆ ಬರಬೇಕು. ಮಕ್ಕಳಲ್ಲಿ ಮೊದಲಿನಿಂದಲೇ ನಾಡು-ನುಡಿಯ ಬಗ್ಗೆ ಕಾಳಜಿ-ಅಭಿಮಾನ ಮೂಡಿದರೆ ಮುಂದೆ ಜೀವನವಿಡೀ ಅದು ಉಳಿಯುತ್ತದೆ. ಆಗ ಯಾವ ಸರಕಾರೀ ಯೋಜನೆಗಳಿಂದಲೂ ಆಗದ ಅಭಿವೃದ್ಧಿ ಕಾರ್ಯ ತಾನಾಗಿಯೇ ಆಗುತ್ತದೆ."

* **ಆಗ ನವೋದಯ, ನಂತರ ನವ್ಯ, ಬಳಿಕ ಬಂಡಾಯ, ದಲಿತ ಎಂದೆಲ್ಲ ಸಾಹಿತ್ಯವನ್ನು ಗುರುತಿಸುತ್ತ ಬಂದಿರುವ ನಾವು ಈಗ ಸೃಷ್ಟಿಗೊಳ್ಳುತ್ತಿರುವ ಸಾಹಿತ್ಯವನ್ನು ಏನೆಂದು ಕರೆಯಬಹುದು?**

O "ಸಾಹಿತ್ಯದ ಇತಿಹಾಸದಲ್ಲಿ ಪ್ರತಿಯೊಂದು ಹೊಸ ಪಂಥವೂ ಪ್ರಚಲಿತ ಪಂಥದ ವಿರುದ್ಧ ಹೂಡುವ ಬಂಡಾಯವೇ ಸರಿ. ಬಂಡಾಯ ಒಂದು ಮನೋಧರ್ಮ. ಎಲ್ಲ ಚಿಂತನಶೀಲ ಲೇಖಕರಲ್ಲೂ ಅದು ಇದ್ದೇ ಇರುತ್ತದೆ. ಇನ್ನು ದಲಿತ ಸಾಹಿತ್ಯ, ಸ್ತ್ರೀವಾದಿ ಸಾಹಿತ್ಯ ಇತ್ಯಾದಿಗಳು ಇವತ್ತಿನ ಸಾಹಿತ್ಯದ ಹೊಸ ಹೊಸ ರೂಪಗಳು. ಇವತ್ತಿನ ಕನ್ನಡ ಸಾಹಿತ್ಯದಲ್ಲಿ ಬೆರಗುಗೊಳಿಸುವಂಥ ವೈವಿಧ್ಯ ಇದೆ. ವಸ್ತು, ತಂತ್ರ, ದೃಷ್ಟಿಕೋನ, ಅಭಿವ್ಯಕ್ತಿ ಎಲ್ಲದರಲ್ಲೂ ಹೊಸ ಪ್ರಯೋಗಗಳಾಗುತ್ತಿವೆ. ಇವತ್ತಿನ ತರುಣ ಪೀಳಿಗೆಯ ಲೇಖಕರು ತಮ್ಮ ದುಡುಕು, ಪ್ರಚಾರಪ್ರಿಯತೆ, ಸಂಕುಚಿತತೆಗಳನ್ನು ಬದಿಗುಟ್ಟು ಅಧ್ಯಯನಶೀಲ ರಾಗಿ ಸ್ವವಿಮರ್ಶೆ ಮಾಡಿಕೊಳ್ಳುತ್ತ ಬರೆಯತೊಡಗಿದರೆ ಒಳ್ಳೆಯ ಕೃತಿಗಳು ಹೊರಬಂದಾವು."

* **ಸ್ತ್ರೀ, ಸಾಮಾಜಿಕವಾಗಿ, ಸಾಹಿತ್ಯಕವಾಗಿ, ಕೌಟುಂಬಿಕವಾಗಿ ತಮಗೆ ಹೇಗೆ ಕಾಣುತ್ತಾಳೆ?**

O "ಭುವನ ಸುಂದರಿ ಸ್ಪರ್ಧೆಯನ್ನು ವಿರೋಧಿಸಿದವರಲ್ಲಿಯೇ ದ್ವಂದ್ವವಿದೆ. ಸೌಂದರ್ಯವಂತೂ ಸ್ಪರ್ಧೆಗಿಡುವ ವಿಷಯವಲ್ಲ. ಅದು ಅನನ್ಯವಾದದ್ದು. ಆದರೆ ಇದನ್ನು ವಿರೋಧಿಸಿದವರು ಸಿನೆಮಾದ ಆಶ್ಲೀಲತೆಯನ್ನೇಕೆ ವಿರೋಧಿಸುವುದಿಲ್ಲ?

"ಸ್ತ್ರೀ ವಾದವು ಸ್ತ್ರೀತ್ವದ ಅರಿವಿನಿಂದಲೇ ಹೊರಹೊಮ್ಮಿದಾಗ ಅರ್ಥಪೂರ್ಣ ವಾಗುತ್ತದೆ. ಸ್ತ್ರೀತ್ವದ ಮೂಲಭೂತ ಆಶಯಗಳನ್ನು ಧಿಕ್ಕರಿಸುವಂಥ ಸ್ತ್ರೀವಾದಕ್ಕೆ ಮಹತ್ವವಿಲ್ಲ.

"ಹೊಸ ಪೀಳಿಗೆಯ ಕವಯಿತ್ರಿಯವರು ಬಹಳ ಮುಕ್ತವಾಗಿ, ನಿಸ್ಸಂಕೋಚತನ

ದಿಂದ ತಮ್ಮ ಭಾವನೆಗಳನ್ನು ಅಭಿವ್ಯಕ್ತಗೊಳಿಸುತ್ತಾರೆ. ಅವರಲ್ಲಿ ಅನೇಕರು ಗಂಡಸರಿಗಿಂತಲೂ ಚೆನ್ನಾಗಿ ಬರೆಯುತ್ತಾರೆ.

"ನನ್ನ ದಾಂಪತ್ಯ ಅನ್ಯೋನ್ಯವಾಗಲು ನನ್ನಾಕೆ ಶಾಂತಾದೇವಿಯ ತ್ಯಾಗ ಮನೋಭಾವವೇ ಕಾರಣ. ಆಕೆಯ ಬರವಣಿಗೆಗೆ ನನ್ನಿಂದ ಸಲ್ಲುವ ಸಹಾಯಕ್ಕಿಂತ ನನ್ನ ಬರವಣಿಗೆಗೆ, ಭೌತಿಕ ಅನುಕೂಲಗಳನ್ನು ಒದಗಿಸಿಕೊಡುವ ರೂಪದಲ್ಲಿ ಶಾಂತಾದೇವಿಯಿಂದ ಸಲ್ಲುತ್ತಿರುವ ಸಹಾಯವೇ ಹೆಚ್ಚು."

* * *

ಕಣವಿಯವರು ಚಿಂತನಶೀಲ, ಸಂವೇದನಾಶೀಲ ವ್ಯಕ್ತಿ. ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಿಗೆ ಈಚೆಗೆ ಕೆಲವು ಅಧಿಕಾರಗಳನ್ನು ಕೊಡಲಾಗಿದೆಯಂತೆ. ಅವನ್ನು ಖಂಡಿತ ಸದುಪಯೋಗಪಡಿಸಿಕೊಂಡು ಕಣವಿಯವರು ನಾಡು-ನುಡಿಯ ಹಿತಸಾಧನೆಗಾಗಿ ಶ್ರಮಿಸುತ್ತಾರೆಂಬ ಭರವಸೆ ಕನ್ನಡಿಗರದು.

'ಕರ್ಮವೀರ', ೧೯೯೬

*

# ಸಾತ್ವಿಕ ಶಕ್ತಿ ಕ್ರಿಯಾಶೀಲಗೊಳ್ಳಬೇಕು

● ನರಹಳ್ಳಿ ಬಾಲಸುಬ್ರಹ್ಮಣ್ಯ

ಕಣವಿಯವರು ಮೃದುಭಾಷಿ; 'ಮಾತು' ಎಂಬ ಅವರ ಕವಿತೆ ಕಣವಿಯವರು ಮಾತಿನ ಬಗ್ಗೆ ತಳೆದಿರುವ ನಿಲುವನ್ನು ಸಮರ್ಥವಾಗಿ ಸೂಚಿಸುತ್ತದೆ. ಮಾತಿನ ಬಳಕೆಯ ಬಗ್ಗೆ ಕಣವಿಯವರು ಬಹಳ ಎಚ್ಚರವಹಿಸುತ್ತಾರೆ. ಯಾರ ಬಗ್ಗೆಯೂ ಅವರು ನಿಷ್ಠುರವಾಗಿ ಮಾತನಾಡಬಯಸುವುದಿಲ್ಲ. ಘರ್ಷಣೆ ಅವರಿಗೆ ಪ್ರಿಯವಲ್ಲ. ಸತ್ಯ ಅವರಿಗೆ ಗೊತ್ತು. ಹಾಗಾಗಿ ವಾದ ಮಾಡುವುದರಲ್ಲಿ ಅವರಿಗೆ ಆಸಕ್ತಿಯಿಲ್ಲ. ತಮ್ಮ ಸ್ವಭಾವದ ಬಗೆಗೂ ಅವರಿಗೆ ಅರಿವಿದೆ. ಕೆಲವೊಮ್ಮೆ ಆ ಬಗ್ಗೆ ಅಸಮಾಧಾನವೂ ಇದೆ. ಆದರೆ ಈ ಹಂತದಲ್ಲಿ ಅದನ್ನು ಮೀರುವುದು ಅವರಿಗೆ ಸಾಧ್ಯವಾಗುತ್ತಿಲ್ಲ ಅಥವಾ ಆ ಬಗೆಯ ಉತ್ಸಾಹವಿದ್ದಂತಿಲ್ಲ. ಮಾತನಾಡಲೇ ಬೇಕಾದಾಗಲೂ ಮೌನ ತಾಳುತ್ತಾರೆ. ಒತ್ತಾಯಿಸಿದರೆ ಮುಗುಳ್ನಗುತ್ತಾರೆ. ಆ ಮುಗುಳ್ನಗೆಯ ಹಿಂದೆ ವಿಷಾದವಿರುವುದು ನಮ್ಮ ಅನುಭವಕ್ಕೆ ಬರುತ್ತದೆ.

ಕಣವಿಯವರೊಂದಿಗೆ ಮಾತನಾಡುವಾಗ ಯಾವ ಹಂತದಲ್ಲೂ ನಮಗೆ ಬೇಸರವಾಗುವುದಿಲ್ಲ; ಆಪ್ತತೆಯ ನೆಲೆಯಲ್ಲಿಯೇ ಸಂವಾದ ಮಾಡುವುದು ಅವರಿಗೆ ಸಾಧ್ಯ. ಸಜ್ಜನಿಕೆ ತೋರಿಕೆಯದೆನ್ನಿಸುವುದಿಲ್ಲ. ಸಾಹಿತ್ಯದ ಬಗೆಗೆ ಅವರು ಮಾತನಾಡುವಾಗ ವಿದ್ವತ್ತಿಗಿಂತ ಅನುಭವವೇ ಪ್ರಧಾನವಾಗಿರುವಂತೆ ತೋರುತ್ತದೆ. ಅಕಾಡೆಮಿಕ್ ಆದ ಪರಿಭಾಷೆಯಿಂದ ಅವರು ದೂರ. ಅಧಿಕಾರಯುತವಾಗಿ ಮಾತನಾಡುವುದಕ್ಕಿಂತ ತಿಳಿಯುವ, ತಿಳಿಸಿಕೊಡುವ ನೆಲೆಯಲ್ಲಿಯೇ ಅವರ ಮಾತು ಸಾಗುತ್ತದೆ.

ಕಣವಿಯವರ ಜೊತೆ ಮಾತನಾಡುವಾಗ ಅವರ ಪತ್ನಿ ಶ್ರೀಮತಿ ಶಾಂತಾದೇವಿ ಕಣವಿಯವರೂ ನಮ್ಮೊಂದಿಗಿದ್ದರು. ಸೂಕ್ಷ್ಮಮತಿಯಾದ ಶಾಂತಾದೇವಿಯವರು ಸಂವಾದದ ನಡುವೆ ಸೂಕ್ತವಾಗಿ ಪ್ರತಿಕ್ರಿಯಿಸುತ್ತ ನಮ್ಮ ಸಂವಾದ ಲವಲವಿಕೆಯಿಂದ ನಡೆಯುವಂತೆ ನೋಡಿಕೊಂಡರು. ಸೌಜನ್ಯದಲ್ಲಿ ಶಾಂತಾದೇವಿಯವರು

ಕಣವಿಯವರೊಡನೆ ಸ್ಪರ್ಧೆಗಿಳಿಯುವಂತೆ ನಮಗನ್ನಿಸಿತು. ಕಣವಿ ದಂಪತಿಗಳದು ಸುಮಧುರ ದಾಂಪತ್ಯ. ಭಿನ್ನಾಭಿಪ್ರಾಯಗಳನ್ನು ಗೌರವದಿಂದ ವ್ಯಕ್ತಪಡಿಸುವ ಅವರ ರೀತಿ ಕಿರಿಯರನೇಕರಿಗೆ ಮಾದರಿಯನ್ನೊದಗಿಸುತ್ತದೆ.

ಕಣವಿಯವರೊಡನೆ ನಡೆಸಿದ ಸಂವಾದದ ಕೆಲವು ಸಂಗತಿಗಳನ್ನು ಇಲ್ಲಿ ದಾಖಲಿಸುತ್ತಿದ್ದೇನೆ:

*** ಈ ಶತಮಾನದ ಮೂವತ್ತರ ದಶಕದಲ್ಲಿ ಜನಿಸಿದವರು ನೀವು. ಈಗ ನಾವು ಶತಮಾನದ ಕಡೆಯಲ್ಲಿದ್ದೇವೆ. ಆಗಿನ ಸಾಂಸ್ಕೃತಿಕ ಪರಿಸರಕ್ಕೂ ಈಗಿನ ಪರಿಸರಕ್ಕೂ ಯಾವ ಬಗೆಯ ವ್ಯತ್ಯಾಸವನ್ನು ನೀವು ಗುರ್ತಿಸುತ್ತೀರಿ?**

ಆಗ ನಮಗೆ ಮುಗ್ಧತೆಯ ಒಂದು ಲೋಕವಿತ್ತು; ಈ ಮುಗ್ಧತೆ ನಮ್ಮ ಮನಸ್ಸಿನಲ್ಲಲ್ಲ -ವಾತಾವರಣದಲ್ಲೇ ಇತ್ತೆನ್ನಬಹುದು. ಮೋಸ, ವಂಚನೆ, ಲಜ್ಜಾಹೀನತೆ ಇರಲಿಲ್ಲವೆಂದಲ್ಲ, ಅಂಥದಕ್ಕೆ ಅವಕಾಶಗಳು ಕಡಿಮೆಯಿತ್ತು. ಆದರೆ ಈಗ ಮುಗ್ಧತೆಯ ಮೇಲೆ ಆಕ್ರಮಣ ನಡೆದಿದೆ ಅನ್ನಿಸುತ್ತದೆ. ಪರಿಸರ, ತಂತ್ರಜ್ಞಾನ, ನಾಗರಿಕತೆ-ಎಲ್ಲವೂ ಮಕ್ಕಳ ಮನಸ್ಸಿನ ಮುಗ್ಧತೆಯ ಮೇಲೆ ತೀವ್ರ ಆಕ್ರಮಣ ನಡೆಸುತ್ತಿವೆ.

ಆದರೆ ಈಗಿರುವ ಸಾಹಸ ಪ್ರಧಾನತೆ, ಯಾವುದಕ್ಕೂ ಅಂಜದ ಮನೋಭಾವ ಆಗ ಇರಲಿಲ್ಲ. ನಮ್ಮ ಬಾಲ್ಯ ಕಾಲದಲ್ಲಿ 'ಅಂಜಿಕೆ' ಇತ್ತು. ಕೆಲವೊಮ್ಮೆ ಅದು ಹಿಂಜರಿಕೆಗೂ ಸಂಕೋಚಕ್ಕೂ ಕಾರಣವಾಗುತ್ತಿತ್ತು. ಈಗ ಹಾಗಿಲ್ಲ. ಅವಕಾಶಗಳನ್ನು ಕಲ್ಪಿಸಿಕೊಳ್ಳಬಲ್ಲ ಛಾತಿಯನ್ನು ಮಕ್ಕಳಲ್ಲಿ ನಾನು ಕಾಣುತ್ತೇನೆ.

ಎಲ್ಲಕ್ಕಿಂತ ಮುಖ್ಯ ವ್ಯತ್ಯಾಸವೆಂದರೆ ನಮಗೆ ಚಿಕ್ಕಂದಿನಲ್ಲಿ ನಮ್ಮದೇ ಆದ ಪ್ರಪಂಚವೊಂದಿತ್ತು. ಆ ಪ್ರಪಂಚದಲ್ಲಿ ಹಕ್ಕಿ, ಮರ, ಗಿಡ, ನದಿ, ಕಾಡು, ಮೇಡು ಎಲ್ಲವೂ ಇತ್ತು. ಈಗಿನ ಮಕ್ಕಳಿಗೆ ಅಂಥದೊಂದು ಪ್ರಪಂಚವಿಲ್ಲ ಅನ್ನಿಸುತ್ತದೆ.

*** ಈಗ ಸೃಜನಶೀಲತೆ ಎದುರಿಸುತ್ತಿರುವ ಸವಾಲಿನ ಸ್ವರೂಪ ಯಾವ ಬಗೆಯದು?**

ಈಗ ಸೃಜನಶೀಲ ಮನಸ್ಸು ಅನೇಕ ಆತಂಕಗಳ ನಡುವೆ ಕೆಲಸ ಮಾಡಬೇಕಾಗಿದೆ. ಒಂದು ಬಗೆಯ ಗೊಂದಲದ ವಾತಾವರಣವಿದೆ. ಸರಳತೆ, ನಿರಾಡಂಬರತೆ ಮಾಯವಾಗಿ ತೋರಿಕೆ, ಆಡಂಬರ ಎಲ್ಲ ರಂಗಗಳನ್ನೂ ಆಕ್ರಮಿಸಿದೆ. ನಿಜ ಹಾಗೂ ಕಪಟಗಳ ನಡುವೆ ಅಂತರ ಕಡಿಮೆಯಾಗಿದೆ. ಹೀಗಾಗಿ ಸೃಜನಶೀಲ ಮನಸ್ಸು ಮೊದಲಿಗೆ ಈ ಸವಾಲನ್ನು ಗೆಲ್ಲಬೇಕಿದೆ.

ಜೊತೆಗೆ ನಮ್ಮ ಮೂಲ ನಂಬಿಕೆಗಳನ್ನೇ ಅಲುಗಾಡಿಸುವಂಥ ಘಟನೆಗಳು

ನಡೆಯುತ್ತಿವೆ. ನಿಜವಾದ ಸಂವಾದ-ವ್ಯಕ್ತಿ ವ್ಯಕ್ತಿಗಳ ನಡುವೆ ಮಾತ್ರವಲ್ಲ, ಸೃಜನಶೀಲ ಮನಸ್ಸು ಹಾಗೂ ಸಮಾಜದ ನಡುವೆ ಸಹ ಸಾಧ್ಯವಾಗುತ್ತಿಲ್ಲ. ಇದೂ ಸಹ ಸೃಜನಶೀಲತೆಗೆ ಇರುವ ಮುಖ್ಯ ಸವಾಲು ಎಂದು ನನಗನ್ನಿಸುತ್ತಿದೆ.

*** ಇದನ್ನು ಎದುರಿಸುವುದು ಹೇಗೆ?**

ನಿಜದ ನೆಲೆಗಳ ಅನ್ವೇಷಣೆ. ಅದಕ್ಕಿರುವ ಒಂದೇ ದಾರಿ ಮನುಷ್ಯ ಮತ್ತೆ ಪ್ರಕೃತಿಗೆ ಹೋಗುವುದು. ಸೃಜನಶೀಲ ಮನಸ್ಸು ಪ್ರಕೃತಿಯ ಜೊತೆ ಅರ್ಥಪೂರ್ಣ ಸಂಬಂಧ ಸೃಷ್ಟಿಸಿಕೊಳ್ಳಲು ಸಾಧ್ಯವಾಗಬೇಕು. ಪ್ರಕೃತಿಯನ್ನು ನಾವೀಗ ಕಾಪಾಡಿಕೊಳ್ಳ ಬೇಕಾಗಿರುವುದು ಕೇವಲ ಪರಿಸರ ರಕ್ಷಣೆಯ ದೃಷ್ಟಿಯಿಂದ ಮಾತ್ರವಲ್ಲ, ಸೃಜನಶೀಲತೆಯ ದೃಷ್ಟಿಯಿಂದಲೂ ಅತ್ಯಗತ್ಯ. ಪ್ರಕೃತಿಯೊಂದಿಗೆ ಸೃಜನಶೀಲ ಮನಸ್ಸಿಗೆ ಹೊಕ್ಕು-ಬಳಕೆ ಸಾಧ್ಯವಾಗಬೇಕು.

*** ಸಾಹಿತ್ಯದ ಅನನ್ಯತೆ ಯಾವುದು? ಉಳಿದ ಕ್ಷೇತ್ರಗಳಿಗಿಂತ ಇದು ಹೇಗೆ ಭಿನ್ನ?**

ಯಾವುದೇ ಕ್ಷೇತ್ರದಲ್ಲಾಗಲೀ ತನ್ನ ತಿಳಿವಳಿಕೆಯನ್ನು, ಸೃಜನಶೀಲತೆಯನ್ನು 'ವ್ಯಾವಹಾರಿಕ ಲಾಭ'ಕ್ಕಾಗಿ ಬಳಸಿಕೊಂಡಾಗ ಅದು ಮಾರಾಟದ ಸರಕಾಗಿ ಬಿಡುತ್ತದೆ. ಸಾಹಿತ್ಯದಲ್ಲೂ ಈ ಅಪಾಯವಿದೆ. ಆದರೆ ಶ್ರೇಷ್ಠ ಸಾಹಿತ್ಯ ಹೀಗೆ ವ್ಯಾಪಾರದ ಸರಕಾಗುವುದಿಲ್ಲ. ಸೃಜನಶೀಲ ಮನಸ್ಸು 'ವ್ಯಾವಹಾರಿಕ ಜಗತ್ತಿನ' ಲಾಭ-ನಷ್ಟಗಳ ಬಗ್ಗೆ ಎಂದೂ ತಲೆಕೆಡಿಸಿಕೊಳ್ಳುವುದಿಲ್ಲ. ಉಳಿದ ಕ್ಷೇತ್ರಗಳಲ್ಲೂ ಈ ಬಗೆಯ 'ಸೃಷ್ಟಿ'ಗೆ, ಈ ಬಗೆಯ ಪ್ರತಿಭೆಗೆ ಮಾನ್ಯತೆ ಇದ್ದೇ ಇರುತ್ತದೆ. ಆದರೆ ಅಂಥದು ವಿರಳ. ನನಗೆ ತಕ್ಷಣ ನೆನಪಿಗೆ ಬರುವ ಇಂಥ ವ್ಯಕ್ತಿತ್ವವೆಂದರೆ ನಮ್ಮ ಸುದರ್ಶನ್. ಬಿಳಿಗಿರಿರಂಗನ ಬೆಟ್ಟದ ಕ್ಷೇತ್ರದಲ್ಲಿ ಸೋಲಿಗರಿಗಾಗಿ ಅವರು ಮಾಡುತ್ತಿರುವ ಕೆಲಸ ಈ ಬಗೆಯದು.

*** ಎಳೆಯ ಮನಸ್ಸುಗಳಿಗೆ ಇಂದು ಸಾಹಿತ್ಯದ ಪ್ರಾಮುಖ್ಯತೆಯನ್ನು ಮನವರಿಕೆ ಮಾಡಿಕೊಡುವುದು ಹೇಗೆ? ಅವರಲ್ಲಿ ಆಸಕ್ತಿ ಮೂಡಿಸುವುದು ಹೇಗೆ?**

ಇದು ಮುಖ್ಯವಾಗಿ ಶಿಕ್ಷಣದಿಂದ ಸಾಧ್ಯವಾಗಬೇಕು. ನಮ್ಮಲ್ಲಿ ಈಗ ಅತ್ಯುತ್ತಮ ಅಧ್ಯಾಪಕರ ಕೊರತೆಯಿದೆ ಅನ್ನಿಸುತ್ತದೆ. ಜೊತೆಗೆ ಎಲ್ಲವನ್ನೂ ಲಾಭದ ದೃಷ್ಟಿಯಿಂದ ನೋಡುವ ಮನೋಭಾವ ಬದಲಾಗುವಂತೆ ಮಾಡಬೇಕು. ಮಕ್ಕಳಲ್ಲಿ ಈ 'ವ್ಯಾವಹಾರಿಕ ಲಾಭ'ದ ಭಾವ-ಪ್ರಬಲವಾಗದಂತೆ ನೋಡಿಕೊಳ್ಳಬೇಕು. ಮನೆಯ ಪರಿಸರದಲ್ಲೂ ಮಾನವೀಯ ಸಂಬಂಧಗಳ ಅರ್ಥಪೂರ್ಣತೆಯನ್ನು ಮನವರಿಕೆ ಮಾಡಿಕೊಡುವಂಥ ಪ್ರಯತ್ನಗಳಾಗಬೇಕು. ಸಾಹಿತ್ಯ ನಮ್ಮ ಭಾವನಾ ಜಗತ್ತಿಗೆ ಅತ್ಯಗತ್ಯ. ಮನುಷ್ಯ

ಭಾವರಹಿತನಾಗಿಬಿಟ್ಟರೆ ಒದಗುವ ದುರಂತಗಳ ಬಗ್ಗೆ ಈಗ ಗಂಭೀರವಾಗಿ ಚಿಂತಿಸುವ ಅಗತ್ಯವನ್ನು ನಿಮ್ಮ ಈ ಪ್ರಶ್ನೆ ಒತ್ತಿಹೇಳುತ್ತಿದೆ. ಎಳೆಯ ಮನಸ್ಸುಗಳಿಗೇ ಏಕೆ, ಎಲ್ಲರಿಗೂ ಈಗ ಸಾಹಿತ್ಯದ ಪ್ರಸ್ತುತತೆ, ಅಗತ್ಯತೆಗಳ ಬಗ್ಗೆ ಮನವರಿಕೆ ಮಾಡಿಕೊಡಬೇಕಿದೆ.

*** ವೈಯಕ್ತಿಕವಾಗಿ ನಿಮಗೆ ನಾಲ್ಕು ದಶಕಗಳ ಸಾಹಿತ್ಯದ ಒಡನಾಟ ಯಾವ ಬಗೆಯಲ್ಲಿ ಉಪಯುಕ್ತ ಅನ್ನಿಸಿದೆ?**

ನನ್ನ 'ಅಸ್ತಿತ್ವ' ಗುರ್ತಿಸಿಕೊಳ್ಳಲಿಕ್ಕೆ, ನನ್ನನ್ನು ನಾನು ಅರ್ಥಮಾಡಿಕೊಳ್ಳಲಿಕ್ಕೆ ಸಾಹಿತ್ಯ ನೆರವಾಗಿದೆ. ನನ್ನನ್ನು ನಾನು ಅರ್ಥಮಾಡಿಕೊಳ್ಳುವುದೆಂದರೆ- ನನ್ನ ಪ್ರಕಾರ ಅನ್ಯರನ್ನು ಅರ್ಥಮಾಡಿಕೊಳ್ಳುವ ಪ್ರಯತ್ನವೂ ಹೌದು. ಸುತ್ತಮುತ್ತಲಿನ ಪರಿಸರವನ್ನು ಸಹಾನುಭೂತಿಯಿಂದ ನೋಡುವುದು ಸಾಧ್ಯವಾಗಿ ಬಿಟ್ಟರೆ ನಮ್ಮೆಲ್ಲರ ಬದುಕೂ ಸಹನೀಯವಾಗುತ್ತದೆ. ಸಾಹಿತ್ಯ ಈ 'ನೋಟ'ವನ್ನು ನನಗೆ ನೀಡಿದೆಯೆಂಬುದು ನನ್ನ ತಿಳಿವಳಿಕೆ. ಇತರ ಜೀವಿಗಳನ್ನು 'ನನ್ನಂತೆ' ಎಂಬ ನೆಲೆಯಲ್ಲಿ ನೋಡಲು ಸಾಧ್ಯವಾಗಿಬಿಟ್ಟರೆ ನಮ್ಮ ಅನೇಕ ಸಮಸ್ಯೆಗಳು ಪರಿಹಾರವಾದಂತೆ.

*** ನಾಲ್ಕು ದಶಕಗಳಿಂದಲೂ ನೀವು ಕಾವ್ಯರಚನೆಯ ಕಸುಬಿನಲ್ಲಿ ತೊಡಗಿದ್ದೀರಿ. ಕಾವ್ಯಸೃಷ್ಟಿ ನಿಗೂಢವೆಂಬುದನ್ನು ಒಪ್ಪಿದರೂ ಆ ಬಗ್ಗೆ ನಿಮ್ಮಿಂದ ಕೇಳಿ ತಿಳಿಯುವ ಆಸೆ. ನೀವು ಕವಿತೆ ಕಟ್ಟುವ ಕ್ರಮ ಹೇಗೆ?**

ನೀವು ಹೇಳುವುದು ನಿಜ. ಕಾವ್ಯ ಸೃಷ್ಟಿ ನಿಜಕ್ಕೂ ಒಂದು ರಹಸ್ಯವೇ. ಆದರೂ ಅದನ್ನು ಅರ್ಥಮಾಡಿಕೊಳ್ಳುವ ಪ್ರಯತ್ನವನ್ನು ನಮ್ಮವರು ಉದ್ದಕ್ಕೂ ಮಾಡುತ್ತಲೇ ಬಂದಿದ್ದಾರೆ. ಭಾರತೀಯ ಕಾವ್ಯಮೀಮಾಂಸೆಯಲ್ಲಿ ಈ ಬಗ್ಗೆ ಸಾಕಷ್ಟು ಚಿಂತನೆ ನಡೆದಿರಬಹುದನ್ನು ನಾವು ಕಾಣಬಹುದು.

ವೈಯಕ್ತಿಕ ಅನುಭವದ ಆಧಾರದ ಮೇಲೆ ಇದನ್ನು ವಿವರಿಸುವುದಾದರೆ-ಕವಿತೆ ಬರೆಯುವ ಮುನ್ನ 'ಕಾವ್ಯವಸ್ತು'ವನ್ನು ಗುರ್ತಿಸಿಕೊಳ್ಳುತ್ತೇನೆ. ಒಂದು ಸಂಗತಿ ಮನಸ್ಸನ್ನು ಆಕ್ರಮಿಸಿ ಅಭಿವ್ಯಕ್ತಿ ಪಡೆಯಲು ನಿರ್ದಿಷ್ಟ 'ಪ್ರತಿಮೆ'ಗಾಗಿ ಕಾಯುತ್ತಿರುತ್ತದೆ. ಮನಸ್ಸಿನ ಅನುಭವಕ್ಕೆ ಸೂಕ್ತ 'ಪ್ರತಿಮೆ' ದೊರಕಿದಾಗ ಕವಿತೆಯ ರಚನೆ ಆರಂಭವಾಗುತ್ತದೆ. ನಂತರ ನನ್ನ ಮನಸ್ಸನ್ನು ನಾನು ಅದಕ್ಕೆ ಒಪ್ಪಿಸಿಕೊಳ್ಳುತ್ತೇನೆ. ಅಥವಾ ಅದನ್ನು ಹೀಗೂ ಹೇಳಬಹುದು. ಸೃಜನಶೀಲತೆಯೇ ನನ್ನನ್ನು ಆಕ್ರಮಿಸಿ ತನ್ನವಶಕ್ಕೆ ತೆಗೆದುಕೊಳ್ಳುತ್ತದೆ.

*** ಇದನ್ನು 'ಸ್ಫೂರ್ತಿ' ಎನ್ನಬಹುದೇ?**

ಇಲ್ಲ. ಸ್ಫೂರ್ತಿಯ ಪರಿಕಲ್ಪನೆಯೇ ಬೇರೆ. ಸ್ಫೂರ್ತಿ ಅನಿರೀಕ್ಷಿತವಾಗಿ ಒದಗಿಬರುವ ಒಂದು ಆವೇಶದ ಸ್ಥಿತಿ. ನಾನು ವಿವರಿಸುವ 'ಧ್ಯಾನಶೀಲ ಸ್ಥಿತಿ' ಇದಕ್ಕಿಂತ ಭಿನ್ನ. ಕವಿ ಇಂಥ 'ಸ್ಥಿತಿ'ಯನ್ನು ಪಡೆದುಕೊಳ್ಳಬಲ್ಲ. ಕವಿತೆಯ ರಚನೆಯ ಈ 'ಧ್ಯಾನಶೀಲ ಸ್ಥಿತಿ' ಅನಿರೀಕ್ಷಿತವಲ್ಲ. ಕವಿ ಸ್ವಪ್ರಯತ್ನದಿಂದ ಇದನ್ನು ಸಾಧಿಸಬೇಕಷ್ಟೆ. ಕವಿ ಮನಸ್ಸು ಇಂಥ ಸ್ಥಿತಿಗೆ ಹೋಗಲು ಸಾಧ್ಯವಾದಾಗ ಕವಿತೆಯ ಸೃಷ್ಟಿ ಸಾಧ್ಯ.

*** ಒಂದು ಒಳ್ಳೆಯ ಕವಿತೆಯನ್ನು ಗುರ್ತಿಸುವುದು ಹೇಗೆ? ಯಾವುದು ಒಳ್ಳೆಯ ಕವಿತೆ?**

ಇದು ಮುಖ್ಯವಾಗಿ ಅನುಭವಕ್ಕೆ ಸಂಬಂಧಪಟ್ಟ ಸಂಗತಿ. ಒಂದು ಒಳ್ಳೆಯ ಕವಿತೆ ನಮ್ಮ ವ್ಯಕ್ತಿತ್ವದ ಮೂಲವನ್ನು ಮುಟ್ಟಿ ಬರುತ್ತದೆ. ನಮ್ಮ ಮನಸ್ಸನ್ನು ಗಾಢವಾಗಿ ಕಾಡುತ್ತದೆ. ಒಂದು ಒಳ್ಳೆಯ ಕವಿತೆಯನ್ನು ಓದಿದಾಗ ನಮ್ಮ ವ್ಯಕ್ತಿತ್ವಕ್ಕೆ ಹೊಸ ಅಂಶವೊಂದು ಸೇರಿದ ಅನುಭವವಾಗುತ್ತದೆ. ಇದನ್ನು ಸ್ಪಷ್ಟ ಮಾತುಗಳಲ್ಲಿ ವಿವರಿಸುವುದು ಕಷ್ಟ. ಆದರೆ ಏನನ್ನೋ ಪಡೆದಂತೆ ಅನ್ನಿಸುತ್ತದೆ, ಕೃತಜ್ಞತೆಯ ಭಾವ ಮೂಡಿಸುತ್ತದೆ.

*** ವಿಮರ್ಶೆ-ಸೃಜನಶೀಲತೆಯ ಸಂಬಂಧದ ಬಗ್ಗೆ ನಿಮಗೆ ಏನನ್ನಿಸುತ್ತದೆ?**

ನಿಜವಾದ ಕವಿ ವಿಮರ್ಶಕನನ್ನು ಅವಲಂಬಿಸಿರುವುದಿಲ್ಲ. ಸೃಜನಶೀಲ ಸಂದರ್ಭದಲ್ಲಿ ಅಂದರೆ ಕಾವ್ಯರಚನೆಯ ಸಂದರ್ಭದಲ್ಲಿ ಆತ ಎಲ್ಲ ಉಪಾಧಿಗಳಿಂದ ವಿಮರ್ಶಕನಿಂದಲೂ ಮುಕ್ತನಾಗಿರುತ್ತಾನೆ. ಆದರೆ ಕೃತಿಯ ಅರ್ಥೈಸುವಿಕೆಯ ನೆಲೆಯಲ್ಲಿ, ಸಂವಹನದ ಸಂದರ್ಭದಲ್ಲಿ ವಿಮರ್ಶೆ ಅಗತ್ಯವಷ್ಟೆ.

*** ಈಗ ವಿಮರ್ಶೆ ಸೃಜನಶೀಲತೆಯ ಮೇಲೆ ಆಕ್ರಮಣ ಮಾಡುತ್ತಿದೆ ಎಂಬ ಅಭಿಪ್ರಾಯವಿದೆ. ಇದು ನಿಜವೇ?**

ಮೊದಲು ಕನ್ನಡದಲ್ಲಿ ವಿಮರ್ಶೆ ಅರ್ಥೈಸುವ ನೆಲೆಯಲ್ಲಿತ್ತು. ನವೋದಯ ಸಂದರ್ಭದಲ್ಲಿ, ಅಷ್ಟೇಕೆ, ನವ್ಯದ ಸಂದರ್ಭದಲ್ಲೂ ವಿಮರ್ಶೆ ಕೃತಿಯನ್ನು ವಿವರಿಸುವ, ಅರ್ಥೈಸುವ ಕೆಲಸ ಮಾಡುತ್ತಿತ್ತು. ಆದ್ದರಿಂದ ಸೃಜನಶೀಲತೆಗೆ ಪೂರಕ, ಪೋಷಕ ಎಂಬ ನಂಬಿಕೆಯಿತ್ತು. ಈಗ ಕನ್ನಡದಲ್ಲಿ ವಿಮರ್ಶೆ ಒಂದು ಹಂತ ತಲುಪಿದೆ. ಸಾಕಷ್ಟು ಸಮೃದ್ಧವಾಗಿ ಬೆಳೆದಿದೆ. ಮೌಲ್ಯಮಾಪನದ ನೆಲೆಯಲ್ಲಿದೆ. ಹೀಗಾಗಿ ಈ ಭಾವ ಮೂಡಿರಬಹುದಷ್ಟೆ.

*** ಸಾಹಿತ್ಯ ಮತ್ತು ರಾಜಕೀಯ ಸಂಬಂಧದ ಸ್ವರೂಪದ ಬಗ್ಗೆ ನಿಮ್ಮ ನಿಲುವು?**

ಇದೊಂದು ಸೂಕ್ಷ್ಮ ಪ್ರಶ್ನೆ. ಸದ್ಯದ ಪರಿಸ್ಥಿತಿಯಲ್ಲಿ ನಮ್ಮ ಸಾಹಿತಿಗಳು ರಾಜಕೀಯ ಶಕ್ತಿಗೆ ಶರಣಾಗಿದ್ದಾರೇನೋ ಎಂಬ ಸಂಶಯ ನನಗೆ ಮೂಡುತ್ತಿದೆ; ಆತಂಕವಾಗುತ್ತಿದೆ. ವೈಯಕ್ತಿಕ ಪ್ರತಿಭಟನೆ ಅಲ್ಲಲ್ಲಿ ದಾಖಲಾಗಿರಬಹುದು. ಆದರೆ ಸಂಘಟಿತವಾಗಿ ಸಾಂಸ್ಕೃತಿಕ ಕ್ಷೇತ್ರದ ಮೇಲೆ ರಾಜಕೀಯದ ಅನಗತ್ಯ ಪ್ರವೇಶವನ್ನು ಪ್ರತಿಭಟಿಸುವ ಗಂಭೀರ ಪ್ರಯತ್ನಗಳು ನಡೆದಂತಿಲ್ಲ. ನಮ್ಮ ಸಾಂಸ್ಕೃತಿಕ ಸಂಸ್ಥೆಗಳು ಈ ದಿಕ್ಕಿನಲ್ಲಿ ಸಕ್ರಿಯವಾಗುವ ಆಗತ್ಯವಿದೆ. ಆದರೆ ನಮ್ಮ ಎಲ್ಲ ಸಾಂಸ್ಕೃತಿಕ ಸಂಸ್ಥೆಗಳು ಈಗ ಜಡವಾಗಿವೆ ಅಥವಾ ಮುಖ್ಯ ಸಮಸ್ಯೆಯನ್ನು ಎದುರಿಸದೆ ಅನಾಸಕ್ತಿ ತಾಳಿವೆ.

(ಕಣವಿಯವರಿಗೆ ಸುತ್ತಮುತ್ತಲಿನ ಅನೇಕ ಸಂಗತಿಗಳ ಬಗ್ಗೆ ಅಸಮಾಧಾನವಿದೆ. ಸಿಟ್ಟೂ ಇದೆ. ತಮ್ಮ ಸಜ್ಜನಿಕೆಯಿಂದಾಗಿಯೇ ಕೆಲವೊಮ್ಮೆ ತಾವು ಮೌನವಾಗಿ ಉಳಿದುಬಿಡುವುದರ ಬಗ್ಗೆ ಅವರು ತಮ್ಮ ನೆನಪನ್ನು ನನ್ನೊಡನೆ ಹಂಚಿಕೊಂಡರು. 'ಸಾತ್ವಿಕ ಶಕ್ತಿ ಕ್ರಿಯಾಶೀಲವಾಗಬೇಕೆಂಬ'ನನ್ನ ಅಭಿಪ್ರಾಯದ ಬಗ್ಗೆ ಸಹಮತ ವ್ಯಕ್ತಪಡಿಸಿ, ಇಂಥ ಪ್ರಯತ್ನಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವ ಹಂಬಲ ವ್ಯಕ್ತಪಡಿಸಿದರು. ಪ್ರತಿಭಟನೆಯ ಸಂದರ್ಭ ಬಂದಾಗ ತಾವು ಎಂದೂ ಹಿಂಜರಿದಿಲ್ಲ ಎಂಬ ಅಂಶವನ್ನೂ ಪ್ರಸ್ತಾಪಿಸಿದರು.)

*** ನಮ್ಮ ಪರಂಪರೆಯ ಬಗ್ಗೆ ಯುವ ಮನಸ್ಸುಗಳಿಗೆ ಅರಿವು ಮೂಡಿಸುವುದರ ಅಗತ್ಯ ಹಾಗೂ ಆ ಸಾಧ್ಯತೆಯ ಬಗೆಗೆ.....?**

ಇದು ನಮ್ಮ ಇಂದಿನ ಬಹುಮುಖ್ಯ ಅಗತ್ಯ. ನಮ್ಮ ಬಗ್ಗೆ ನಾವು ಸರಿಯಾಗಿ ತಿಳಿದುಕೊಳ್ಳುವ ಅಗತ್ಯವಿದೆ. ನಮ್ಮಲ್ಲಿ 'ಪರಂಪರೆ'ಎಂದರೆ ಒಂದು ಬಗೆಯ 'ಭಾವನಾತ್ಮಕ'ಸಂಬಂಧವಿದ್ದು ಆ ಬಗ್ಗೆ ವಸ್ತುನಿಷ್ಠ ಅರಿವೇ ಇಲ್ಲದಂತಾಗಿ ಬಿಟ್ಟಿದೆ. 'ಚಾರಿತ್ರಿಕ ಪ್ರಜ್ಞೆ' ಜಾಗೃತವಾಗಬೇಕಿದೆ. ಅಂದಮಾತ್ರಕ್ಕೆ-

'ಪರಂಪರೆ'ಯ ಅರಿವು ಕೇವಲ ಚಾರಿತ್ರಿಕವಾದುದು ಮಾತ್ರವಲ್ಲ. ನಮ್ಮ ಸಾಂಸ್ಕೃತಿಕ ಆಚರಣೆಗಳೂ ಪರಂಪರೆಯ ಒಂದು ಭಾಗ. ಅವುಗಳು ಈಗ ಕೇವಲ ರಿಚ್ಯುಯಲ್‌ಗಳಾಗಿ ಬಿಟ್ಟಿವೆ. ನಮ್ಮ ಹಬ್ಬಗಳನ್ನೇ ನೋಡಿ. ಅವುಗಳ ಆಚರಣೆ ಈಗ ಹೇಗೆ ಯಾಂತ್ರಿಕವಾಗಿ ಬಿಟ್ಟಿದೆ. ಚಿಕ್ಕಂದಿನಲ್ಲಿ ನಾವು ನಮ್ಮ ಸಾಂಸ್ಕೃತಿಕ ಆಚರಣೆಗಳ ಮೂಲಕ ಪಡೆದುಕೊಂಡದ್ದು ಅಪಾರ. ಆ ಬಗೆಯ ಆಚರಣೆಯೇ ಈಗ ಮರೆಯಾಗಿ ಬಿಡುತ್ತಿದೆ. ಹಬ್ಬಗಳು ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಬಹಳ ಮುಖ್ಯವಾದವು ಎಂಬುದನ್ನು ನಾವು ಮರೆಯಬಾರದು.

*** 'ದೇವರ' ಕಲ್ಪನೆ ನಮ್ಮ ಬದುಕಿನಲ್ಲಿ ದಟ್ಟವಾಗಿ ಬೇರೂರಿರುವಂಥದು; ಅದು ಬಹಳಷ್ಟು ಸಲ ಮೂಢನಂಬಿಕೆನಗಳೂ ಕಾರಣವಾಗುವಂಥದು. ಜನಮನದಲ್ಲಿ ದೇವರ ಬಗ್ಗೆ ಇರುವ ಈ ಬಗೆಯ ಅಚಲ 'ನಂಬಿಕೆ'ಗೆ ಕಾರಣವೇನು?**

ಭಯ ಮತ್ತು ಅಸ್ಥಿರತೆಯೇ ಇದಕ್ಕೆ ಮುಖ್ಯ ಕಾರಣ. ಮನುಷ್ಯನಿಗೆ ಸಂಕಷ್ಟದ ಸಮಯದಲ್ಲಿ ದುರ್ಬಲ ಗಳಿಗೆಗಳಲ್ಲಿ ಒಂದು ಆಸರೆ ಬೇಕಾಗುತ್ತದೆ. ಈ ಆಸರೆಯ ಮೂರ್ತ ರೂಪವೇ 'ದೇವರು.'

ನನ್ನ ಪ್ರಕಾರ ದೇವರೆಂದರೆ ಕೆಲವು ಗುಣಗಳ ಮೊತ್ತ. ನಮ್ಮಲ್ಲಿ ಈಗಲೂ 'ದೇವರಂತಹ ಮನುಷ್ಯ' ಎಂಬ ಮಾತಿದೆ. ಅಂದರೆ ಕೆಲವು ಮೌಲ್ಯಗಳನ್ನು ಆತ ಪ್ರತಿನಿಧಿಸುತ್ತಾನೆ ಎಂಬ ಅರ್ಥದಲ್ಲಿ ಇದನ್ನು ನಾವು ಬಳಸುತ್ತಿದ್ದೇವೆ. ಇದೊಂದು ರೀತಿಯಲ್ಲಿ ಮನುಷ್ಯ ಗಳಿಸಿಕೊಳ್ಳುವ ಅರ್ಹತೆಯೂ ಹೌದು.

ಹೀಗಾಗಿ ದೇವರೆಂದರೆ ಆಡಂಬರದ ಪೂಜೆಯಲ್ಲ, ಬದಲಿಗೆ ವ್ಯಕ್ತಿತ್ವದಲ್ಲಿ ಅಳವಡಿಸಿಕೊಳ್ಳಬೇಕಾದ ಕೆಲವು ಉತ್ತಮ ಗುಣಗಳು.

*** ಕನ್ನಡ ಭಾಷಾ ಚಳುವಳಿಯಲ್ಲಿ ನೀವು ಸಕ್ರಿಯವಾಗಿ ಪಾಲ್ಗೊಂಡಂಥವರು. ಕನ್ನಡದ ಸ್ಥಿತಿ ಉತ್ತಮಗೊಳ್ಳಲು ಏನು ಮಾಡಬೇಕು?**

ಇದಕ್ಕೆ ಮುಖ್ಯವಾಗಿ 'ರಾಜಕೀಯ ಸಂಕಲ್ಪ' ಇರಬೇಕು. ರಾಜಕೀಯ ಸಂಕಲ್ಪ ಶಕ್ತಿ ಇಲ್ಲದಿದ್ದರೆ ಕನ್ನಡದ ಬೆಳವಣಿಗೆ ಕಷ್ಟವೆಂದೇ ನನಗೆ ತೋರುತ್ತಿದೆ. ಕನ್ನಡ ನಾಡು-ನುಡಿಗಾಗಿ, ಕನ್ನಡದ ಸಮಸ್ಯೆಗಾಗಿ ನಮ್ಮ ಯಾವ ಮಂತ್ರಿಯಾಗಲೀ, ಶಾಸಕರಾಗಲೀ ಪ್ರತಿಭಟಿಸಿ ರಾಜೀನಾಮೆ ನೀಡಿದ ಒಂದು ಉದಾಹರಣೆಯೂ ನಮಗೆ ಸಿಗುವುದಿಲ್ಲ. ಕನ್ನಡದ ಸಮಸ್ಯೆ ಸಹ ಸ್ವಾರ್ಥ ರಾಜಕೀಯದ ಒಂದು ಅಂಶವಾಗಿ ಬಿಟ್ಟಿರುವ ಒಂದು ದುರಂತವೇ ಸರಿ.

*** ಸಾಹಿತ್ಯ-ಸಂಗೀತ ಇವುಗಳ ಸಂಬಂಧದ ಸ್ವರೂಪದ ಬಗ್ಗೆ ನಿಮ್ಮ ಅಭಿಪ್ರಾಯ?**

ಸಾಹಿತ್ಯ ಮತ್ತು ಸಂಗೀತ ಇವೆರಡೂ ಪ್ರತ್ಯೇಕ ಕಲೆಗಳು. ಅವೆರಡೂ ಪ್ರತ್ಯೇಕವಾಗಿಯೇ ಬೆಳೆಯಬೇಕು, ಸ್ವತಂತ್ರವಾಗಿಯೇ ಅಭಿವೃದ್ಧಿ ಹೊಂದಬೇಕು. 'ಸುಗಮ ಸಂಗೀತ' ಇವೆರಡನ್ನೂ ಬೆಸೆಯುವ ಪ್ರಯತ್ನ. ಇದರಿಂದ ಉಪಯೋಗವಾಗುವುದಾದರೆ ಅಡ್ಡಿಯಿಲ್ಲ. ಜನಸಾಮಾನ್ಯರಿಗೆ ಇದರಿಂದ ಅನುಕೂಲ ಆಗಬಹುದು. ಆದರೆ ಸಂಗೀತದ ಬೆಳವಣಿಗೆಗಾಗಲೀ, ಸಾಹಿತ್ಯದ ಬೆಳವಣಿಗೆಗಾಗಲೀ ಇದರಿಂದ ಮಹತ್ವದ ಪ್ರಯೋಜನವಾದೀತೆಂದು ನನಗನ್ನಿಸುವುದಿಲ್ಲ.

ಕಣವಿಯವರು ಸಾಂಸ್ಕೃತಿಕ ವಲಯದಲ್ಲಿ ಎಲ್ಲರ ಪ್ರೀತಿ-ಗೌರವಗಳಿಗೆ

ಪಾತ್ರರಾಗಿರುವಂಥವರು. ತಮ್ಮ ಸಾಹಿತ್ಯ ಸಾಧನೆಯ ಬಗ್ಗೆ, ಜನತೆ ತೋರಿರುವ ಪ್ರೀತಿಯ ಬಗ್ಗೆ ಅವರಿಗೆ ತೃಪ್ತಿಯಿದೆ. ಕೌಟುಂಬಿಕವಾಗಿ ಅವರದು ನೆಮ್ಮದಿಯ ಬದುಕು. ಸಾಹಿತ್ಯ-ಸಂಸ್ಕೃತಿಯ ಬಗ್ಗೆ ಮಾತನಾಡುವಷ್ಟೇ ಆಸಕ್ತಿಯನ್ನು ಅವರು ವೈಯಕ್ತಿಕ ಬದುಕಿನ ಬಗ್ಗೆ ಮಾತನಾಡುವಾಗಲೂ ಪ್ರಕಟಿಸುತ್ತಾರೆ. ಶುಚಿ-ಸದಭಿರುಚಿಯ ಬದುಕಿಗೆ ಮಾದರಿಯಂತಿರುವ ಕಣವಿಯವರೊಂದಿಗೆ ಮಾತನಾಡುವುದೇ ಒಂದು ವಿಶಿಷ್ಟ ಅನುಭವ.

**ತುಷಾರ,** ಏಪ್ರಿಲ್ ೧೯೯೮*

*

# ಪಂಪ ವೃಕ್ಷದ ಇನ್ನೊಂದು ಫಲ

● ಹೇಮಾ ಪಟ್ಟಣಶೆಟ್ಟಿ

"ಭಾವಜೀವಿಯು ನಾನು ನನ್ನೆದೆಯ ನಂಬಿರುವ / ತುಂಬಿರುವ ಕನಸುಗಳೆ ಕಲ್ಪವಕ್ಷ" ಎಂದು ಹಾಡಿದ ಚೆನ್ನವೀರ ಕಣವಿಯವರ ಕನಸು-ಕಲ್ಪವೃಕ್ಷದ ಇನ್ನೊಂದು ಫಲ ಈಗ ೧೯೯೭ರ ಪಂಪ ಪ್ರಶಸ್ತಿ ರೂಪದಲ್ಲಿ ಅವರಿಗೆ ಲಭಿಸಿದೆ. ಇದು ಪ್ರೊ.ಸಂ.ಶಿ. ಭೂಸನೂರಮಠ ಮತ್ತು ಡಾ. ಎಂ.ಎಂ. ಕಲಬುರ್ಗಿಯವರ ನಂತರ ಧಾರವಾಡಕ್ಕೆ ಸಂದ ಮೂರನೆಯ ಗೌರವ.

ಐವತ್ತು ವರ್ಷಗಳಿಂದ ನಿರಂತರವಾಗಿ ನಿಷ್ಠೆಯಿಂದ ಕಾವ್ಯೋದ್ಯೋಗದಲ್ಲಿ ತೊಡಗಿದ ಕಣವಿಯವರು ಅನೇಕ ಉತ್ತಮ ಕವಿತೆಗಳನ್ನು ರಚಿಸಿ ಆಧುನಿಕ ಕಾವ್ಯ ಸಂದರ್ಭದ ಮಹತ್ವದ ಕವಿಗಳಲ್ಲಿ ಒಬ್ಬರಾಗಿದ್ದಾರೆ. ಇವರ ಆರಂಭದ ಕವಿತೆಗಳಲ್ಲಿ ಆದರ್ಶಪ್ರಿಯತೆ, ರಮ್ಯ ಮನೋಭಾವ, ನಿಸರ್ಗ ಪ್ರೀತಿ, ವ್ಯಕ್ತಿತ್ವ ನಿರ್ಮಾಣದ ಅಭೀಪ್ಸೆ ಗಮನ ಸೆಳೆಯುತ್ತದೆ. ೧೯೫೩ರಲ್ಲಿ ಪ್ರಕಟಗೊಂಡ ಅವರ ಮೂರನೆಯ ಸಂಕಲನ 'ಆಕಾಶಬುಟ್ಟಿ'ಯಲ್ಲಿ ಕಣವಿಯವರ ಆಸಕ್ತಿಯ ಕ್ಷಿತಿಜ ವಿಸ್ತಾರಗೊಂಡಿದೆ. ಕವಿದೃಷ್ಟಿ ಸಾಮಾಜಿಕ ಅಂಶಗಳತ್ತ ಹರಿದಿದೆ. ಸಮಾಜದ ಲೋಪ-ದೋಷಗಳು ವಿಡಂಬನೆಗೆ ಗುರಿಯಾಗಿವೆ. ಅದರಿಂದ ಸಹಜವಾಗಿಯೇ ವ್ಯಂಗ್ಯದ ಧಾಟಿಯನ್ನು ಪಡೆದಿವೆ. ಮುಂದೆ ನವ್ಯದ ಭಾಷಾ ಬಳಕೆ, ಲಯದ ಸಾಧ್ಯತೆ, ಅನುಭವಗಳನ್ನು ಒರೆಗೆ ಹಚ್ಚಿ ನೋಡುವ ರೀತಿಗಳನ್ನು ಇವರು ಪ್ರಜ್ಞಾಪೂರ್ವಕವಾಗಿ ಸ್ವೀಕರಿಸಿದರು. ಅಲ್ಲಿಯ ವಿಷಾದ, ಒಂಟಿತನ, ಕಾಮದ ಭರಾಟೆ, ಹರಿತ ವ್ಯಂಗ್ಯಗಳು ಇವರ ಸ್ವಭಾವಕ್ಕೆ ಅತೀತವಾದದ್ದರಿಂದ ಅವುಗಳನ್ನು ನಿರಾಕರಿಸಿದರು. ಬದುಕಿನಲ್ಲಿ ಸ್ನೇಹ, ಪ್ರೀತಿ, ಸಹನೆಗಳನ್ನು ಮೌಲ್ಯಗಳೆಂದು ಭಾವಿಸುವ ಕಣವಿಯವರು ಕಟುತ್ವ ಕಹಿಗಳಿಂದ ದೂರವೇ ಉಳಿದಿದ್ದಾರೆ.

"ಅಲ್ಲಸಲ್ಲದ ವಿಷಮ ವಿಪರೀತ ಭಾವನೆಯ
ವಿಷಗಾಳಿ ಎನ್ನ ಬಳಿ ಸುಳಿಯದಿರಲಿ,

ಸೊಲ್ಲು ಸೊಲ್ಲಿಗೆ ಪರರನಣಕಿಸುವ ಕೆಣಕಿಸುವ
ಅಶಿವ ನುಡಿ ಎನ್ನ ಕಿವಿ ಸೇರದಿರಲಿ!"

ಎಂದು ಬಯಸುವ ಕಣವಿ ಜೀವನದುದ್ದಕ್ಕೂ ಹಾಗೆಯೇ ನಡೆದುಕೊಂಡಿದ್ದಾರೆ.

ತಮಗಿಂತ ಹಿರಿಯರಲ್ಲಿ ಆದರ ಭಾವ, ಕಿರಿಯರಲ್ಲಿ ವಾತ್ಸಲ್ಯಮಯತೆ ಹಾಗೂ ಸರೀಕರಲ್ಲಿ ನಿರ್ಮಲ ಸ್ನೇಹ ತೋರುತ್ತ ಬಂದಿದ್ದಾರೆ. ಅಂತೆಯೇ ಸಾಹಿತ್ಯಿಕ ಸಾಂಸ್ಕೃತಿಕ ವಲಯಗಳಲ್ಲಿ ಅವರೊಬ್ಬ ಅಪರೂಪದ ವ್ಯಕ್ತಿ ಎನಿಸಿದ್ದಾರೆ. ಸರಳತೆ, ಸಜ್ಜನಿಕೆ, ಅಚ್ಚುಕಟ್ಟುತನ, ಸೌಜನ್ಯ, ಶುಚಿತ್ವ, ಅನಸೂಯೆ ಅವರ ವ್ಯಕ್ತಿತ್ವಕ್ಕೆ ಕಾಂತಿಯನ್ನಿತ್ತಿವೆ. ನಿಸರ್ಗ ಸೌಂದರ್ಯ, ಜನತೆಯ ಪ್ರೀತಿ, ಮಾನವೀಯತೆಗಳಿಗೆ ಅವರು ತಮ್ಮ ಜೀವನದಲ್ಲಿ ವಿಶೇಷ ಪ್ರಾಧಾನ್ಯತೆ ನೀಡುತ್ತ ಬಂದಿದ್ದಾರೆ. ಜೀವನದ ಮೌಲ್ಯಗಳೆಂದು ಆರಾಧಿಸಿದ್ದಾರೆ. ಕವಿಯ ಮೌಲ್ಯಗಳೇ ಅವನ ಕಾವ್ಯ ಮೌಲ್ಯಗಳಾಗುವುದು ಸ್ವಾಭಾವಿಕ. ಆದರೆ ಇತ್ತೀಚಿನ ದಿನಗಳಲ್ಲಿ ಬದುಕು-ಬರೆಹಗಳಲ್ಲಿ ಈ ತಾದಾತ್ಮ್ಯ ಕಾಣುವುದು ವಿರಳವಾಗಿದೆ. ಇಂಥ ಸಂದರ್ಭದಲ್ಲಿ ನಡೆ-ನುಡಿ-ಬರೆಹಗಳಲ್ಲಿ ಏಕಾತ್ಮಕತೆಯನ್ನು ಸಾಧಿಸಿದ ಕಣವಿ ನಿಜಕ್ಕೂ ಆದರ್ಶಪ್ರಾಯರಾಗಿದ್ದಾರೆ.

ನಿರಂತರವಾಗಿ ತೊರೆ ಮೊರೆತ, ಹಚ್ಚ ಹಸುರಿನ
ಕಣಿವೆ. ಗುಡುಗು ಮಿಂಚುಗಳ ಗದ್ದಲವಿರದ
ಶ್ರಾವಣದ ಬೆಳ್ಮೋಡಗಳ ಹಾಯಾಗಿ ಹರಡಿ-
ಕೊಂಡಾಕಾಶ.

ಎಂದು ಕವಿ ಜಿ.ಎಸ್. ಶಿವರುದ್ರಪ್ಪನವರು ಕವನಿಸಿದ್ದು ಕಣವಿಯವರ ವ್ಯಕ್ತಿತ್ವ ಹಾಗೂ ಕವಿತ್ವ ಎರಡನ್ನೂ ನಿರ್ವಚಿಸುತ್ತದೆ.

ಕಣವಿಯವರು ಹೊಸ ಹೊಸ ಕಾವ್ಯ ಪ್ರಯೋಗಗಳಿಗೆ ತಮ್ಮನ್ನು ತೆರೆದುಕೊಂಡಿದ್ದಾರೆ. ಅವರ 'ಮಣ್ಣಿನ ಮೆರವಣಿಗೆ', 'ಶಿಶು ಕಂಡ ಕನಸು', 'ಕಾಲ ನಿಲ್ಲುವುದಿಲ್ಲ' ಮೊದಲಾದವುಗಳನ್ನು ಈ ನಿಟ್ಟಿನಲ್ಲಿ ಗಮನಿಸಬಹುದು.

ಮೊದಲಿನಿಂದಲೂ ಕಣವಿಯವರಿಗೆ ಅಷ್ಟಷಟ್ಪದಿ-ಸಾನೆಟ್ ಪ್ರಿಯವಾದ ಪ್ರಕಾರವಾಗಿದೆ. ಈ ಕಾವ್ಯಶಿಲ್ಪದಲ್ಲಿ ಅವರ ಸಾಧನೆ ಅಪ್ರತಿಮವಾದುದು. 'ಮುಕ್ತ ಛಂದದಲ್ಲಿ ಬರೆಯುವಾಗ ವಾಚಾಳಿತನಕ್ಕೀಡಾಗುವ ಅಪಾಯದಿಂದ ಪಾರಾಗಲು ಕಣವಿಯವರ ಕಾವ್ಯ ಪ್ರತಿಭೆ ಕಂಡುಕೊಂಡ ಚಿಕಿತ್ಸಕ ಕ್ರಮ ಸಾನೆಟ್' ಎಂದು ಶಾಂತಿನಾಥ ದೇಸಾಯಿಯವರು ಹೇಳಿದ್ದು ಅರ್ಥಪೂರ್ಣವಾದ ಮಾತು. ಕನ್ನಡದಲ್ಲಿ ಹೆಚ್ಚು ಸಂಖ್ಯೆಯಲ್ಲಿ ಸುನೀತಗಳನ್ನು ರಚಿಸಿದವರು ಕಣವಿಯವರೇ.

ಕಣವಿ ಕಾವ್ಯ ಬತ್ತದ ಒರತೆಯ ಹಾಗೆ ನಿರಂತರತೆ ಮತ್ತು ಶುಚಿತ್ವವನ್ನು ಕಾಪಾಡಿಕೊಂಡು ಬಂದಿದೆ. ಅವರ ಕಾವ್ಯಸೆಲೆ ಸದಾ ಜೀವಂತವಾಗಿದೆ. ಆಕ್ರೋಶರಹಿತವಾದ ಒಂದು ಸಮಾಧಾನದ ದಾಟಿ ಅವರ ಕವನದುದ್ದಕ್ಕೂ ಕಂಡುಬರುತ್ತದೆ. ಮೆಲುದನಿ ಅವರು ಕಾವ್ಯದ ಜೀವಾಳ.

ಮುಂಜಾವದಲಿ ಹಸಿರು ಹುಲ್ಲು ಮಕಮಲ್ಲಿನಲಿ
ಪಾರಿಜಾತವು ಹೂವ ಸುರಿಸಿದಂತೆ
ಮುಟ್ಟಿದರೆ ಮಾಸುತಿಹ ಮಂಜು ಹನಿ ಮುತ್ತಿನಲಿ
ಸೃಷ್ಟಿ ಸಂಪೂರ್ಣತೆಯ ಬಿಂಬಿಪಂತೆ

ನಾವು ಆಡುವ ಮಾತು ಹೀಗಿರಲಿ ಗೆಳೆಯ
ಮೃದು ವಚನ ಮೂಲೋಕ ಗೆಲ್ಲುವುದು ತಿಳಿಯ.

ಕಣವಿಯವರು ವಿಮರ್ಶೆಯನ್ನೂ ಬರೆದಿದ್ದಾರೆ. ಆದರೆ ಪ್ರಧಾನವಾಗಿ ಅವರು ಕವಿ. ಅವರ ಕಾವ್ಯ ಸಾಧನೆಯನ್ನು ಗುರುತಿಸಿ ಕನ್ನಡ ನಾಡು ಅವರಿಗೆ ಅನೇಕ ಗೌರವ-ಪ್ರಶಸ್ತಿಗಳನ್ನು ನೀಡಿ ಸನ್ಮಾನಿಸಿದೆ. ಕರ್ನಾಟಕ ಸಾಹಿತ್ಯ ಅಕಾಡೆಮಿ ಗೌರವ ಪ್ರಶಸ್ತಿ, ಕೇಂದ್ರಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ೬೫ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ, ನಿಡುಮಾಮಿಡಿ ಜಗದ್ಗುರುಗಳಿಂದ 'ಕವನ ಕಲಾರವಿ'ಪ್ರಶಸ್ತಿ ಹಾಗೂ ಚಿನ್ನದ ಪದಕ. ಚಿತ್ರದುರ್ಗ ಬೃಹನ್ಮಠದ 'ಸಾಹಿತ್ಯ ಭಾಸ್ಕರ'ಪ್ರಶಸ್ತಿ -ಹೀಗೆ ಈ ಪಟ್ಟಿ ಬೆಳೆಯುತ್ತಲೇ ಹೋಗುತ್ತದೆ. ಕಣವಿಯವರಿಗೆ ಐವತ್ತು ತುಂಬಿದಾಗ 'ಚೆಂಬೆಳಕು' ಅಭಿನಂದನ ಗ್ರಂಥ, ಎಪ್ಪತ್ತು ತುಂಬಿದಾಗ 'ಮುಗಿಯದ ಹಾಡು' ಕಾವ್ಯಾಭಿನಂದನ ಗ್ರಂಥ ಅರ್ಪಿಸಲಾಗಿದೆ. ಎಲ್ಲಕ್ಕಿಂತ ಮುಖ್ಯವಾದ ಸಮ್ಮಾನವೆಂದರೆ ಸಹೃದಯ ಓದುಗರ ಪ್ರೀತಿ, ಅಭಿಮಾನಗಳೆಂದು ಕಣವಿ ಅವರು ನಂಬಿದ್ದಾರೆ.

ಚೆನ್ನವೀರ ಕಣವಿ ಹುಟ್ಟಿದ್ದು ಗದಗ ತಾಲೂಕಿನ ಹೊಂಬಳ ಗ್ರಾಮದಲ್ಲಿ ೧೯೨೮ ಜೂನ್ ೨೮ರಂದು. ಬೆಳೆದದ್ದು ಶಿರುಂಜ ಗ್ರಾಮದಲ್ಲಿ. ಅಲ್ಲಿ ತಂದೆ ಸಕ್ಕರೆಪ್ಪನವರು ಪ್ರಾಥಮಿಕ ಶಾಲಾ ಮಾಸ್ತರರಾಗಿದ್ದರು. ಆಚಾರ ವಿಚಾರಗಳಲ್ಲಿ ಕಟ್ಟುನಿಟ್ಟಿನವರು, ಸಜ್ಜನರು, ಸಾಹಿತ್ಯದಲ್ಲಿ ಆಸಕ್ತಿ ಹೊಂದಿದವರು. ತಾಯಿ ಪಾರ್ವತಮ್ಮ ವಿಶಾಲ ಹೃದಯಿ, ಕೆಲಸದಲ್ಲಿ ತುಂಬ ಅಚ್ಚುಕಟ್ಟು. ಇವರಿಬ್ಬರ ಸ್ವಭಾವಗಳ ಮಿಳಿತ ಚೆನ್ನವೀರ. ಗ್ರಾಮೀಣ ಪರಿಸರದಲ್ಲಿ ಲಭ್ಯವಾಗುವ ಹಲವು ಶ್ರೀಮಂತ ಅನುಭವಗಳು ಕಣವಿಯವರಿಗೆ ದಕ್ಕಿವೆ. ಅಂತೆಯೇ ಅವರ ಕವಿತೆಗಳಲ್ಲಿ ಗ್ರಾಮ್ಯಭಾವ ಪ್ರತೀಕಗಳು ಸಶಕ್ತವಾಗಿ ಮೈದಾಳಿವೆ.

ಚಿಕ್ಕಂದಿನಲ್ಲಿ ತಮ್ಮ ಮನೆ ಎದುರಿನ ಅರಳೆ ಮರದಲ್ಲಿ ಸಂಜೆ ಹೊತ್ತು ಕಿಲಿಕಿಲಿಗುಟ್ಟುತ್ತ ಗಿಳಿಗಳು ಉದುರಿಸಿದ ಪುಚ್ಚಗಳನ್ನಾಯ್ದು ತಮ್ಮ ಪುಸ್ತಕದಲ್ಲಿ ಇಡುತ್ತಿದ್ದಂತೆಯೇ ಈಗಲೂ ಕಣವಿ ತಮ್ಮ ಕೋಮಲ, ಬೆಚ್ಚನ್ನ ಭಾವಗಳ ಕುತನಿ ಅನುಭವಗಳನ್ನು ಕಾವ್ಯ ಹೊತ್ತಿಗೆಯಲ್ಲಿ ಜೋಪಾನ ಮಾಡುತ್ತ ಬಂದಿದ್ದಾರೆ.

ಗರಗದಲ್ಲಿ ಮಾಧ್ಯಮಿಕ ಶಿಕ್ಷಣವನ್ನು ಮುಗಿಸಿದ ಕಣವಿಯವರು ಮುಲ್ಕೀ ಪರೀಕ್ಷೆಯಲ್ಲಿ ಜಿಲ್ಲಾ ಕೇಂದ್ರಕ್ಕೆ ಒಂದನೇ ನಂಬರ್ ಪಡೆದು ಪಾಸಾದರು. ಮುಂದೆ ಧಾರವಾಡ ಮುರುಘಾಮಠದ ಉಚಿತ ಪ್ರಸಾದ ನಿಲಯದಲ್ಲಿದ್ದು ಅಭ್ಯಾಸ ಮುಂದುವರಿಸಿದರು. ಆರ್.ಎಲ್.ಎಸ್. ಹೈಸ್ಕೂಲ್‌ದಲ್ಲಿದ್ದು ಎಸ್.ಎಸ್.ಎಲ್.ಸಿ., ಕರ್ನಾಟಕ ಕಾಲೇಜಿನಲ್ಲಿ ಬಿ.ಎ., ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಎಂ.ಎ. ವ್ಯಾಸಂಗ ಮಾಡಿದರು. ಅದೇ ವರ್ಷ ೧೯೫೨ರಲ್ಲಿ ಶಾಂತಾದೇವಿಯವರೊಂದಿಗೆ ಮದುವೆಯೂ ಆಯಿತು. ಗೃಹಸ್ಥರಾದ ಕಣವಿಯವರಿಗೆ ಕರ್ನಾಟಕ ವಿಶ್ವವಿದ್ಯಾಲಯದ ವ್ಯಾಸಂಗ ವಿಸ್ತರಣಾ ಮತ್ತು ಪ್ರಕಟಣಾ ವಿಭಾಗದ ಕಾರ್ಯದರ್ಶಿಯಾಗಿ ಕಾಯಂ ನೌಕರಿ ಸಿಕ್ಕಿತು. ಮುಂದೆ ೧೯೫೬ರಲ್ಲಿ ನಿರ್ದೇಶಕರಾಗಿ ಬಡ್ತಿಹೊಂದಿ, ೧೯೮೩ರಲ್ಲಿ ನಿವೃತ್ತರಾಗುವವರೆಗೆ ಅಲ್ಲಿ ಸೇವೆ ಸಲ್ಲಿಸಿದರು.

ಕಣವಿ ಅವರು ಎಪ್ಪತ್ತರ ಗಡಿ ದಾಟಿದ ಸಂತೋಷದ ಸಂದರ್ಭದಲ್ಲಿ ಡಾ. ಗುರುಲಿಂಗ ಕಾಪಸೆಯವರು ಕಣವಿ ಸ್ನೇಹಿತರಿಂದ, ಆಸಕ್ತರಿಂದ ಕವಿ-ಕಾವ್ಯ ಕುರಿತು ಕವಿತೆಗಳನ್ನು ಬರೆಸಿ ಒಂದು ವಿನೂತನ ಅಭಿನಂದನ ಗ್ರಂಥ ಸಮರ್ಪಿಸಿದ್ದಾರೆ.

ಕಣವಿಯವರ ಗೌರವ ಕಿರೀಟಕ್ಕೆ ಈಗ ಪಂಪ ಪ್ರಶಸ್ತಿಯು ಹೊಸ ಗರಿ ಮೂಡಿದೆ. ಈ ಸಂದರ್ಭದಲ್ಲಿ ಸಂತಸ ಹಂಚಿಕೊಳ್ಳಲು ಸೀದಾ ಅವರ ಮನೆ 'ಚೆಂಬೆಳಕು'ಗೇ ಹೋದೆ. ಕಣವಿ ದಂಪತಿಗಳ ಪ್ರೀತ್ಯಾದರಗಳ ಸ್ವಾಗತ. ನನ್ನ ಹಾರ್ದಿಕ ಅಭಿನಂದನೆಯೊಂದಿಗೆ ಮಾತು ಸುರುವಾಯಿತು.

*** ನಿಮಗ ಪಂಪ ಪ್ರಶಸ್ತಿ ಬಂದದ್ದಕ್ಕ ನಮಗೆಲ್ಲಾ ಭಾಳ ಸಂತೋಷ ಆಗೇದ. ಇದು ಇನ್ನೂ ಸ್ವಲ್ಪ ಮೊದಲs ಬರಬೇಕಿತ್ತು ಅಂತೇನರ ಅನಿಸ್ತೇದ ಏನು ನಿಮಗ?**

ಒಂದು ಶುಭ್ರ ನಗು.

O ನನಗೂ ಸಂತೋಷ ಆಗೇದ. ಆದರ ಮೊದಲs ಬರಬೇಕಿತ್ತು ಅಂತೇನೂ ಅನಿಸಿಲ್ಲ. ಆಯಾ ಕಾಲಕ್ಕ ಎಲ್ಲಾ ಬರಕೋತ ಹೋಗ್ಯಾವ.

ಕಣವಿಯವರ ನಿರ್ಲಿಪ್ತ ಭಾವ, ಸಮಚಿತ್ತ ಉಪಮಾತೀತ.

"ಬರುವುದೆಲ್ಲ ಬರಲಿ ಬಿಡು/ ಏಕೆ ಅದರ ಚಿಂತೆ?

ದುಃಖ ಸುಖವು ನಗೆಯು ಹೊಗೆಯು / ಎಲ್ಲ ಅಂತೆ ಅಂತೆ."

***  ಈ ಪ್ರಶಸ್ತಿ ನಿಮಗಿಂತ ಹಿರಿಯರಿಗೆ ಯಾರಿಗಾದರೂ ಬರಬೇಕಿತ್ತು. ಅಂತೇನರ ಅನಿಸೇದ ಏನು ನಿಮಗ?**

O  ಊಂ, ಹಾಂ! ಈ ಪ್ರಶ್ನೆ ಬ್ಯಾರೆ ಯಾರೂ ಕೇಳಿದ್ದಿಲ್ಲ. ಈಗ ನೀವು ಕೇಳಿದ ಮ್ಯಾಲ ಲಕ್ಷ್ಯಕ್ಕ ಬಂತು. ಇದs ಪ್ರಶಸ್ತಿ ಅಂತ ಅಲ್ಲ, ಒಟ್ಟು ಪರಮೇಶ್ವರ ಭಟ್ಟರಿಗೆ ಒಂದು ದೊಡ್ಡ ಪ್ರಶಸ್ತಿ ಬರಬೇಕಿತ್ತು. ಭಾಳ ಕೆಲಸ ಮಾಡ್ಯಾರ. ಆದರೂ ಅಷ್ಟ ಲಕ್ಷ್ಯಕ್ಕ ಬಂದಿಲ್ಲ ಅವರು.

ಇಂಥ ಮಾತುಗಳಿಂದಲೇ ಕಣವಿ ಎತ್ತರದವರಾಗಿರುವುದು. ಅವರ ಪ್ರಾಂಜಲ ಮನಸ್ಸಿನ ಉತ್ತರದಿಂದ ಅವರ ಸುತ್ತಲೂ ಬೆಳಕಿನ ಪ್ರಭೆಯನ್ನು ಕಂಡಷ್ಟು ಖುಷಿಯಾಯಿತು. ಅದರೊಂದಿಗೆ ಹಿಂದಿನ ದಿನದ ಒಂದು ಪ್ರಸಂಗ ಕಣ್ಣಿಗೆ ಕಟ್ಟಿತು:

ಧಾರವಾಡದಲ್ಲಿ ನಾಲ್ಕಾರು ದಿನಗಳಿಂದ ಕಾರ್ನಾಡ ನಾಟಕೋತ್ಸವ ಕಲಾಭವನದಲ್ಲಿ ನಡೆದಿತ್ತು. ಪ್ರತಿದಿನ ತಪ್ಪದೇ ಕಣವಿ ದಂಪತಿಗಳು ಬರುತ್ತಿದ್ದರು. ಹಿಂದಿನ ದಿನ ಕಲಾಭವನದ ಬಾಗಿಲಲ್ಲೇ ಅವರಿಗೆ ಎದುರಾದ ಕೀರ್ತಿನಾಥ ಕುರ್ತಕೋಟಿ 'ನಿಮಗ ಪಂಪ ಪ್ರಶಸ್ತಿ ಬಂತು. ಅಭಿನಂದನೆಗಳು' ಅಂದರು. ಕಣವಿಯವರು ತಮ್ಮ ಎಂದಿನ ತೆಳು ನಗೆಯನ್ನು ಬೀರುತ್ತ ಕೈ ಎತ್ತಿ ಇತ್ತೀಚೆಗೆ ಹಾಕಿಕೊಳ್ಳುತ್ತಿರುವ ಟೊಪ್ಪಿಗೆ ಹಿಡಿದುಕೊಳ್ಳುತ್ತ 'ಆ ಪಂಪನೆಲ್ಲಿ! ಈ ಗಾಂಪನೆಲ್ಲಿ!' ಅಂದರು. ಬಿ.ಎಂ.ಶ್ರೀಯ ವರನ್ನು ನೆನಪಿಸಿಕೊಳ್ಳುವಂತೆ, ಇದನ್ನೆಲ್ಲ ನೋಡುತ್ತಿದ್ದ ನನಗೆ ಕಣವಿಯವರ ಈ ಪ್ರತಿಕ್ರಿಯೆ ಕಾಮನಬಿಲ್ಲಿನ ಹಲವು ಅರ್ಥಗಳನ್ನು ಹೊಳೆಯಿಸಿತು. ಇದು ಕಣವಿ ವೈಶಿಷ್ಟ್ಯ. ಮೃದು ವಚನದಲ್ಲೇ ಖಚಿತಾರ್ಥ, ನೇರ ಗುರಿ.

***  ಕಣವಿಯವರೇ, ನಿಮ್ಮ ಮೊದಲ ಕವಿತೆ ಯಾವುದು?**

O  ನನ್ನ ೧೩-೧೪ರ ವಯಸ್ಸಿನೊಳಗ ಬರೆದ 'ಸೃಷ್ಟಿಯ ಸೊಬಗು' ಅನ್ನುವ ಕವಿತೆ, ಅದು ನನ್ನ ಹೈಸ್ಕೂಲ್ ಮ್ಯಾಗಝಿನ್‌ದೊಳಗ ಪ್ರಕಟ ಆಗಿತ್ತು.

***  ಅದಕ್ಕೂ ಮೊದಲು ಪ್ರಾಥಮಿಕ ಶಾಲೆಯೊಳಗಿದ್ದಾಗs ಬರೀತಿದ್ರಿ ಅಂತ?**

O  ಹಾಂ, ಹೌದು. ಹತ್ತ ಹನ್ನೊಂದನೇ ವಯಸ್ಸಿನೊಳಗ. ರವಿವಾರಕ್ಕೊಮ್ಮೆ ಪ್ರಭಾತಫೇರಿಗೆ ಹೋಗತಿದ್ದೆ. ಆಗ ಹಾಡುವ ದೇಶಭಕ್ತಿ ಗೀತೆಗಳಿಂದ ಪ್ರಭಾವಿತ ಆಗಿ ಅದs ಧಾಟಿ ಅನುಕರಿಸಿ ಒಂದು ಪದ್ಯ ಬರೆದಿದ್ದೆ. ಅದು ಬರೇ ಒಂದ್ ಪ್ರಯತ್ನ ಅನಬಹುದು.

*** ನಿಮ್ಮ ಕಾವ್ಯ ರಚನೆಗೆ ಅನುಕೂಲವಾಗೂವಂಥ ಸಾಹಿತ್ಯದ ವಾತಾವರಣ ಮೊದಲs ಇತ್ತೇನು? ಆಗ ನಿಮ್ಮ ಗೆಳೆಯರು, ಅಪ್ತರು ಯಾರ್‍ಯಾರಿದ್ದರು?**

O ಧಾರವಾಡದ ನಿಸರ್ಗ ಸೌಂದರ್ಯನs ನನ್ನ ಕಾವ್ಯರಚನೆಗೆ ಚೇತನವಾಗಿ ಪರಿಣಮಿಸಿತ್ತು. ಅಲ್ಲದ ಆಗ ನಮ್ಮದs ಗೆಳೆಯರದ ಒಂದು ಬಳಗ ರೂಪುಗೊಂಡಿತ್ತು. ಚಿದಂಬರ ದೀಕ್ಷಿತ, ಕೀರ್ತಿನಾಥ ಕುರ್ತಕೋಟಿ, ಶಂಕರ ಮೊಕಾಶಿ, ವಸಂತ ಕವಲಿ, ಶಿವೇಶ್ವರ ದೊಡ್ಡಮನಿ ಮುಂತಾದವರು ಮಾರಕ್ಕೊಮ್ಮೆ ಮಾಳಮಡ್ಡಿಯ ನನ್ನ ರೂಮಿನೊಳಗs ಸೇರ್ತಿದ್ದಿವಿ. ಅದಕ್ಕ 'ಕಾವ್ಯಾನುಭವ ಮಂಟಪ' ಅಂತ ಹೆಸರು. ಅಲ್ಲೆ ತಮ್ಮ ತಮ್ಮ ಕವಿತಾ ವಾಚನ, ವಿಮರ್ಶೆ, ಹರಟೆ, ಚಹಾಪಾನಿ ನಡೀತಿತ್ತು. ಶಿವೇಶ್ವರ ದೊಡಮನಿ ನವಲೂರಿನಿಂದ ಬರ್ತಿದ್ದ. ಹೆಚ್ಚಿನ ವ್ಯಾಳ್ಯಾ ನನ್ನ ರೂಮಿನೊಳಗs ಕಳೀತಿದ್ದ. ಅವನೂ ಕವಿತಾ ಬರೀತಿದ್ದ. ನಾವಿಬ್ಬರೂ ಒಂದs ಹಾಳ್ಯಾಗ ಈ ಕಡೆ ಅವನ ಕವಿತಾ ಬರದು ಪತ್ರಿಕೆಗೆ ಕಳಿಸತಿದ್ದಿವಿ. ೧೯೫೦ರೊಳಗೆ ಅವ ವಿಷಮ ಜ್ವರದಿಂದ ಏಕಾಏಕಿ ತೀರಿಕೊಂಡ. ನನ್ನ ಜೀವನದ ಮೊದಲ ದೊಡ್ಡ ಆಘಾತ ಅದು. ಅದರಿಂದs 'ಸಾವು' ನನ್ನ ಕಾವ್ಯದ ಜಿಜ್ಞಾಸೆಗಳಲ್ಲಿ ಒಂದಾಗಿ ಸೇರಿಹೋಯ್ತು. ಸಾವಿನ ನಿಗೂಢತೆ ಮತ್ತ ಕಠೋರತೆ ನನ್ನ ಮನಸ್ಸಿನಲ್ಲಿ ಇವತ್ತಿಗೂ ಉಳದಿದೆ.

೫೦ ವರ್ಷಗಳ ಹಿಂದಿನ ಮಾತು ನೆನಪಿಸಿಕೊಂಡು ಹೇಳುವಾಗ ಕಣವಿಯವರಲ್ಲಿ ೨೦ರ ಉತ್ಸಾಹ ಪುಟಿಯುತ್ತಿತ್ತು. ಗೆಳೆಯ ಶಿವೇಶ್ವರನ ಮಾತು ಬಂದಾಗ ಭಾವಜೀವಿಯ ದನಿ ಒದ್ದೆಯಾಗಿತ್ತು. ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘ, ಕರ್ನಾಟಕ ಕಾಲೇಜು, ವಿಶ್ವವಿದ್ಯಾಲಯ, ಪ್ರಸಾರಾಂಗಗಳು ತಮ್ಮ ಸಾಹಿತ್ಯಿಕ ಬೆಳವಣಿಗೆಗೆ ಪುಷ್ಟಿ ನೀಡಿದ್ದನ್ನು ಕೃತಜ್ಞತೆಯಿಂದ ನೆನಪಿಸಿಕೊಂಡರು.

*** ಬೇಂದ್ರೆಯವರು ಬೆಳಗಾವಿ ಸಾಹಿತ್ಯ ಸಮ್ಮೇಳನದೊಳಗೆ 'ಹಕ್ಕಿ ಹಾರುತಿದೆ ನೋಡಿದಿರಾ' ಕವಿತೆ ಓದಿದ್ದು ಅವರ ಜೀವನದ ಒಂದು ಮಹತ್ವದ ಅನುಭವ ಆಗಿಹೋಯಿತು. ನಿಮ್ಮ ಅನುಭವದೊಳಗೂ ಅಂಥಾ ಪ್ರಸಂಗ ಬಂದಿರಬೇಕಲ್ಲ?**

O ಒಂದೆರಡು ಹೇಳಬಹುದು. ಒಂದು ೧೯೪೭ರ ಸ್ವಾತಂತ್ರ್ಯೋತ್ಸವ ಸಂದರ್ಭ. ಕರ್ನಾಟಕ ಕಾಲೇಜಿನ ಬಯಲೊಳಗೆ ಬೃಹತ್ ಸಭೆ ಸೇರಿತ್ತು. ನಾನು 'ಬಂಧದಿಂ ಬಿಡುಗಡೆಗೆ' (ಆಗಸ್ಟ್ ಹದಿನೈದು)ಅನ್ನುವ ಪದ್ಯ ಓದಿದೆ. ಇಡೀ ಸಭಾದೊಳಗ ಒಂದು ರೀತಿ ಆವೇಶ ತುಂಬಿತು. ನನಗೆ ಒಂದು ಅಪೂರ್ವ ಅನುಭವ ಅದು. ನನ್ನ ಆತ್ಮವಿಶ್ವಾಸವನ್ನೂ ಹೆಚ್ಚಿಸಿತು. ಇನ್ನೊಂದು ೧೯೫೭ರ ಕರ್ನಾಟಕ ವಿಶ್ವವಿದ್ಯಾಲಯದ ಘಟಿಕೋತ್ಸವದೊಳಗ ನನ್ನ ಕವಿತೆ 'ವಿಶ್ವಭಾರತಿಗೆ ಕನ್ನಡದಾರತಿ'ಯನ್ನು ಶಾರದಾ

ಹಾನಗಲ್ ಅವರು ರಾಗ ಸಂಯೋಜಿಸಿ ಹಾಡಿಸಿದ ಸಂದರ್ಭ. ಮುಂದೆ ೧೯೬೬ರಲ್ಲಿ ಅದನ್ನ ಕೇಳಿದ ಕುವೆಂಪು ಅವರು ನನ್ನನ್ನು ತಮ್ಮ ಹತ್ತಿರ ಕರೆದು, 'ನಿಮ್ಮ ಕವಿತಾ ಹಾಡಿದ್ದು ಕೇಳಿ ನನಗೆ ರೋಮಾಂಚನವಾಯ್ತು' ಅಂತ ಉದ್ಗರಿಸಿದರು. ಅದರಿಂದ ನನಗೂ ರೋಮಾಂಚನದ ಅನುಭವ. ಕಣವಿಯವರ ಕಣ್ಣಿನಲ್ಲಿ ಅಭಿಮಾನದ ಮಿಂಚು ಹೊಳೆಯಿತು.

*** ಹೌದು, ಆ ಹಾಡು ನನಗೂ ಸೇರ್‍ತದ. ಅದು ಜನಪ್ರಿಯನೂ ಆದ, ಕಾವ್ಯದ ಸತ್ವವನ್ನೂ ಒಳಗೊಂಡದ. ಈಗಲೂ ಅನೇಕ ಕಾರ್ಯಕ್ರಮದೊಳಗೆ ಸ್ವಾಗತಗೀತೆ ಅಥವಾ ಪ್ರಾರ್ಥನಾ ಪದ್ಯವಾಗಿ ಅದನ್ನ ಹಾಡ್ತಾರ. ನೀವು ಅದನ್ನ ಯಾವಾಗ ಬರೆದಿದ್ರಿ?**

O ಯಾವಾಗ ಅಂದರ, ಅದು ಒಂದು ರೀತಿ ಸಾಂದರ್ಭಿಕ ಕವಿತೆ. ಪಾವಟೆಯವರು ಬನಾರಸ್ ಯುನಿವರ್ಸಿಟಿಯಲ್ಲಿದ್ದಾಗ ಅಲ್ಲಿ ಕುಲಗೀತೆ ಅಂತ ಹಾಡೂ ಸಂಪ್ರದಾಯ ಇತ್ತಂತ. ಅದನ್ನ ಇಲ್ಲಿನೂ ಸುರು ಮಾಡಬೇಕಂತ ಅವರು ಕರ್ನಾಟಕದ ಕಾವ್ಯ ಇತಿಹಾಸಕ ಸಂಸ್ಕೃತಿ ಹೊಳೆಯಿಸುವಂಥ ಒಂದು ಹಾಡು ಬರೆದು ಕೊಡಲಿಕ್ಕೆ ಹೇಳಿದರು. ಬರೆ ಅವರು ಕೇಳಿದ್ದಕ್ಕ ನಾನು ಬರದಿದ್ದರ ನೀವು ಹೇಳಿದಂಗ ಒಳ್ಳೇ ಕವಿತೆ ಆಗತಿತ್ತೊ ಇಲ್ಲೋ. ಆದರ ಕರ್ನಾಟಕದ ಬಗ್ಗೆ ಕನ್ನಡದ ಬಗ್ಗೆ ಬರೀಬೇಕು ಅಂತ ಈ ಮೊದಲೇ ಹೊಳಹು ಹಾಕ್ತಾನೇ ಇದ್ದೆ. ನನ್ನ ತಲಿಯೊಳಗ ಇದ್ದದ್ದಕ್ಕೂ ಅವರು ಕೇಳಿದ್ದುಕ್ಕೂ ಕೂಡಿ ಬಂತು. ಮೂರು ದಿನದೊಳಗೆ ಬರೆದು ಕೊಟ್ಟೆ. ಶಾರದಾ ಹಾನಗಲ್ ಅದಕ್ಕ ಭಾಳ ಛೆಂದ ರಾಗ ಸಂಯೋಜನೆ ಮಾಡ್ಯಾರ, ಹಿಂದುಸ್ತಾನಿಯೊಳಗ. ಈಗೀಗ ಕರ್ನಾಟಕ ಸಂಗೀತ ಪದ್ಧತಿಯೊಳಗೂ ಹಾಡ್ತಾರ. ನನಗದು ಅಷ್ಟು ಸೇರಿಲ್ಲ. ಆ ಹಾಡಿನೊಳಗ 'ಗಂಗೆ ತುಂಗೆ ಕಾವೇರಿ ಪವಿತ್ರಿತ' ಅಂತ ಹೇಳುವಾಗ ಅದು ಏರ್‍ತಾನs ಹೋಗಬೇಕು. ಅದರಿಂದ ಭಾವದ ಔನ್ನತ್ಯ ಅರ್ಥ ಆಗ್ತದ, ಅನುಭವಕ್ಕ ಬರ್‍ತದ. ಕರ್ನಾಟಕಿಯೊಳಗ ಹಿಂಗಾಗೂದಿಲ್ಲ. 'ಗಂಗೆ ತುಂಗೆ ಕಾವೇರಿ' ಆದ ಮ್ಯಾಲ ಒಡೀತಾರ, 'ಪವಿತ್ರ'ಬ್ಯಾರೆ ಅಂತಾರ. ಇದರಿಂದ ಗರಿಮೆ ಸಾಧಿತ ಆಗೂದಿಲ್ಲ."

*** ನವೋದಯದ ನೀವು ನವ್ಯದ ಕಡೆಗೆ ವಾಲಿದ್ದಕ್ಕ ಪ್ರೇರಣೆ ಏನು?**

O ಕಟ್ಟೀಮನಿಯವರು ಪ್ರಕಟಿಸುತ್ತಿದ್ದ 'ಉಷಾ', 'ಸ್ವತಂತ್ರ' ಪತ್ರಿಕೆಯೊಳಗ ನನ್ನ ಪದ್ಯ ಅಡಿಗರ ಪದ್ಯ ಒಟ್ಟೊಟ್ಟಿಗೆ ಬರ್‍ತಾ ಇದ್ದುವು. ಅದರಿಂದ ನಮ್ಮ ನಡುವ ಪತ್ರ ವ್ಯವಹಾರ ಸುರು ಆತು. ಆದರ ಅದಕ್ಕಿಂತ ಮೊದಲs ಆಡುಮಾತಿನ ಲಯ ಬಳಸಿ

ಪದ್ಯ ರಚಿಸಬೇಕು ಅಂತ ನನಗೆ ಅನಸತಿತ್ತು. ನನ್ನ 'ನಿಯಮೋಲ್ಲಂಘನ' ಕವಿತೆಯಲ್ಲಿ ಈ ಪ್ರಯೋಗ ಕಾಣಬಹುದು. ಅಡಿಗರ ಪದ್ಯಗಳನ್ನ ತಗೊಂಡು ನಾನು, ಶಿವೇಶ್ವರ ಚರ್ಚೆ ಮಾಡಿತಿದ್ದಿವಿ. ನವ್ಯ ಧಾಟಿ, ಕವಿತಾ ಬಂಧ, ಭಾಷೆ ದುಡಿಸಿಕೊಳ್ಳುವ ರೀತಿ, ಲಯ, ನುಡಿಯಿಂದ ನುಡಿಗೆ ಸಹಜ ಭಾವದ ಬೆಳವಣಿಗೆ ಇವುಗಳನ್ನೆಲ್ಲ ನಮಗ ಅಡಿಗರ ಕಾವ್ಯದಿಂದ ಅರ್ಥ ಮಾಡಿಕೊಳ್ಳಲು ಸಾಧ್ಯ ಆಯಿತು. 'ಸಾವಯವ ಸಮಗ್ರೀಕರಣ'ದ ತಿಳಿವು ಮೂಡಿತು. ಹೀಗಾಗಿ ನವ್ಯವನ್ನು ಅಭಿವ್ಯಕ್ತಿ ಮಾರ್ಗವಾಗಿ ಒಪ್ಪಿಕೊಂಡೆ.

*** ಪ್ರಖರ ವ್ಯಕ್ತಿತ್ವದ ಅಡಿಗರು ಮತ್ತು ಸೌಮ್ಯ ಸ್ವಭಾವದ ಶಿವರುದ್ರಪ್ಪನವರ ಜೊತೆ ಸ್ನೇಹ ನಿಮಗ ಏಕಕಾಲದಲ್ಲಿಯೇ ಸಾಧ್ಯ ಆಗಿತ್ತು. ಅದಕ್ಕ ನಿಮ್ಮ ಹೊಂದಾಣಿಕೆ ಅಥವಾ ಸಮನ್ವಯ ಮನೋಭಾವ ಕಾರಣ ಏನು?**

O ಒಳ್ಳೆಯ ಗುಣ ಯಾವ ವಸ್ತುವಿನಲ್ಲೇ ಇರಲಿ, ವ್ಯಕ್ತಿಯಲ್ಲೇ ಇರಲಿ ಅದನ್ನ ಮೆಚ್ಚುವ ಸ್ವಭಾವ ನನ್ನದು. ಆಗ ಹೇಳಿದೆನಲ್ಲ, ಅಡಿಗರ ಕಾವ್ಯ ನನಗ ಇಷ್ಟ ಆಯಿತು. ಅವರು ಕುಮಟಾದಲ್ಲಿ ಲೆಕ್ಚರರ್ ಇದ್ದಾಗ ಒಮ್ಮೆ ಇಲ್ಲೆ ಆಕಾಶವಾಣಿ ಭಾಷಣಕ್ಕ ಬಂದಿದ್ದರು. ಅದs ಮೊದಲ ಸಲ ಅವರನ್ನ ಪ್ರತ್ಯಕ್ಷ ನೋಡಿದ್ದು. ಹೊಸದಾಗಿ ಮನಿ ಮಾಡಿದ್ದೆ. ಅವರನ್ನ ಊಟಕ್ಕೆ ಕರದೆ. ಸ್ನೇಹ ಬೆಳೀತು. ಮುಂದ ಅವರು ಅಲ್ಲೆ, ನಾನು ಇಲ್ಲೆ . ಸಂಪರ್ಕ, ಪ್ರತ್ರೋತ್ತರ ಕಡಿಮೆ ಆದುವು. ಆದರ ಶಿವರುದ್ರಪ್ಪನವರ ಸ್ನೇಹ ಬೇರೆ ರೀತಿಯದು. ನಮ್ಮಿಬ್ಬರದೂ ಒಂದs ಮನೋಧರ್ಮ. ನಮ್ಮಲ್ಲಿ ಭಾವನಾತ್ಮಕ ಸ್ನೇಹ ಬೆಳೆದು -ಇನ್ನೂ ಬೆಳೀತಾನ ಬಂದದ.

ವ್ಯಕ್ತಿಗಳೊಂದಿಗಷ್ಟೇ ಅಲ್ಲ ಸ್ಥಳ, ವಸ್ತು ವಿಷಯಗಳ ಬಗೆಗೂ ಭಾವನಾತ್ಮಕ ಸಂಬಂಧ ಬೆಳೆಸಿಕೊಳ್ಳುವ ಕಣವಿ ಅದನ್ನು ಉಳಿಸಿಕೊಳ್ಳುವ ಕಲೆಗಾರಿಕೆಯನ್ನೂ ಸಾಧಿಸಿದ್ದಾರೆ.

*** ನಿಮ್ಮ ಕಾವ್ಯದಲ್ಲಿ ಬದುಕಿನ ಸುಖದಾಯಕವಾದ ನಲಿವಿನ ಮುಖವೇ ಹೆಚ್ಚು ಕಾಣ್ತದ. ನೋವು, ದುರಂತಕ್ಕೆ ನೀವು ದನಿ ನೀಡಿದ್ದು ಕಡಿಮೆ. ಇದರಿಂದ ಬದುಕಿನ ಸಮಗ್ರತೆಯ ಅಭಿವ್ಯಕ್ತಿ ಆದ್ಹಂಗ ಆಗೂದಿಲ್ಲ....**

O ನನ್ನ ಬದುಕಿನಲ್ಲೂ ನೋವು, ದುಃಖದ ಅನುಭವ ಆಗ್ಯಾವ, ಆದರ ನನಗ ಬದುಕಿನ ಸೌಂದರ್ಯದ ಕಡೆಗೆ-ಅದು ನಿಸರ್ಗ ಆಗಿರಬಹುದು, ಹೃದಯ ಸೌಂದರ್ಯ, ಸ್ವಭಾವ ಅಥವಾ ವ್ಯಕ್ತಿತ್ವ ಸೌಂದರ್ಯ ಇರಬಹುದು -ಆ ಕಡೆ ಹೆಚ್ಚಿನ ಒಲವು ಅದ. ಇದರಿಂದ ಮನಸ್ಸಿಗೆ ಸಮಾಧಾನ ಆಗ್ತದ. ಅದನ್ನ ಉಳಿದವರಿಗೂ

ನೀಡಬೇಕು ಅನ್ನೂದು ನನ್ನ ಉದ್ದೇಶ.

ಬಿಡಿಸಿದಷ್ಟೂ ಬಾಳು ಬರಿಗುಂಜು ತೊಡಕು
ಕಂಡ ಕಂಡೆಡೆಯಲ್ಲಿ ಕರುಣೆಯನೆ ಹುಡುಕು:
ಅವರಿವರ ಅಲ್ಪತನನಕಿನ್ನೇನು ಬೇಕು?
ನಿನ್ನ ನೋವಿಗೆ ನಿನ್ನ ಕಂಬನಿಯೆ ಸಾಕು.

ಎಂಬ ಕಣವಿ ಸಾಲು ನನ್ನ ಕಿವಿಯಲ್ಲಿ ಗುಯ್ಯ್ನಗುಟ್ಟಿದವು.

*** ವೈಯಕ್ತಿಕ ನೋವುಗಳನ್ನು ಅಭಿವ್ಯಕ್ತಿಸಬಾರದು ಅಂತ ಬಿಟ್ಟೀರೇನು ಅಥವಾ ಅದರ ಅಭಿವ್ಯಕ್ತಿ....**

O ಹೂಂ. ಹಂಗ ಅಲ್ಲಾ. ಜೀವನದೊಳಗ ಕಷ್ಟ ನೋವು ಇದ್ದದ್ದೇ. ಅದನ್ನ ಶಮನಗೊಳಿಸಲಿಕ್ಕೆ ಉತ್ಸಾಹದ ಮುಖವನ್ನು ಎತ್ತಿ ಹೇಳಬೇಕು ಅನ್ನೂದs ನನ್ನ ಧೋರಣೆ.

ಅವರ ಕಾವ್ಯದಲ್ಲಿ ನವಿರಾದ ವ್ಯಂಗ್ಯವಿದ್ದರೂ ಅದರಲ್ಲಿ ತೀಕ್ಷ್ಣತೆ ಇರುವುದಿಲ್ಲ ಎನ್ನುವುದರ ಕಡೆಗೆ ನಮ್ಮ ಮಾತು ಹೊರಳಿತು. ರಾಜಕೀಯ ವಸ್ತು ನಿರ್ವಹಣೆಯಲ್ಲಿ ಅದು ಹೇಗೆ ಪ್ರತಿಫಲನಗೊಂಡಿದೆ ಎಂದು ಹೇಳುತ್ತ ಕಣವಿ ತಮ್ಮ ಸಂಗ್ರಹ ತೆಗೆದು 'ಅಪರಾವತಾರ', 'ಲಾಗ', 'ಜಗದೇಕಮಲ್ಲ', 'ವಿನೂತನ ಕವಿಯ ಕೈಫಿಯತ್ತು' ಮುಂತಾದ ಕವನಗಳನ್ನು ವಿವರಿಸಿದರು. ಉದಾಹರಿಸುತ್ತ ಓದಿ ತೋರಿಸಿದರು. ಮೈಮರೆತು ಕುಳಿತೆ. ಅವರ ಕಾವ್ಯವಾಚನ ರೀತಿಯೇ ಹಾಗೆ!

ನಡುವೆ ಒಂದು ಸ್ವಾರಸ್ಯಕರ ಪ್ರಸಂಗ ನೆನಪಿಸಿಕೊಂಡರು. ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ೭೦ರ ದಶಕದಲ್ಲಿ ದೊಡ್ಡ ಪ್ರಮಾಣದಲ್ಲಿ ಸಾಹಿತ್ಯಗೋಷ್ಠಿ ನಡೆಸುತ್ತಿದ್ದರು. ಅಲ್ಲಿ ಒಮ್ಮೆ ಕಣವಿ 'ಮೃತ್ಯು ಘೋಷಣೆ' ಪದ್ಯ ವಾಚಿಸಿದರು. ಅದು ನವ್ಯ ಕಾವ್ಯದ ಮೃತ್ಯುಘೋಷಣೆ ಅಂತ ಸುದ್ದಿಯಾಯಿತು. ಇವರು ಕುವೆಂಪು ಅವರ ಭೆಟ್ಟಿಗೆ ಹೋದಾಗ ಅವರೂ 'ತುಂಬ ಚೆನ್ನಾಗಿ ಕವಿತೆ ಓದಿದಿರಂತೆ'ಎಂದು ಸೂಚ್ಯವಾಗಿ ಅದನ್ನೇ ಹೇಳಿದರಂತೆ. ಕಣವಿ ವಿಡಂಬನೆಯೊಂದಿಗೆ ಇವೆರಡನ್ನೂ ಬೈಯುತ್ತ 'ನೆಲೆ ನಿಂತವರನ್ನು ನಿಂತ ಕಾಲ ಮೇಲೆ ಗುಳೇ ಹೊರಡಿಸುವ, ಮೂರನೆಯ ಗುಂಪಿನ ಕಾಲೆಳೆಯುವವರನ್ನು, 'ಅಕಾವ್ಯ' ಪತ್ರಿಕೆ, ಕಂಬಾರ ಮುಂತಾದ ಎಲ್ಲದರ ಪ್ರಸ್ತಾಪವಿರುವುದನ್ನು ಬಿಚ್ಚಿ ಹೇಳಿದರು, ಮೋಜೆನಿಸಿತು.

ಕಣವಿಯವರೊಂದಿಗೆ ಆಪ್ತವಾಗಿ ಹರಟುವಾಗ ಹಲವು ಸಾಹಿತಿಗಳ ಬಗ್ಗೆ, ಪ್ರಸಂಗಗಳ ಬಗ್ಗೆ ಏನೆಲ್ಲ ಮತ್ತೊಬ್ಬರಿಗೆ ಹೇಳಬಹುದಾದ ಹೇಳಬಾರದ ವಿಷಯಗಳು ನುಸುಳುತ್ತವೆ. ಅವುಗಳ ಅಭಿವ್ಯಕ್ತಿಯಲ್ಲೂ ಕಣವಿಯವರು ಶಾಲೀನತೆ

ಉಳಿಸಿಕೊಳ್ಳುವುದೇ ಅವರ ವೈಶಿಷ್ಟ್ಯ. 'ಬರೆದ ಕವಿತೆಗಿಂತ ಬರೆಯದ ಕವಿತೆ ಭಾರ' ಎಂಬ ತುಡಿತದ ಕಣವಿ ಆ ಭಾರವನ್ನೂ ಇಳುಹಿ ಹಗುರಾಗಲಿ.

***   ಕಣವಿಯವರೇ, ನಿಮ್ಮ ದಾಂಪತ್ಯದ ಬಗ್ಗೆ ಒಂದು ಪ್ರಶ್ನೆ. ನಿಮ್ಮಿಬ್ಬರೊಳಗ ಜಗಳ, ಝಟಾಪಟಿ ಆಗ್ತಿರಬೇಕಲ್ಲ?**

O  ಯಾಕಿಲ್ಲ, ದಾಂಪತ್ಯ ಅಂದ ಮ್ಯಾಲ ಇರೂವs. ಜಗಳ ಅಂತ ಅಲ್ಲ. ಮತಭೇದ ಇರ್ತಾವ.

***   "ಆಗ ನೀವು ಏನ ಮಾಡ್ತೀರಿ?"**

O   ಒಮ್ಮೊಮ್ಮೆ ಜೋರಜೋರಿಲೆ ಮಾತಾಡ್ತೇನಿ. ಸಿಟ್ಟಾಗ್ತೇನಿ....

ತಕ್ಷಣ ಶಾಂತಕ್ಕ ಬಂದರು- ಮಗ್ಗಲು ಕೋಣೆಯಲ್ಲಿ ವಿಶ್ರಾಂತಿ ಪಡೆಯುತ್ತಿದ್ದರು- "ಸುಮ್ಮನಾಗಿ ಬಿಡ್ತಾರ ಅವರು" ಅಂದರು.

ನಾನು ನಗುತ್ತ "ನೀವ್ಯಾಕ ಬಂದ್ರಿ ಶಾಂತಕ್ಕ, ನೀವ ಇಲ್ಲದಾಗ ಕೇಳೂ ಮಾತದು" ಎಂದೆ. ನಗೆಯಲ್ಲಿ ಅವರಿಬ್ಬರೂ ಸೇರಿಕೊಂಡರು.

ಒಂದು ಮಾತು ಖರೆ ಹೇಮಾ ಭಾಳ ಸಂದರ್ಭದೊಳಗ ನನಗ ಅನಿಸೇದ, ಅವರ ಅಭಿಪ್ರಾಯನs ಸರಿ ಇರ್ತದ. ವ್ಯವಹಾರ, ಹಣಕಾಸು, ಮಕ್ಕಳು, ಮನಿ, ಎಷ್ಟೋ ಸಲ ನನ್ನ ವೈಯಕ್ತಿಕ ವಿಷಯಗಳಲ್ಲಿ ಸಹ ಅವರ ಅಭಿಪ್ರಾಯ ಸರಿ ಆನಸ್ತದ. ನನ್ನ ಮತಭೇದ ತತ್ಕಾಲದ್ದ ಆಗಿರ್ತದ."

ದಾಂಪತ್ಯದಲ್ಲಿ ಸಭ್ಯ ಪುರುಷನೊಬ್ಬನ ಸಮರ್ಪಣಾ ಭಾವ, ಅದರಿಂದ ಅವನಿಗೂ ದೊರೆಯುವ ಸಮಾಧಾನ ಇಡೀ ಕುಟುಂಬವನ್ನು ಸ್ವಸ್ಥವಾಗಿಡಬಲ್ಲುದು ಎಂಬ ನನ್ನ ನಂಬಿಕೆ ದೃಢವಾಯಿತು.

***   ಇತ್ತೀಚೆಗೆ ಮುಖ್ಯವಾಗಿ ಈ ದಶಕದೊಳಗೆ ಸಾಹಿತ್ಯ ವಿಮರ್ಶೆಯೊಳಗ ಸ್ತ್ರೀವಾದಿ ವಿಮರ್ಶೆ ಒಂದು ಹೊಸ ದೃಷ್ಟಿಕೋನವಾಗಿ, ಪರಿಕಲ್ಪನೆಯಾಗಿ ಮೂಡಿಬಂದದ. ಅದಕ್ಕ ನಿಮ್ಮ ಪ್ರತಿಕ್ರಿಯೆ ಏನು?**

O  ಈಗೀಗಂತೂ ಆ ಸಾಹಿತ್ಯ ಬೆಳೀತಾ ಇದೆ. ಮೊನ್ನೆ ಒಂದು ಪುಸ್ತಕ 'ಹೊಸಿಲಾಚೆ ಹೊಸ ಹೆಜ್ಜೆ' ಅಂತ ನೋಡಿದೆ- ನೀವೂ ನೋಡಿರಬಹುದು- ಹೊಸ ಧೋರಣೆಗಳು ಇದರ ಅರ್ಥನs ಬೇರೆ ಅದ. ಅನಕೃ ಬರೆದ 'ಹೊಸಿಲುದಾಟಿದ ಹೆಣ್ಣು' ಅರ್ಥನs ಬೇರೆ ಇತ್ತು....

ಸ್ತ್ರೀವಾದಿ ವಿಮರ್ಶೆಯ ಪ್ರಶ್ನೆಗೆ ಉತ್ತರ ಸ್ತ್ರೀವಾದಿ ಸಾಹಿತ್ಯ ರಚನೆ

ಕಡೆಗೆವಾಲಿತ್ತು.

* ಅದು ಸರಿ ಕಣವಿಯವರೆ, ನಾನು ಕೇಳ್ತಿರೂದು ಸ್ತ್ರೀ ಕೇಂದ್ರಿತ ವಿಮರ್ಶೆ ಬಗ್ಗೆ. ಮಹಿಳಾ ಸಾಹಿತ್ಯದಲ್ಲಿ ಮಾತ್ರ ಅಲ್ಲ. ನಿರಂಜನ, ಕಟ್ಟೀಮನಿ ಮುಂತಾದವರ ಸಾಹಿತ್ಯದಲ್ಲೂ ಅವರು ಸ್ತ್ರೀಸಂಬಂಧೀ ವಿಷಯವನ್ನು ಯಾವ ದೃಷ್ಟಿಯಿಂದ ಚಿತ್ರಿಸಿದ್ದಾರೆ. ಲಿಂಗಭೇದ ಮೂಲವಾದ ಅಸಮಾನತೆಯ ಬಗ್ಗೆ ಅವರ ಅಭಿಪ್ರಾಯ ಏನು ಅನ್ನೂದನ್ನು ನೋಡೂದು.

O ಹಾಂ. ಹಂಗಿದ್ದರ ಅದಕ್ಕ ಸ್ಟ್ಯಾಂಡರ್ಡ್ ಏನು? ಅದರ ಬಗ್ಗೆ ಕನ್ನಡದಲ್ಲಿ ಹೆಚ್ಚು ಏನೂ ಪ್ರಕಟ ಆದ್ಹಂಗ ಕಾಣೂದಿಲ್ಲ. ತೇಜಸ್ವಿನಿ ಪುಸ್ತಕ ನೋಡಿದ್ದೆ. ಅದೂ ಸ್ಪಷ್ಟ ಇಲ್ಲ. ಸ್ತ್ರೀವಾದಿ ವಿಮರ್ಶೆಯ ಧೋರಣೆ, ಮಾನದಂಡಗಳು ಸ್ಪಷ್ಟ ಆಗಬೇಕು. ಈಗ ಅದರ ಅಗತ್ಯ ಅದ.

ನಮ್ಮ ಶ್ರೇಣೀಕೃತ ವ್ಯವಸ್ಥೆಯಲ್ಲಿ ಸ್ತ್ರೀವಾದಿ ಮನೋಧರ್ಮ ಬೆಳೆಸಿಕೊಳ್ಳಲು ಸೂಕ್ತ ಸಂವೇದನೆ, ಮಾನವೀಯ ಮೌಲ್ಯಗಳ ಅಗತ್ಯ ಇದೆ. ಸ್ತ್ರೀವಾದ ಏಕವಾದ ಅಲ್ಲ, ಅಂತೆಯೇ ವಿಭಿನ್ನ ಅಪೇಕ್ಷೆಗಳು ಕೆಲವೊಮ್ಮೆ ಅವುಗಳಲ್ಲಿಯ ವೈರುಧ್ಯಗಳು ಗೊಂದಲವನ್ನು ಉಂಟುಮಾಡುವ ಸಾಧ್ಯತೆ ಇದೆ.. ಇತ್ಯಾದಿ ಮಾತುಗಳಾದವು.

ಕಣವಿಯವರು ಚಹಾ ಮಾಡುತ್ತೇನೆಂದು ಎದ್ದರು. ಮುಂದೆ ಐದೇ ನಿಮಿಷಗಳಲ್ಲಿ ಶಾಂತಕ್ಕ ಚಹದ ಕಪ್ಪುಗಳೊಂದಿಗೆ ಬಂದರು. ಇದು ಅವರ ದಾಂಪತ್ಯದ ರೀತಿ. ಒಬ್ಬರ ಮನಸ್ಸಿನಲ್ಲಿದ್ದುದಕ್ಕೆ ಇನ್ನೊಬ್ಬರು ಕ್ರಿಯಾರೂಪ ನೀಡುತ್ತಾರೆನ್ನಿಸಿತು.

ಹೊರಬಂದೆ. ಮೇಲೆ ಶುಭ್ರ ಆಕಾಶ- ಕಣವಿಯವರ ನಂಬಿಕೆಯಂತೆ. ಮಗ್ಗುಲಲ್ಲಿ ಅವರ ಮಾಸದ ಮುಗುಳ್ನಗೆಯ ಸಾಕಾರದಂತೆ ಅರಳಿ ನಿಂತ ಹೂಗಳು ಹಾದು. ಹೂವು ಹೊರಳುವವು ಸೂರ್ಯನ ಕಡೆಗೆ.... ಗುನುಗುನಿಸಿತು ನನ್ನ ಮನ.

**ಕನ್ನಡ ಪ್ರಭ, ೭-೧೧-೧೯೯**

*

# ಕವಿತೆಯ ಗೇಯಾತ್ಮ

● ಎಚ್. ಫಲ್ಗುಣ

*** ಸುಗಮ ಸಂಗೀತಕ್ಕೆ ಶಾಬ್ದಿಕ ವ್ಯಾಖ್ಯಾನವೇನು?**

ಲಘು ಸಂಗೀತ, ಕಾವ್ಯಗಾಯನ ಎಂಬ ಹೆಸರಿನಿಂದ ಕರೆಯಲ್ಪಡುತ್ತಿದ್ದ ಕಾವ್ಯಗಾನ ಪದ್ಧತಿ ಇತ್ತೀಚಿನ ೪-೫ ದಶಕಗಳಿಂದ 'ಸುಗಮ ಸಂಗೀತ' ಎಂಬ ಜನಪ್ರಿಯ ಹೆಸರಿನಿಂದ ವ್ಯವಹರಿಸಲ್ಪಡುತ್ತಿದೆ. ಕವಿತೆಯಲ್ಲಿ ಅಂತರ್ವಾಹಿನಿಯಾಗಿರುವ ಗೇಯ ಗುಣವನ್ನು ಶೋಧಿಸಿ ಚೋದಿಸಿ, ಭಾವಸ್ಪಂದನಕ್ಕೆ ಅನುವಾಗುವಂತೆ ಪದಪಂಕ್ತಿಗಳನ್ನು ಮೀಟಿ ಸಹಜಾರ್ಥವನ್ನು ಅರ್ಥಾಂತರವನ್ನೂ ಹೊಮ್ಮಿಸುವ ಗಾಂಧರ್ವ-ಗುಣವೇ ಸುಗಮ ಸಂಗೀತ.

*** ಕಾವ್ಯ ರಚನೆ ಕ್ಷೇತ್ರದಲ್ಲಿ 'ಭಾವಗೀತೆ'ಗಳನ್ನು ಬರೆಯುವ ಕವಿವರ್ಗದ ಬಗ್ಗೆ ಆಕ್ಷೇಪ ಅಸಮಾಧಾನ ಹಿಂದೆಯೂ ಇತ್ತು ಇಂದೂ ಇದೆ.....**

ಹಾಡಿನ ಹುಟ್ಟಿಲ್ಲದೆ ಕವಿತೆ ಕುಡಿಯೊಡೆಯದು. ಬೇಂದ್ರೆ ತಮ್ಮ ಕವನಗಳನ್ನು - ವಾಚಿಸುವುದಲ್ಲ - ಹಾಡಿಯೇ ತೋರಿಸಿ 'ಗಾರುಡಿಗ' ಅಂತ ಕರೆಸಿಕೊಂಡಿದ್ದರು. ಡಿ.ವಿ.ಜಿ., ವೀ.ಸಿ., ಕುವೆಂಪು, ಮಾಸ್ತಿಯವರು ಗಾಯನಕ್ಕೆ ಅನುಕೂಲಿಸುವಂತೆಯೇ ಛಂದೋ ನಿರ್ದೇಶನದೊಂದಿಗೆ ಪದ್ಯ ಬರೆಯುತ್ತಿದ್ದರು. ಮಹಾಕಾವ್ಯವನ್ನು ಬರೆದ ಕವಿ ಕಿರು ಕವಿತೆಯನ್ನೂ ಬರೆಯಬಲ್ಲ. ಕವಿಯಾದವನು ಸಂಕೀರ್ಣವಾಗಿಯೂ ಸವಿಸ್ತೃತವಾಗಿಯೂ ಬರೆಯಬಲ್ಲ. ಸದ್ಯೋವರ್ತಮಾನದ ತಾಂತ್ರಿಕಾನ್ವೇಷಣೆಯ ವೇಗಶಾಲೀನವಾದ ಯುಗದಲ್ಲಿ, ಅಂತಹ ವಾತಾವರಣಕ್ಕೆ ಹೊಂದುವಂತೆ, ಕ್ಯಾಸೆಟ್ಟಿಗಾಗಿ ಚಿಕ್ಕ ಚಿಕ್ಕ ಹಾಡುಗಳನ್ನು ಗೇಯವಾಗಿ ಬರೆಯುವುದರಲ್ಲಿ ತಪ್ಪಿಲ್ಲ. ಚಿಕ್ಕದೆನ್ನಿಸುವ ಅಂತಹ ಒಂದೇ ಒಂದು ಹಾಡಿನಲ್ಲಿ ತನ್ನ ಭಾವವನ್ನೂ ಬಗೆಯನ್ನೂ ಕವಿ ಬರೆದು ಬಸಿಯಬಲ್ಲ ಎಂಬುದು ನನ್ನ ಅಭಿಪ್ರಾಯ.

*** ಈಗ ಸಾಕಷ್ಟು ಕವಿಗಳ ಹಾಡುಗಳ ದನಿಯಚ್ಚು ಹೊರಬಂದಿವೆ. ಕವಿ ಮತ್ತು**

**ಸಂಗೀತ ಸಂಯೋಜಕ ಇವರಿಬ್ಬರ ಸಂಬಂಧ - ಸಾಂಗತ್ಯಗಳ ಅನುಪಾತ ಹೇಗಿರಬೇಕು?**

ಮೊತ್ತಮೊದಲಾಗಿ ಸಂಯೋಜಕ ಕವಿತೆಯ ಅರ್ಥವನ್ನು ಪೂರ್ಣವಾಗಿ ಎದೆಗಿಳಿಸಿಕೊಳ್ಳಬೇಕು. ಅರ್ಥವಾಗಲು ತೊಡಕಿದ್ದಲ್ಲಿ ನೇರವಾಗಿ ಕವಿಯನ್ನು ಸಂಪರ್ಕಿಸಿ ಕವಿತೆಯ ಯಾಥಾರ್ಥವನ್ನು ಅರಿತುಕೊಳ್ಳಬೇಕು. ಕವಿ ಸ್ವರ ಸಂಯೋಜನೆ ಹೇಗೆ ಮಾಡುವುದಿಲ್ಲವೋ ಹಾಗೇ ಈತ ಶಬ್ದ ಸಂಯೋಜನೆಯನ್ನೂ ಮಾಡುವುದಿಲ್ಲ. ಇದೇ ಅವರಿಬ್ಬರ ಅನುಪಾತ.

*** ನಿಮ್ಮ ಕವನವನ್ನು ಸಂಗೀತಕ್ಕೆ ಅಳವಡಿಸುವಾಗ ಸ್ವರಸಂಯೋಜಕರು ನಿಮ್ಮನ್ನು ಈ ಕುರಿತು ಸಂಪರ್ಕಿಸಿದ್ದುಂಟೇ?**

ಇಲ್ಲ. ಸಂಗೀತ ಅಳವಡಿಸಲ್ಪಟ್ಟ ಮೇಲಷ್ಟೇ ನನ್ನ ಗಮನಕ್ಕೆ ಬಂದುದೇ ಹೆಚ್ಚು. ಇದರಿಂದಾಗಿ ಕವಿತೆಯ ಸಾಲುಗಳು ಮಂಕಾಗುವುದು, ಪದವಿಭಾಗವಾಗುವುದು, ಅರ್ಥಾಂತರ ಬೋಧೆ ಬರುವುದು, ಇತ್ಯಾದಿ ಪ್ರಮಾದಗಳು ಸಂಭವಿಸುತ್ತವೆ. ಉದಾಹರಣೆಗೆ, ಶ್ರೀ ಹೆಚ್.ಕೆ. ನಾರಾಯಣರು ಸಂಯೋಜಿಸಿದ 'ವಿಶ್ವವಿನೂತನ ವಿದ್ಯಾಚೇತನ'ಕವಿತೆಯಲ್ಲಿ 'ಕೃಷ್ಣತುಂಗೆ ಕಾವೇರಿ ಪವಿತ್ರಿತ ಕ್ಷೇತ್ರ ಮನೋಹಾರಿ' ಎಂಬ ಸಾಲನ್ನು ಗಮನಿಸಬಹುದು. ಸಂಯೋಜಕರು, ಈ ಸಾಲನ್ನು 'ಕೃಷ್ಣ ತುಂಗೆ ಕಾವೇರಿ' ಹಾಗೂ 'ಪವಿತ್ರಿತ ಕ್ಷೇತ್ರ ಮನೋಹಾರಿ' ಎಂದು ಸವಿಶ್ರಾಮ ವಿಭಜನೆ ಮಾಡಿದ್ದರಿಂದ ಅರ್ಥ ವಿಚ್ಛಕ್ತಿ ಉಂಟಾಗಿದೆ. ಕವಿಯೊಂದಿಗೆ ಪೂರ್ವಭಾವೀ ಚರ್ಚೆ ಸಲಹೆಗಳಷ್ಟೇ ಇದಕ್ಕೆ ಪರಿಹಾರ. ನನ್ನ ಅಭಿಪ್ರಾಯದಲ್ಲಿ ಕವಿ-ಸಂಯೋಜಕ-ಗಾಯಕ ಈ ತ್ರಿಪುಟಿಯು ಸಂಘಟಿತವಾದಾಗ ಉತ್ತಮ ಗೀತೆಯನ್ನೂ ಗೀತೆಯ ಉತ್ತಮತೆಯನ್ನೂ ನೀಡಬಹುದು.

*** ಈಗಾಗಲೇ ಪ್ರಸಿದ್ಧವಾದ ಗೀತೆಯೊಂದನ್ನು ಪುನಃ ಶಸ್ತ್ರಕ್ರಿಯೆಗೆ ಒಳಪಡಿಸಿ ಬೇರೆ ರಾಗವನ್ನು ಸಂಯೋಜಿಸುವುದು ಉಚಿತವೆನಿಸುತ್ತದೆಯೆ?**

ಇದು ಗುಣಕ್ಕೆ ಸಂಬಂಧಿಸಿದ್ದು. ಪ್ರಸಕ್ತ ಗೀತೆಯು ಕವಿಯ ಕಾವ್ಯಾಶಯಕ್ಕೆ ಹೊಂದುವಂತಿರದಿದ್ದಲ್ಲಿ, ಕಾವ್ಯನ್ಯಾಯಕ್ಕಾಗಿ ರಾಗವನ್ನೋ ಧಾಟಿಯನ್ನೋ ಒಟ್ಟು ಸಂವಿಧಾನವನ್ನೋ ಬದಲಿಸಬಹುದು. ಹಾಗಿಲ್ಲದಿದ್ದಲ್ಲಿ ಇಂತಹ ದುಃಸಾಹಸ ಅನಪೇಕ್ಷಣೀಯ. ಅದರ ಬದಲು ಹೊಸ ಕವಿತೆಯನ್ನೇ ಆರಿಸಿ, ಮಾಡುವ ಅದೇ ಕೆಲಸವನ್ನು ಜೋಡಿಸಿದರೆ, ಒಂದು ಹೊಸಗೀತೆ ಹುಟ್ಟೊಡೆಯುವುದಿಲ್ಲವೇ?

*** ತಾವು ಮೆಚ್ಚುವ ಸ್ವರಸಂಯೋಜಕರು? ಗಾಯಕರು?**

ಜಿ.ವಿ. ಅತ್ರಿ, ಸಿ. ಅಶ್ವತ್, ಶಿವಮೊಗ್ಗ ಸುಬ್ಬಣ್ಣ, ಡಾ. ಸಿದ್ಧರಾಮ ಜಂಬಲದಿನ್ನಿ, ರತ್ನಮಾಲಾ ಪ್ರಕಾಶ್, ಮಾಲತಿಶರ್ಮ, ಮಂಜುಳಗುರುರಾಜ್.....

*** ತೊಟ್ಟಿಲ ಕೂಸು 'ಹೊಂಬಾಳೆ' ಬಗ್ಗೆ ತಮ್ಮ ಹರಕೆ-ಹಾರೈಕೆ!**

ಸುಗಮ ಸಂಗೀತ ಕ್ಷೇತ್ರದಲ್ಲಿ ಇದೇ ಮೊದಲ ಪತ್ರಿಕೆ ಆದ್ದರಿಂದ ನಿಮ್ಮ ಪ್ರಯತ್ನ ಸ್ತುತ್ಯ, ಅತ್ಯಂತ ಉಪಯುಕ್ತ. ಈ ನಿಟ್ಟಿನ ಚರ್ಚೆಗೆ, ಕಲಿಕೆಗೆ ಅನುಕೂಲವಾಗುತ್ತದೆ. ಪತ್ರಿಕೆ ಯಶಸ್ಸನ್ನು ಹೊಂದಲಿ.

**'ಹೊಂಬಾಳೆ'**, ಫೆಬ್ರವರಿ ೨೦೦೦

*

# ಮುಖಾಮುಖಿ

● ರಹಮತ್ ತರೀಕೆರೆ

(ಈಚೆಗೆ ಕನ್ನಡ ವಿಶ್ವವಿದ್ಯಾಲಯವು ತನ್ನ ೧೧ನೆಯ ನುಡಿಹಬ್ಬದಲ್ಲಿ ಚೆನ್ನವೀರ ಕಣವಿಯವರಿಗೆ ನಾಡೋಜ ಪ್ರಶಸ್ತಿಯನ್ನು ನೀಡಿ ಗೌರವಿಸಿತು. ಈ ಸಂದರ್ಭದಲ್ಲಿ ಅವರನ್ನು ದಿನಾಂಕ ೧೮.೧೧.೦೨ರಂದು ಧಾರವಾಡದ ಅವರ ಮನೆಯಲ್ಲಿ ಸಂದರ್ಶನ ಮಾಡಲಾಯಿತು.)

**ನಿಮ್ಮ ಮೊದಲ ಕವಿತೆಗಳಲ್ಲಿ ಒಂದಾದ 'ಭಾವಜೀವಿ'ಯಲ್ಲಿ ಹಳ್ಳಿಯ ಮಧುರ ನೆನಪುಗಳೆಲ್ಲ ಭಾವುಕವಾಗಿ ಬರ್ತವೆ. ಅವು ಉಸಿರು ಕಟ್ಟುವಂತಹ ನಾಗರಿಕ ಸಮಾಜದಲ್ಲಿ ಬದುಕುತ್ತಿರುವ ವ್ಯಕ್ತಿಯ ಹಳಹಳಿಕೆಗಳಂತೆ ಕೂಡ ಇವೆ. ಗ್ರಾಮೀಣ ನೆನಪುಗಳು ಯಾಕೆ ನಿಮಗೆ ಅಷ್ಟು ಭಾವುಕ ಮಾಡ್ತವೆ?**

ಅದು ಬಹಳ ಮಹತ್ವದ ಅಂಶ ನನ್ನ ಕಾವ್ಯದಲ್ಲಿ. ಯಾಕೆಂದರೆ ನನ್ನ ಬಾಲ್ಯವನ್ನು ಕಳೆದದ್ದು ಗದಗ ತಾಲೂಕಿನ ಚಿಕ್ಕ ಹಳ್ಳಿಯಲ್ಲಿ. ಹೊಂಬಳ ನನ್ನ ತಾಯಿ ತೌರಮನೆ. ಶಾಸನಗಳಲ್ಲಿ ಪೊಂಬೊಳಲ್ ಅಂತ ಅದರ ಹೆಸರು. ಅಲ್ಲಿ ನಾನು ಹುಟ್ಟಿದ್ದಷ್ಟೇ. ಆಮೇಲೆ ಬೆಳೆದದ್ದು, ಬಾಲ್ಯ ಕಳೆದದ್ದು, ಶಿರುಂದ ಗ್ರಾಮದಲ್ಲಿ. ಅದು ಗದಗ ಮತ್ತು ಶಿರಹಟ್ಟಿ ನಡುವೆ ಇದೆ. ಅಲ್ಲಿ ನಮ್ಮ ತಂದೆಯವರು ಪ್ರಾಥಮಿಕ ಶಾಲಾ ಶಿಕ್ಷಕರಾಗಿದ್ದರು. ತಂದೆಯವರೇ ನನಗೂ ಶಿಕ್ಷಕರಾಗಿದ್ದರು. ಆವಾಗೆಲ್ಲ ಏಕೋಪಾಧ್ಯಾಯ ಶಾಲೆಗಳೆ. ಎಲ್ಲಾ ವರ್ಗಗಳಿಗೆ ಎಲ್ಲಾ ವಿಷಯಗಳನ್ನು ಅವರೊಬ್ಬರೇ ಹೇಳೋರು. ತಂದೆಯವರ ಒಂದು ಸ್ವಭಾವ ಅಂದ್ರೆ ಬಹಳ ನಿಷ್ಠೆಯಿಂದ ತಮ್ಮ ಕರ್ತವ್ಯ ನೆರವೇರಿಸೋದು. ಮನೆಯಲ್ಲಿ ಹಿಂದಿನ ಕಾಲದ ಪುರಾಣಗಳನ್ನ ನಿಜಗುಣರ, ಬಾಲಲೀಲಾ ಮಹಾಂತಯೋಗಿಗಳ ತತ್ವಪದಗಳನ್ನ ಓದ್ತಾ ಇರೋದು. ಅಲ್ಲೇ ಮುಳುಗುಂದ ಅಂತ, ಹತ್ತಿರದ ಊರು. ಅಲ್ಲಿ ಇನ್ನೊಬ್ಬ ಶಿಕ್ಷಕರಿದ್ದರು. ತಂದೆಯವರು ಅವರಿಂದ ಗುರುದೀಕ್ಷೆ ತೆಗೆದುಕೊಂಡಿದ್ದರು. ಈಗ ನನಗೆ

ಆಶ್ಚರ್ಯ ಆಗ್ತದೆ. ಈ ಕಾಲಕ್ಕೇನೆ ಅವರು ತಮ್ಮ ಇಷ್ಟಲಿಂಗದ ಪೂಜೆಯನ್ನು ಬಿಟ್ರೆ ಉಳಿದ ಯಾವ ದೇವರಿಗೂ ಹೋಗ್ತಿರಲಿಲ್ಲ. ಇಡೀ ಊರಿಗೆ ಒಂದು ದೃಷ್ಟಿಯಿಂದ ಗುರುಗಳ ಹಾಗೆ ಇದ್ದರು. ಸಣ್ಣ ಹಳ್ಳಿ ಅದು. ನಮ್ಮ ಮನೆಯ ಎಡಕ ಬಲಕ ಒಕ್ಕಲುತನದ ಜನ. ನಮ್ಮ ಹಳ್ಳಿಯ ವೈಶಿಷ್ಟ್ಯ ಏನೆಂದರೆ, ಎಲ್ಲಾ ವೃತ್ತಿಯ ಜನ ಅಲ್ಲಿದ್ದರು. ಕಮ್ಮಾರರು, ಬಡಿಗರು, ಅಕ್ಕಸಾಲಿಗರು, ಮಾದರು, ವಡ್ಡರು ಹೀಗೆ ಎಲ್ಲ. ಆಮೇಲೆ ನಮ್ಮ ಊರಿಗೆ ಬಹಳ ಸಮೀಪದಲ್ಲಿ ಲಂಬಾಣಿ ತಾಂಡಗಳಿದ್ದವು. ಅವರು ಪ್ರತಿ ದಿವಸಾನೂ ಬೆಳಿಗ್ಗೇನೇ ಕಟ್ಟಿಗೆ ಹೊರೆ ಹೊತ್ತುಕೊಂಡು ಬರೋದು, ಅಲ್ಲಿ ಮಾರೋದು, ಕುಣಿಯೋದು, ಇದೆಲ್ಲಾ ಇತ್ತು. ಇಡೀ ಹಳ್ಳಿಯ ಜೀವನ ಅದು ನನ್ನ ಮನಸ್ನಲ್ಲಿ ಗಾಢವಾಗಿ ಅಚ್ಚೊತ್ತಿದ ಹಾಗೆ ನನ್ನ ಅನುಭವದೊಳಗೆ ಇಳಿದ ಹಾಗೆ ಇದೆ. ಉದಾಹರಣೆಗೆ ನಮ್ಮೂರ ಜಾತ್ರೇಲಿ ಕಂಡ ತೇರು, ಈಗಲೂ ಕೂಡ ನನ್ನ ಕವಿತೇಲಿ ಒಂದು ಉತ್ಸಾಹದ ಪ್ರತೀಕವಾಗಿ, ಸಂತೋಷದ ಸಂಕೇತವಾಗಿ ಅಥವಾ ಜನಸಮುದಾಯದ ಒಂದು ಅಭಿವ್ಯಕ್ತಿಯಾಗಿ ಬರ್ತದೆ.

**ನಿಮ್ಮ ಕಾವ್ಯ ರಚನೆಯಲ್ಲಿ ಸೋಜಿಗ ತುಂಬ ಮುಖ್ಯವಾದ ಚಾಲಕ ಶಕ್ತಿಯಾಗಿ ಬರ್ತದೆ.**

ಈ ಕುತೂಹಲ, ಸೋಜಿಗ, ಸೆನ್ಸ್ ಆಫ್ ವಂಡರ್ ಅಂತೀವಲ್ಲ ಅದು, ನನಗೆ ಬಾಲ್ಯದಿಂದಲೂ ಇರುವಂಥಾದ್ದು. ನಾನು ನಮ್ಮನೆ ಸಮೀಪದ ಕಂಬಾರ ಸಾಲೆಗೆ ಹೋಗಿ ಆ ಕಬ್ಬಿಣ ಕಾಯೋದು, ಅದನ್ನ ಬಡಿಯೋದು, ಕಿಡಿಹಾರೋದು, ನೋಡ ನೋಡತಾನ ಸೊರ್ ಅಂತ ನೀರುಣಿಸೋದು ಇದನ್ನ ನೋಡ್ಕೋತ ನಿಂತ ಬಿಡ್ತಿದ್ದೆ. ಕ್ರಿಯೇಟಿವ್ ಪ್ರಾಸೆಸ್ ಅಲ್ಲಿತ್ತು ಅಂತ ಕಾಣ್ಸುತ್ತೆ. ಅದೇ ರೀತಿ ಕುಂಬಾರರು. ಕಮ್ಮಾರಕ್ಕಿಂತಲೂ ಇದು ಹೆಚ್ಚು. ಅರಲು ತುಳಿಯೋದು, ಅದನ್ನ ತಿಗರಿಗೆ ಹಚ್ಚೋದು, ನೋಡನೋಡಾಣ ಅದಕ್ಕೆ ಒಂದು ರೂಪ ಕೊಟ್ಟು ಬಿಡೋದು. ಆಕಾರ ಸಣ್ಣದು ದೊಡ್ಡದು ತರತರತರದ್ದು ಇಟ್ಟು ಬಿಡುವಂತಹ ಒಂದು ಕ್ರಿಯೆ.

**ವಿಸ್ಮಯ ನಿಮ್ಮ ಕಾವ್ಯದ ಜೀವಾಳ ನಿಜ. ಆದರೆ ನಾಗರಿಕ ಜಗತ್ತಿಗೆ ಮುಖಾ ಮುಖಿ ಮಾಡುವಾಗ ಯಾಕೆ ಈ ವಿಸ್ಮಯವನ್ನು ವಿರುದ್ಧ ದಿಕ್ಕಿನಲ್ಲಿ ಇಡ್ತೀರಿ? 'ನಾಗರಿಕ ನಾಗರವು ಹುತ್ತ ಕಟ್ಟಿದ ಹಳ್ಳಿ'ಅಂತ ಬರೀತೀರಿ. ನಿಜವಾಗಲೂ ಧಾರವಾಡ ಅಂತಹ ಭಯಭೀತ- ಗೊಳಿಸುವ ನಗರ ಅನಿಸ್ತಾ?**

ಆಗಿನ ಕಾಲಕ್ಕ ೫೦-೬೦ ವರ್ಷಗಳ ಹಿಂದೆ, ನನಗ ಅದು ನಾಗರಿಕ. ಈಗ ಅಷ್ಟು ಅನಿಸೋಲ್ಲ. ಹಾಗೆ ನೋಡಿದರ ಧಾರವಾಡ ದೊಡ್ಡ ಹಳ್ಳೀನೆ! ಧಾರವಾಡ ಆಮೇಲೆ ನನಗೆ ಭಾಳ ಪ್ರಿಯವಾಯ್ತು. ನಮ್ಮೂರಿನ ಒಂದು ಹತ್ತುಪಟ್ಟು ದೊಡ್ಡ ಊರು ಅಂತ ಅನಿಸಿತು. ನಮ್ಮೂರಲ್ಲಿ ಇರುವಾಗ ಜನರ ಮುಗ್ಧತೆ, ಕಷ್ಟ, ಬಡತನ, ಅದರಲ್ಲೂ ಒಂದು ಸಂತೋಷವಾಗಿ ಇರೋವಂಥಾದ್ದು ನೋಡ್ತಿದ್ದೆ ನಾನು. ಏನು ಒಂದು ನಟ್ ಕಡೀಲಿಕ್ಕೆ ಮಟಾಮಟ ಮಧ್ಯಾಹ್ನದಲ್ಲಿ ಹೋಗಬೇಕು ಹಳ್ಳಿಜನ. ಎರಡಾಣೆ ಕೂಲಿ ಅವರಿಗೆ. ಆಮೇಲೆ ಹೆಣ್ಮಕ್ಕಳು ಹತ್ತಿ ಹೊಲಕ್ಕೆ ಹೋಗಿ ಹತ್ತಿ ಬಿಡಿಸ್ಕೊಂಡು ಬರೋದು. ನಮ್ಮೂರ ಹತ್ರ ಎಲಿಶಿರುಂದ ಅಂತ ಮತ್ತೊಂದು ಊರಿತ್ತು. ಅಲ್ಲಿ ಎಲಿತೋಟ ಇರ್ತಿತ್ತು. ಅದಕ್ಕ ಯಾತ ಹೊಡೀತಾರಲ್ಲ, ಅದು ಗಿರ್‍ರುಕೂ ಅಂತ ಸಪ್ಪಳ ಮಾಡ್ತಾ ಇರೋದು. ಆ ನಾದಕ್ಕ ನನ್ನ ಲಕ್ಷ್ಯಯೆಲ್ಲ ಆ ಕಡೆ ಹೋಗೂದು.

**ಹೌದು ಸಾರ್, ನಿಮ್ಮ ಕಾವ್ಯದಲ್ಲಿ ಕಿವಿಯಿಂದ ಕೇಳೋ ನಾದಕ್ಕೆ ತುಂಬಾ ದೊಡ್ಡ ಪಾತ್ರ ಇದೆ....**

ನಮ್ಮ ಊರಿನ ಗೌಡರು ಲಕ್ಷ್ಮಣಗೌಡ್ರು ಅಂತ. ಅವರು ಕುರುಬರು. ಅವರು ಒಂದು ಗ್ರಾಮದೇವತೇನ ಪೂಜೆ ಮಾಡೋರು. ಅದು ನಮ್ಮನಿ ಎದುರಿಗೇನೇ ಇತ್ತು. ಪ್ರತಿವಾರ ಅದರ ಪಲ್ಲಕ್ಕಿ ಸೇವೆ, ಡೊಳ್ಳು ಬಾರಿಸೋದು ಇದೆಲ್ಲ ನಡೀತಾ ಇತ್ತು. ಮತ್ತೆ ಡೊಳ್ಳಿನ ಹಾಡುಗಳು, ಈರಗಾರ ಪದ ಅಂತ ಕರೀತಿದ್ರು ಅವಕ್ಕೆ. ನಮ್ಮ ಮನೆ ಎದುರಿಗೇನೇ ಒಂದು ಅರಳೆಮರ. ಆ ಅರಳೇ ಮರದಲ್ಲಿ ಗಿಳಿಗಳು ಬಹಳ ಬಂದು ಇರ್ತಿದ್ದವು. ಆಮೇಲೆ ಊರ ಹೊರಗಿನ ತೋಟದೊಳಗೆ ನವಿಲು ಇರ್ತಿದ್ದವು. ನವಿಲುಗಳು ಬಂದ ಹೋದ ಮ್ಯಾಲೆ ಗರಿಗಳನ್ನು ಆರಿಸಿಕೊಂಡು ಬರೋದು, ತಂದು ನಮ್ಮ ಪುಸ್ತಕದಲ್ಲಿ ಇಡೋದು ಇಂಥದೆಲ್ಲ ಮಾಡ್ತಾ ಇದ್ದೆ.

**ಆಧುನಿಕ ಕನ್ನಡ ಸಾಹಿತ್ಯದಲ್ಲಿ ತೇಜಸ್ವಿಯವರನ್ನ ಬಿಟ್ಟರೆ ಹಕ್ಕಿಗಳ ಮೇಲೆ ನಿಮ್ಮಷ್ಟು ಆಕರ್ಷಿತರಾದ ಲೇಖಕರೇ ಇಲ್ಲವೇನೋ. ಆಗಸ ಮತ್ತು ಹಕ್ಕಿಗಳನ್ನು ಬಿಟ್ಟು ನಿಮ್ಮ ಕಾವ್ಯವನ್ನು ಕಲ್ಪಿಸಿಕೊಳ್ಳೋಕೆ ಆಗೋಲ್ಲ.**

ಈಗಲೂ ನೋಡಿ, ನಾನು ಎಷ್ಟೊತ್ತಿಗೆ ಮಲಗಿಕೊಂಡ್ರೂ ಕೂಡಾ ಬೆಳಿಗ್ಗೆ ಐದುವರಿ ಆರರೊಳಗೇನೆ ಎಚ್ಚರ ಆಗಿ ಬಿಡ್ತದೆ. ಆ ಎಚ್ಚರ ಆಗೋದೇನೆ ಹಕ್ಕಿಗಳ ಚಿಲಿಪಿಲಿಯಿಂದ.

**ನಮ್ಮ ರಮ್ಯ ಸಂಪ್ರದಾಯದ ದೊಡ್ಡ ಲೇಖಕರೆಲ್ಲ ನಿಸರ್ಗದ ಮೇಲೆ ಬಹಳ ಪ್ರೀತಿಯುಳ್ಳೋರು. ಇದರ ಜತೆಗೇನೆ ನಾಗರಿಕತೆಯನ್ನ, ಆಧುನಿಕತೆಯನ್ನ ಒಂದು ಪಾಸಿಟಿವ್ ಶಕ್ತಿಯಾಗಿ ನೋಡ್ತಾರೆ. ಆದರೆ ನಿಮ್ಮಲ್ಲಿ ಮತ್ತು ಜಿ.ಎಸ್.ಎಸ್. ಅವರಲ್ಲಿ ಆಧುನಿಕ ನಾಗರಿಕತೆ ಬಗ್ಗೆ ಒಂದು ಕಟುವಾದ ನಿಷ್ಠುರವಾದ ನಿಲುವು ಇದೆ ಯಾಕೆ?**

ನಾವು ಹಳ್ಳಿಗಳಲ್ಲಿ ಕಂಡಂಥಾ ಒಂದು ಪ್ರಾಮಾಣಿಕತೆ, ಮುಗ್ಧತೆ, ಸರಳತೆ ಏನಿರ್‍ತಿತ್ತು. ಅದಕ್ಕೆ ಬಹಳ ವಿರುದ್ಧವಾದಂಥಾ ಅಂಶಗಳನ್ನು ಈ ನಾಗರಿಕ ಜೀವನದಲ್ಲಿ ಬಂದಾಗ ಒಮ್ಮೆಲೆ ಕಾಣ್ತಾ ಇದ್ದದ್ದೇ ಬಹುಶಃ ಇದಕ್ಕೆ ಕಾರಣ ಇರಬೇಕು.

**ಅಂದರೆ ಹಳ್ಳಿಗಳಲ್ಲಿ ಈ ಜಾತಿ ಅಸ್ಪೃಶ್ಯತೆಯ ಕ್ರೌರ್ಯದಮನಗಳು ಇರಲಿಲ್ಲವಾ?**

ನಾವು ಇದ್ದಾಗ ಬಹಳ ಕಡಿಮೆ ಪ್ರಮಾಣದಲ್ಲಿತ್ತು. ಈಗ ನೋಡಿ, ನನಗೆ ೭೫ ವರ್ಷ. ಸುಮಾರು, ೬೫ ವರ್ಷದ ಹಿಂದೆ ನಾನು ಅಲ್ಲಿದ್ದೆ. ಆ ಕಾಲಕ್ಕೆ ನಮ್ಮ ಊರಲ್ಲಿ ತಮ್ಮ ತಮ್ಮೊಳಗೆ ಬಡಿದಾಟ ಎಲ್ಲಾ ಇದ್ದವು. ಆದರೆ ಈ ಜಾತಿ ಮತ್ತೊಂದು ಜಾತಿಯ ವಿರುದ್ಧ ಅಂತ ಇರ್ತಿರಲಿಲ್ಲ. ಆಮೇಲೆ ನಮ್ಮೊರಲ್ಲಿ ಎರಡು ಮೂರು ಪಿಂಜಾರ ಮನೆಗಳಿದ್ದವು. ಅಲ್ಲಿ ಒಂದು ಸಣ್ಣ ಮಸೀದಿ ಇತ್ತು. ನಾವು ಏನು ವರ್ಷಾ ಹಬ್ಬ ಮಾಡ್ತಿದ್ದೆವು. 'ಅಲೆಹಬ್ಬ' ಅಂತ, ಆ ಹಬ್ಬದ ದಿವಸ ನಮ್ಮ ಮನೇಲಿ ಚವಂಗೆ ಮಾಡ್ತಾ ಇದ್ದೆವು. ಯಾವ ಕಾಸ್ಟು ಅಂತಿರಲಿಲ್ಲ. ಪ್ರತಿಯೊಂದು ಮನೆಯಲ್ಲೂ ಮಾಡ್ತಾ ಇದ್ದರು. ಆಮೇಲೆ ಮೂರು ಮೈಲಿ ದೂರದ ಶಿರಹಟ್ಟಿ ಫಕೀರ್ ಸ್ವಾಮಿಗಳ ಜಾತ್ರೆಗೆ ಪ್ರತಿ ವರುಷ ಹೋಗ್ತಿದ್ದೆವು. ಅದು ನನ್ನ ಮೇಲೆ ಬಹಳ ಪರಿಣಾಮ ಬೀರಿತು. ಹೋದವರೆಲ್ಲ ಕಾಯಿ ಒಡಿಸ್ತಾ ಇದ್ದೆವು ಮಠಕ್ಕೆ ಹೋಗಿ. ನಗಾರಖಾನೆಗೆ ಹೋಗಿ ಸಕ್ಕರೆ ಓದಿಸೋದು ಯಾರೂ ತಪ್ಪಿಸ್ತಾ ಇರ್‍ಲಿಲ್ಲ. ಬಹಳ ದೊಡ್ಡ ಪ್ರಮಾಣದಲ್ಲಿ ನಡೀತಿತ್ತು ಆ ಜಾತ್ರೆ.

**ಸಾರ್, ನೀವು ಒಂದು ಸಾವಯವ ಸಾಮರಸ್ಯದ ಹಳ್ಳಿಗಳ ಚಿತ್ರವನ್ನು ಕೊಡ್ತಾ ಇದ್ದೀರಿ. ಆದರೆ ಈ ಚಿತ್ರ ಕ್ರಿಟಿಕಲ್ಲಾಗಿಲ್ಲ ಅದು. ಇದಕ್ಕೆ ನೀವು ಕವಿಗಳಾಗಿರುವುದೂ ಒಂದು ಕಾರಣವಿರಬೇಕು. ಗದ್ಯದ ಬರವಣಿಗೆ ಸಮಾಜವನ್ನು ವೈಚಾರಿಕವಾಗಿ ಗ್ರಹಿಸಲು ಹೆಚ್ಚು ಆಸ್ಪದ ಕೊಡುವಂಥಾ ಒಂದು**

**ಪ್ರಕಾರ. ನಮ್ಮ ಗ್ರಾಮೀಣ ಲೋಕವನ್ನು ತುಂಬ ಕ್ರಿಟಿಕಲ್ಲಾಗಿ ಕನ್ನಡದ ಕಾದಂಬರಿ ಕತೆಗಳು ಚಿತ್ರಿಸಿವೆ. ಕವಿತೆ ಹೆಚ್ಚು ವೈಯಕ್ತಿಕವಾದ ಹಾಗೂ ಭಾವಾನಾತ್ಮಕವಾದ ಜಗಿತಗಳನ್ನು ಮಾಡೋದರಿಂದ, ಈ ಬಗೆಯ ವಿಮರ್ಶಾತ್ಮಕ ನೋಟವನ್ನು ಕೊಡಲಿಕ್ಕೆ ಕಾವ್ಯ ಪ್ರಕಾರವೂ ಒಂದು ತೊಡಕಾಗಿರಬಹುದು....**

ಅಂದರೆ ಕತೆಯಾಗಲೀ ಕಾದಂಬರಿಯಾಗಲೀ ಬರೆಯುವಾಗ, ಬಹಳ ವಾಸ್ತವ ಪ್ರಪಂಚವನ್ನು ಚಿತ್ರಿಸಬೇಕಾಗುತ್ತೆ. ಇಲ್ಲಿ ಕವಿತೆಯಲ್ಲಿ ವಾಸ್ತವ ಮತ್ತು ಕಲ್ಪನೆ ಎರಡೂ ಕೂಡಿರ್ತವೆ. ನನ್ನ ಪದ್ಯದಲ್ಲಿ ಬರ್ತದೆ, "ಕೆರವು ಹೊಲಿಯುವ ದೀನ ದಲಿತ ಮಾದರ ದುರುಗ, ಮುಟ್ಟ ಬೇಡಿರಿ ತಂದೆ ಎಂಬ ನುಡಿಗೆ, ನನ್ನೆದೆಯ ಕಸಿವಿಸಿಯ ಹೇಳತೀರದು ಆಗ, ಬಾಲಕರಿಗೆಲ್ಲಿಯದು ಮಡಿ ಮೈಲಿಗೆ" ಅಂತ. ನಮ್ಮ ಶಾಲೆಯ ಎದುರಿಗೆ ನೀರು ಸೇದೋ ಬಾವಿ ಇತ್ತು. ಆದರ ಸುತ್ತಲೂ ಅವರು ಗಡಿಗೆಗಳನ್ನ ಇಟ್ಟುಕೊಂಡು ಪ್ರತಿಯೊಬ್ಬರಿಗೂ "ನೀರು ಹಾಕ್ರಿ ನೀರು ಹಾಕ್ರಿ" ಅಂತ ಕೇಳೋರು. ಇವರು ತಿಳಿದಾಗ ಒಂದೊಂದು ಕೊಡ ನೀರು ಸುರುವಿ ಹೋಗೋರು. ಇದು ನನ್ನ ಮನಸ್ಸಿಗೆ ಬಹಳಾ ನೋವು ಮಾಡ್ತಾ ಇತ್ತು.

**ಆ ಹೊತ್ತಿನ ಸ್ವಾತಂತ್ರ್ಯ ಚಳುವಳಿ ನಿಮಗೆ ಹೇಗೆ ಕಾಣಿಸುತಾ ಇತ್ತು?**

ಕಣವಿ : ನಾನು ಊರು ಬಿಟ್ಟ ಮೇಲೆ ನಾನು ಕಲ್ತಿದ್ದು ಇಲ್ಲೇ ಧಾರವಾಡದ ಇನ್ನೊಂದು ಹಳ್ಳೀಲಿ ಗರಗ ಅಂತ. ಆ ಹಳ್ಳೀಲಿ ಆ ಹೊತ್ತಿಗಾಗಲೇ ಸ್ವಾತಂತ್ರ್ಯದ ಚಳುವಳಿ ಪ್ರಾರಂಭವಾಗಿತ್ತು. ೩೮-೩೯ನೇ ಇಸವಿ. ಆ ಊರಿನ ಭಾಳ ಜನ ಖಾದಿ ತೊಡ್ತಾ ಇದ್ದರು. ನನ್ನ ಜೊತೆಗೆ ಸಾಲಿಗೆ ಬರೋವಂಥ ಹುಡುಗರೂ ಖಾದಿ ತೊಡ್ತಾ ಇದ್ದರು. ಮತ್ತೆ ಈ ಧಾರವಾಡಕ್ಕೆ ಯಾರ್‍ಯಾರೂ ಬರ್ತಾ ಇದ್ರಲ್ಲ ಕಾಂಗ್ರೆಸ್ ನಾಯಕರು, ಅವರೆಲ್ಲರೂ ಈ ಹಳ್ಳಿಗೆ ಬಂದು ಕಾರ್ಯಕ್ರಮ ನಡೆಸಿಕೊಡೋರು. ಪ್ರಭಾತ್ ಫೇರಿ ಹೊತ್ನಲ್ಲಿ ನಾನೇ ಹಾಡ್ತಿದ್ದೆ. "ಎಂಥಾ ಶ್ಯಾಣ್ಯಾ ಮಹಾತ್ಮಗಾಂಧಿ, ಹಿಂದೂಸ್ತಾನಕ ಅವನಾ ತಂದಿ" ಆಗಲೇ ಪ್ರಸಿದ್ಧ ಆಗಿರುವಂಥಾ ಹಾಡು, ಆಮೇಲೆ ಅಲ್ಲಿ ಒಳ್ಳೇ ಕಾರ್ಯಕರ್ತರು ಇದ್ದರು. ಅಲ್ಲೆ ಗರಗದಲ್ಲಿ ಡೋರರ ಕೇರಿ ಇತ್ತು. ಅಲ್ಲಿ ಮಾಂಸದ ಮಾರಾಟ ಇತ್ತು. ಅದು ನನಗೆ ಸ್ವಲ್ಪ ನೋಡ್ಲಿಕ್ಕೆ ಆಗ್ತಿದ್ದಿಲ್ಲ. ಆದರೆ ಈ ನಾಯಕರು ಅಲ್ಲಿ ಹೋಗಿ ಆ ಸಣ್ಣಸಣ್ಣ ಮಕ್ಕಳಿಗೆಲ್ಲಾ ಸ್ನಾನ ಮಾಡಿಸೋದು, ಬಟ್ಟೆ ಹಾಕಿಸೋದು ಈ ಕೆಲಸವನ್ನ ಕೂಡ ಮಾಡ್ತಾ ಇದ್ದರು.

**ನಿಮಗೆ ಕವಿತೆ ಬರೆಯಲು ಆಗಿನ ಧಾರವಾಡದ ಪರಿಸರ ಯಾವ ರೀತಿ ಪೂರಕವಾಗಿತ್ತು ಅಂತ ತಿಳಿಯೋ ಕುತೂಹಲ ಇದೆ.**

ನಾನು ಹೈಸ್ಕೂಲ್‌ನಲ್ಲಿ ಇದ್ದಾಗ ಧಾರವಾಡದ ಮುರುಘಾಮಠದ ಪ್ರಸಾದ ನಿಲಯದಲ್ಲಿ ಇದ್ದೆ. ನನ್ನ ಮನಸ್ಸಿನ ಮೇಲೆ ತುಂಬಾ ದೊಡ್ಡ ಪರಿಣಾಮ ಬೀರಿದ್ದು ಮೃತ್ಯುಂಜಯ ಸ್ವಾಮಿಗಳ ವಿರಕ್ತ ಜೀವನ. ಆಮೇಲೆ ಹೈಸ್ಕೂಲ್‌ನಲ್ಲಿದ್ದಾಗ ಸಣ್ಣದೊಂದು ಲೈಬ್ರರಿ ಇತ್ತು. ಶಂಕರಭಟ್ಟರ 'ನಲ್ಮೆ' ಅಲ್ಲಿ ಬೇಂದ್ರೆಯವರ 'ಗರಿ' ಕುವೆಂಪುರವರ 'ನವಿಲು' ಈ ಪುಸ್ತಕಗಳು ಅಲ್ಲಿದ್ದವು. ಇವನ್ನೆಲ್ಲ ಓದುವಾಗ ನನಗೆ ಮಧುರಚೆನ್ನರ 'ನನ್ನನಲ್ಲ' ಬಹಳ ಹಿಡಿಸಿಬಿಟ್ಟಿತು. ಬೇಂದ್ರೆಯವರನ್ನ ಧಾರವಾಡದಲ್ಲಿ ನೋಡ್ತಾ ಇದ್ದೆ, ಅವರ ಕಾವ್ಯವಾಚನ ಕೇಳ್ತಾ ಇದ್ದೆ. ಅಷ್ಟೊತ್ತಿಗೆ ಅವರು ಸೊಲ್ಲಾಪುರಕ್ಕೆ ಕನ್ನಡ ಅಧ್ಯಾಪಕರಾಗಿ ಹೋದರು. ಹಿರೇಮಲ್ಲೂರ ಈಶ್ವರನ್ ಅವರು ನನ್ನ 'ಕಾವ್ಯಾಕ್ಷಿ' ಪುಸ್ತಕವನ್ನು ಹಾಕಿದರು. ಅದಕ್ಕೆ ಬೇಂದ್ರೆಯವರು ಮುನ್ನುಡಿ ಬರೆದರು. ನಾನು ಅವರಿಗೆ ಪತ್ರ ಬರೆದಾಗ, ಅವರು ೧೦-೧೨ ದಿವಸದಲ್ಲಿ ಮುನ್ನುಡಿ ಬರೆದು ಕಳಿಸಿಬಿಟ್ಟರು. ಬಹಳ ಆಶ್ಚರ್ಯ ಆಯಿತು. ನನಗೆ ಪರಿಚಯ ಇರಲೇ ಇಲ್ಲ. ಮುಂದೆ ನಮ್ಮ ರೂಮಿನಲ್ಲಿ ನಮ್ಮ ಕೀರ್ತಿನಾಥ ಕುರ್ತಕೋಟಿ, ಶಂಕರ ಮೊಕಾಶಿ ಪುಣೇಕರ, ಶಿವೇಶ್ವರ ದೊಡ್ಡಮನಿ, ವಸಂತ ಕವಲಿ ಈ ಸ್ನೇಹಿತರೆಲ್ಲಾ ಕೂಡ್ಕೊಂಡು 'ಕಾವ್ಯಾನುಭವ ಮಂಟಪ' ಅಂತ ಮಾಡಿಕೊಂಡಿವಿ. ವಾರಕ್ಕೊಮ್ಮೆ ಕೂಡಿಕೊಂಡು, ಕವಿತೆ ಓದೋದು, ವಿಮರ್ಶೆ ಮಾಡೋದು, ಚಹಾ ಕುಡಿಯೋದು ಇಂಥದೆಲ್ಲ ಇತ್ತು. ಗೋಕಾಕ್ ಇವರು ಕೊಲ್ಲಾಪುರದ ರಾಜಾರಾಮ್ ಕಾಲೇಜಿನಲ್ಲಿ ಪ್ರಿನ್ಸಿಪಾಲರಾಗಿದ್ದರು. ಧಾರವಾಡಕ್ಕೆ ಬಂದಾಗ ನಾವು ಅವರನ್ನ ನಮ್ಮ ಕಾವ್ಯಾನುಭವ ಮಂಟಪಕ್ಕೆ ಕರಿಸಿದಿವಿ. ಅದೇ ಮೊದಲನೇ ಪರಿಚಯ ಬೇಂದ್ರೆಯವರ ಜೊತೆಗೂ ಆದದ್ದು. ಅವರೂ ಕವಿತೆ ಓದಿದರು. ಮುಂದೆ ನಾನು ಬಿ.ಎ ಫೈನಲ್‌ನಲ್ಲಿದ್ದಾಗ ನನ್ನ 'ಭಾವಜೀವಿ'ಗೆ ಗೋಕಾಕರು ಮುನ್ನುಡಿ ಬರೆದರು.

**'ಭಾವಜೀವಿ'ಯನ್ನ ಮಧುರಚೆನ್ನರಿಗೆ ಅರ್ಪಣೆ ಮಾಡಿದ್ದಿರಿ....**

(ನಗುತ್ತ) ಆವಾಗ ನನಗೆ ಅರ್ಪಣೆ ಮಾಡಬೇಕೆಂದರೆ ಕೇಳಬೇಕು ಅಂತ ಗೊತ್ತಿರಲಿಲ್ಲ. 'ಹಲಸಂಗಿಯ ಕಾವ್ಯರ್ಷಿ ಮಧುರಚೆನ್ನರಿಗೆ' ಅಂತ ಬರೆದಿದ್ದೆ. ಅದು ಮುಟ್ಟಿದಾಗ ಮಧುರಚೆನ್ನರು ನೋಡಿ 'ಎಲ್ಲಾ ಚೆನ್ನಾಗಿದೆ. ಆದರೆ ಈ

ಕಾವ್ಯರ್ಷಿ ಅನ್ನೋ ಪದಾನ ಬಿಡಬೇಕಾಗಿತ್ತು' ಅಂತ ಅಂದರಂತೆ. ಅಲ್ಲಿದ್ದ ಗುರುಲಿಂಗ ಕಾಪಸೆ ಅವರು ಹೇಳಿದ್ದು ಇದು.

**ಮಧುರ ಚೆನ್ನರ ಮೇಲಿನ ನಿಮ್ಮ ಆಕರ್ಷಣೆಗೂ ನಿಮ್ಮ ಕಾವ್ಯದಲ್ಲಿ ಗ್ರಾಮೀಣ ಲೋಕವನ್ನು ಮಧುರವಾಗಿ ಹಿಡಿದುಕೊಡುವ ಗುಣಕ್ಕೂ ಸಂಬಂಧವಿರಬಹುದು. ನಿಮಗೆ ಮಧುರಚೆನ್ನರ ಬೇಟಿ ಯಾವಾಗ ಆಯಿತು?**

ಸಿದ್ಧ ಬಸಪ್ಪ ಗಿಡ್ಡನವರ ಅಂತ ನಮ್ಮ ಮಾವನವರು ಬಿಜಾಪುರದಲ್ಲಿ ಇದ್ದರು. ಮಧುರಚೆನ್ನರಿಗೂ ನಮ್ಮ ಮಾವನವರಿಗೂ ಬಹಳ ಸಂಬಂಧವಿತ್ತು. ಮಧುರಚೆನ್ನರನ್ನ ನನ್ನ ಲಗ್ನದ ನಿಶ್ಚಯ ಕಾಲಕ್ಕೇನೆ ನಾನು ಮೊಟ್ಟಮೊದಲು ನೋಡಿದ್ದು. ತೆಳ್ಳಗೆ ಇದ್ದರು. ವಿನಯದ ವ್ಯಕ್ತಿ ಅವರು. ಎಷ್ಟು ಎಂದರೆ, ನಾವು ನಮಸ್ಕಾರ ಮಾಡಿದರೆ ತಾವೂ ಕೈ ಮುಗಿದು ಆಕಾಶಕೆತ್ತಿ ಹೀಗೆ ಮಾಡೋರು. ಅಂದರೆ ತಾಯಿಗೆ ಅರ್ಪಣೆ ಮಾಡೋರು.

**ಆದರೆ ಮಧುರಚೆನ್ನರನ್ನು ಆವರಿಸಿಕೊಂಡಿದ್ದ ಅರವಿಂದ ದರ್ಶನ ನಿಮ್ಮ ಕಾವ್ಯದ ಮೇಲೆ ಹೆಚ್ಚು ಕವಿಯಲಿಲ್ಲ....**

ಇಲ್ಲ, ಅರವಿಂದ ಆಶ್ರಮಕ್ಕೆ ಒಮ್ಮೆ ಹೋಗಿ ಬಂದಿದ್ದೀನಿ, ಮದರ್ ಇದ್ದಾಗ, ಯಾಕೋ ನನಗೆ ಅವರ ತಾತ್ವಿಕವಾದಂಥ ಜಿಜ್ಞಾಸೆ ಅಷ್ಟು ಪ್ರವೇಶ ಕೊಡಲಿಲ್ಲ. ಬಹುಶಃ ಇನ್ನೊಂದು ಕಾರಣ ನಮ್ಮ ಶಿವಶರಣರ ಅನುಭಾವದ ಮಾಗಿ, ಅದರ ಒಂದು ಸರಳತೆ, ರೀತಿ, ಭಾಷೆ ಅದು ನನಗೆ ಮನಸ್ಸಿಗೆ ಹೆಚ್ಚು ಹಿಡಿಸಿತ್ತು. ಇದಕ್ಕಿಂತ ಹೆಚ್ಚಿನದನ್ನು ನಾನು ಹುಡುಕಾಡುತ್ತಾ ಇರ್ತಿದ್ದೆ. ಅದು ನನಗೆ ಕಂಡು ಬರ್ತಿರಲಿಲ್ಲ. ಸ್ವಲ್ಪ ಅರ್ಥ ಮಾಡಿಕೊಳ್ಳೋಕೆ ಪ್ರಯತ್ನ ಪಡ್ತಿದ್ದೆ. ಮುಂದೆ ಮಧುರಚೆನ್ನರ ಜೊತೆ ಹೆಚ್ಚು ಮಾತಾಡಬೇಕು ಅಂತ ಆಸೆ ಇಟ್ಕೊಂಡಿದ್ದೆ. ಆದರೆ ಅವರು ಬೇಗ ತೀರ್ಕೊಂಡು ಬಿಟ್ರು.

**ಮಧುರಚೆನ್ನರು ಕೂಡ ತಮ್ಮ ಮೊದಲ ಘಟ್ಟದಲ್ಲಿ ವಚನಕಾರರ ಬಗ್ಗೆ ಆಕರ್ಷಿತರಾಗಿದ್ದವರು. ಅರವಿಂದಾಶ್ರಮ ಸಂಪರ್ಕ ಬಂದ ಬಳಿಕ ಆ ಪ್ರಭಾವ ಬಿಟ್ಟು ಕೊಡ್ತಾ ಹೋದರು. ಇದೊಂದು ಮಾರ್ಮಿಕ ವಿಚಾರ. ಸಮಾಜದ ಬದಲಾವಣೆಯನ್ನು ಸಂಘರ್ಷ ರೂಪದಲ್ಲಿ ಗ್ರಹಿಸುವ ಲೇಖಕರಿಗೆ ವಚನಕಾರರ ಪ್ರಭಾವ ಹಾಗೆ ಕಳಚಿ ಹೋಗೋದಿಲ್ಲ.**

ಅರವಿಂದಾಶ್ರಮಕ್ಕೆ ಹೋಗಿ ಬಂದ ಮೇಲೂ ಮಧುರಚೆನ್ನರು ವಚನಕಾರರ

ಪ್ರಭಾವ ಇಟ್ಕೊಂಡಿದ್ದರು. 'ನನ್ನ ನಲ್ಲ' ಆರಂಭ ಮಾಡುವಾಗಲೂ ಅವರು ವಚನ ಕೋಟ್ ಮಾಡ್ತಾರ. "ಎಲ್ಲರ ಪರಿಯಂತಲ್ಲ ನೋಡವ್ವ ನಮ್ಮ ನಲ್ಲ, ಸುಳಿಯಲಿಲ್ಲ ಸುಳಿದು ಸಿಂಗಾರವ ಮಾಡಲಿಲ್ಲ" ಅಂತ. ಅವರು ಅರವಿಂದರಲ್ಲಿ ಮತ್ತು ಮಾತೆಯವರಲ್ಲಿ ಯಾವುದೋ ಒಂದು ವಿಶೇಷತೆ ಕಂಡಿರಬೇಕು. ಆದರೆ ಅವರು ಶರಣರನ್ನ ಬಿಡ್ಲಿಲ್ಲ. ಈಗ ಅವರ ಆತ್ಮಕಥೆಯನ್ನು ನೋಡುವಾಗ ಅಲ್ಲಿ ಹಲಸಂಗಿಯಲ್ಲಿ ಯಾವುದೋ ಮಲ್ಲಿಕಾರ್ಜುನನ ಗುಡಿ ಇತ್ತು. ಅದು ಅವರ ಮನೆದೇವತೆ. ಆಮೇಲೆ ಮನೆಯವರೆಲ್ಲ ಹೋಗಿ ಬೇಡ್ಕೋತ್ತಿದ್ದಾಗ ಇವರು ಅದರಲ್ಲಿ ಭಾಗಾನೇ ವಹಿಸ್ತಿದ್ದಿಲ್ಲವಂತೆ, ಹೀಗೆಲ್ಲ ಬರ್‍ತದೆ ಅಲ್ಲಿ. ಅಂದರೆ ಅನುಭಾವದ ದೃಷ್ಟಿಯಿಂದ ಶರಣರನ್ನ ಮೈಗೂಡಿಸಿಕೊಂಡಿದ್ದರು. ಅರವಿಂದ ದರ್ಶನ ಹಾಗೂ ಶರಣರ ಅನುಭಾವ ಹ್ಯಾಗೆ ಎರಡೂ ಒಂದೆ ಇದೆ ಅಂತ ಲೇಖನವನ್ನೂ ಬರೆದರು. ಈ ರೀತಿ ಹೊಂದಿಸಲಿಕ್ಕೆ ಅವರು ಪ್ರಯತ್ನ ಪಡತಾ ಇದ್ದರು.

**ಅರವಿಂದ ದರ್ಶನ ಹೆಚ್ಚು ಆದರ್ಶವಾದಿ ಮಾನವತೆಯ ಕಡೆಗೆ ಹೋಗ್ತದೆ. ವರ್ತಮಾನವನ್ನು ಮುಖಾಮುಖಿ ಮಾಡೋಕೆ ವಚನಕಾರರು ಹೆಚ್ಚು ರೆಲವಂಟ್.**

ಭಾಷೆ ದೃಷ್ಟಿಯಿಂದಾತು, ತತ್ತ್ವ, ಅನುಭಾವ ದೃಷ್ಟಿಯಿಂದಾತು, ನಡೆ ನುಡಿಯಿಂದ, ಜನಸಮುದಾಯವನ್ನು ಕಟ್ಟಿಕೊಂಡು ಹೋಗೋ ದೃಷ್ಟಿಯಿಂದಾಯಿತು- ಎಲ್ಲಾ ದೃಷ್ಟಿಯಿಂದ ನೋಡಿದಾಗ ವಚನಕಾರರು ಹೆಚ್ಚು ನಮಗೆ ಹತ್ತಿರದವರು ಅನ್ನಿದೆ.

**ವಚನ ಸಾಹಿತ್ಯ ಕವಿಯಾಗಿ ನಿಮಗೆ ಹೆಚ್ಚು ಪ್ರೇರಣೆ ನೀಡಿದೆ. ಆದರೆ ವಚನಕಾರರಲ್ಲಿ ಬಸವಣ್ಣನವರನ್ನು ಮಾತ್ರ ನೀವು ಸ್ವೀಕರಿಸಿದಂತಿದೆ. ಏನು ಕಾರಣ?**

ಇಡೀ ಶರಣರ ಸಮೂಹದಲ್ಲಿ ಬಸವಣ್ಣನವರ ವ್ಯಕ್ತಿತ್ವ ಎಲ್ಲಾ ದೃಷ್ಟಿಯಿಂದಲೂ ದೊಡ್ಡದು. ಅವರು ಸಂಸಾರಿಯಾಗಿದ್ದರು. ಅವರ ನಡೆ ನುಡಿ, ಅನುಭವ ಮಂಟಪದಲ್ಲಿ ಅವರು ಇರತಕ್ಕಂಥಾ ರೀತಿ, ಅಲ್ಲಮಪ್ರಭುವಿನ ಜೊತೆಗೆ ನಡ್ಕೊಳ್ತಕ್ಕಂಥಾ ರೀತಿ, ಆ ಬಿಜ್ಜಳನ ಜೊತೆಗೆ ಇರುವಂಥಾ ರೀತಿ, ಅವರ ವಿನಯ, ಆ ಭಕ್ತಿ, ಭಕ್ತಿ ಅಂದರೆ ವೀಕ್‌ನೆಸ್ ಅಂತ ಅಲ್ಲ. ಒಂದು ವಚನದಲ್ಲಿ ಬರ್ತದೆ "ಬೀಗಿ ಬೆಳೆದ ಗೊನೆವಾಳೆಯಂತೆ ಬಾಗಿಕೊಂಡಿಪ್ಪ ನಮ್ಮ ಶರಣ."

ಅಂದರೆ ಬೆಳೀಬೇಕು ಮೊದಲು. ಅದು ಗೊನೆ ಆದಾಗ ಬಾಗುತ್ತೆ ತಾನಾಗಿ. ಇದು ಸಹಜವಾದ ವಿನಯ.

**ಬಸವಣ್ಣನವರ ಭಕ್ತಿ ವಿನಯ ನಿಮ್ಮಲ್ಲೂ ಇದೆ. ಆದರೂ ಅಧಿಕಾರಸ್ಥ ಫಿಲಾಸಫಿಗಳ ವಿರುದ್ಧದ ಅವರ ನಿಷ್ಠುರ ನಿಲುವು ಇದೆಯಲ್ಲ. ಅದು ನಿಮ್ಮ ಕಾವ್ಯದಲ್ಲಿ ಹೆಚ್ಚು ಕೆಲಸ ಮಾಡಿದ ಹಾಗೆ ಇಲ್ಲ.**

ಬಹುಶಃ ವ್ಯಕ್ತಿಯನ್ನು ನೋಡಿದಾಗ ನನಗೆ ಅಲ್ಲಿರುವಂಥ ಒಳ್ಳೆ ಗುಣ ಕಾಣಿಸ್ತದೆ. ಅದು ನಾನು ಸ್ವೀಕಾರ ಮಾಡ್ಕೋಬೇಕು ಅನ್ನುವಂಥದ್ದು. ಆದರೆ ಯಾವುದೇ ವ್ಯಕ್ತಿಯಲ್ಲಿ ಸಂಪೂರ್ಣ ಒಳ್ಳೆಯದು ಇರುವುದಿಲ್ಲ. ಅಂದಾಗ ಯಾವುದೋ ಒಂದು ಕೆಟ್ಟ ಅಂಶದ ಸಲುವಾಗಿ ಆ ಇಡೀ ವ್ಯಕ್ತಿನ ದೂಷಿಸುವುದು ಒಳ್ಳೆಯದಲ್ಲ. ಹೀಗಾಗಿ ನನಗೆ ಪೋಷಕವಾಗೋ ರೀತಿಯಲ್ಲಿ ಆ ಒಳ್ಳೆದನ್ನು ಸ್ವೀಕಾರ ಮಾಡ್ತಿದ್ದೆ. ಅಂದರೆ ಕೆಟ್ಟದ್ದನ್ನು ನಾನು ಗಮನಿಸುವುದೇ ಇಲ್ಲ ಅಂತ ಅಲ್ಲ. ಜಗತ್ತಲ್ಲಿ ಒಳ್ಳೆಯ ಹಾಗೂ ಒಳ್ಳೆದಲ್ಲದ್ದು ಅಂತ ಎರಡೇ ಇರೋದು ಅಂತ ಹೇಳ್ತಾರೆ.(ನಗು)

**೨೦ನೇ ಶತಮಾನದ ಕನ್ನಡ ಸಾಹಿತ್ಯದಲ್ಲಿ ನೀವು ಹಾಗೂ ಮಾಸ್ತಿಯವರು ಒಂದು ವಿಷಯದಲ್ಲಿ ಸಮಾನ ಮನೋಭಾವದವರು. ಅದೆಂದರೆ ಬದುಕಿನ ಕರಾಳಮುಖಗಳನ್ನು ಇಣುಕಿ ನೋಡೋಕೆ ಒಂದು ಬಗೆಯ ಹಿಂಜರಿಕೆ ತೋರುವವರು. ಭೀಭತ್ಸವನ್ನ ಗ್ರಹಿಸೋಕೆ ಹಿಂಜರಿಕೆ ತೋರುವ ಈ ಗುಣ. ಅದನ್ನು ಮುಖಾಮುಖಿಗೆ ಕೂಡ ಪ್ರೇರಿಸದೆ ಹೋಗಬಹುದು. ಇದು ಬರವಣಿಗೆಗೇನೆ ಒಂದು ಮಿತಿಯನ್ನು ತಂದು ಕೊಡಬಹುದು.**

ಇರಬಹುದು. ಬಹುಶಃ ವಿಮರ್ಶಕರಾದ ನೀವೇ ಹೇಳಬೇಕು ಅದನ್ನ. ನನ್ನ ದೃಷ್ಟಿ ಏನು ಅನ್ನೋದನ್ನ ಹೇಳಿದನೆಲ್ಲ. ಮಾಸ್ತಿಯವರ ಸಣ್ಣಕತೆಗಳನ್ನು ನಾನು ಹೈಸ್ಕೂಲ್‌ನಲ್ಲಿದ್ದಾಗ ಓದಿದೆ. 'ಕರ್ನಾಟಕದ ಜನತೆಯ ಸಂಸ್ಕೃತಿ' ಓದಿದೆ. ಆಗ ಮಾಸ್ತಿ ನನಗೆ ಹೆಚ್ಚು ಸಮೀಪ ಅನಿಸ್ತಿತ್ತು. 'ಕರ್ನಾಟಕ ಜನತೆಯ ಸಂಸ್ಕೃತಿ'ಯಲ್ಲಿ ಒಂದು ಘಟನೆಯನ್ನು ನಿರೂಪಣೆ ಮಾಡ್ತಾರೆ ಮಾಸ್ತಿಯವರು. ಅವರು ಕಮೀಶ್‌ನರಿದ್ದಾಗ ಒಂದು ಹಳ್ಳಿಗೆ ಹೋಗ್ತಾರೆ-ಚೆನ್ನೇಗೌಡರು ಅಂತ ಅವರನ್ನ ನೋಡೋಕೆ. ಮನೆಗೆ ಹೋದಾಗ, ಆ ಮನೆಯ ಹೆಣ್ಮಗಳು ಹೊರಗೆ ಬಂದು "ಚೆನ್ನೇಗೌಡರು ಇದಾರಾ" ಅಂತ ಕೇಳಿದರೆ "ಶಿವಪುರಿಗೆ ಹೋಗಿದ್ದಾರೆ" ಅಂತಾಳೆ. ಇವರು ಆ 'ಶಿವಪುರಿ ಸಮೀಪ ಇದೆಯೋ, ದೂರಿದೆಯೋ' ಅಂತ

ಕೇಳಿದಾಗ, ಹತ್ರ ಇದ್ದೋರು "ಇಲ್ಲ ಅವರು ತೀರ್ಕೊಂಡಿದ್ದಾರೆ" ಅಂತ ಹೇಳತಾರೆ. ನಾನು ಅಂಥಾ ಜನಾನ ಬಾಲ್ಯದಲ್ಲಿ ನೋಡಿದ್ದೆ ನನ್ನ ಹಳ್ಳಿಯಲ್ಲಿ.

**ವಚನಕಾರರ ಸಾಮಾಜಿಕ ಸಂಘರ್ಷದ ಗುಣದ ಆವಾಹನೆ ಮಾಡಿಕೊಳ್ಳೋ ಪ್ರಶ್ನೆ......**

ಇಲ್ಲ, ನಾನು ವಿಡಂಬನೆ ರೀತಿಯಲ್ಲಿ ಅದನ್ನ ಮಾಡಿದ್ದೇನೆ. ಹಂಗ ನೋಡಿದರೆ ವಿಡಂಬನೆಯ ಅಂಶಗಳನ್ನ ಸೂಕ್ಷ್ಮವಾದಂಥ ವ್ಯಂಗ್ಯ ರೀತಿಯಲ್ಲಿ ನಾನು ಉಪಯೋಗ ಮಾಡಿಕೊಂಡಿದ್ದೇನೆ. ಈಗ ಅಂಥಾ ಒಂದು ಹಿಂಸೆಯನ್ನು ಪ್ರತಿಭಟನೆ ಮಾಡುವಾಗಲೂ ಸಹಿತ ಬಸವಣ್ಣನೋರು "ವೇದವನೋದಿದವರ ಮುಂದೆ ಅಳು ಕಂಡ್ಯಾ ಎಲೆ ಹೋತೆ, ಶಾಸ್ತ್ರಗಳನೋದಿದವರ ಮುಂದೆ ಅಳು ಕಂಡ್ಯಾ ಎಲೆ ಹೋತೆ, ನೀನು ಅತ್ತುದಕ್ಕೆ ತಕ್ಕುದ ಮಾಡುವ ನಮ್ಮ ಕೂಡಲ ಸಂಗಮದೇವಾ" ಈ ಹೇಳೋ ರೀತಿಯಿದೆಯಲ್ಲ, ಇದು ನನಗೆ ಪ್ರಿಯ. ಬಸವಣ್ಣನವರ ಹಿಂಸೆಯ ವಿರುದ್ಧದ ಪ್ರತಿಭಟನೆ ಎಷ್ಟು ಅಹಿಂಸಾತ್ಮಕವಾದ ರೀತಿಯಲ್ಲಿ ಇತ್ತು. ಅದು ನನಗೆ ಭಾಳ ಪ್ರಿಯವಾದದ್ದು. ಭಾಷೆ ತತ್ತ್ವ ಶೈಲಿ ಎಲ್ಲಾ ಕೂಡಿಕೊಂಡು ಸಮರಸವಾಗಿ ಬರುವಂತಹ ರೀತಿಯದು. ಅಷ್ಟು ಉಳಿದವರಲ್ಲಿ ಇದೆ ಅನಿಸೋದಿಲ್ಲ. ಈಗ 'ಮನೆಯೊಳಗೆ ಮನೆಯೊಡೆಯ ಇದ್ದಾನೋ, ಇಲ್ಲವೋ' ಅನ್ನುವ ಸರಳವಾದ ಒಂದು ಮಾತಾಗಲಿ, ಆಮೇಲೆ ಇನ್ನೊಂದು ಕಡೆ ಬರ್ತದೆ. "ಕರುವನಗಲಿಸಿ ತಾಯ ಮರುಗಿಸಿ ಮೊಲೆಹಾಲ ಕರೆದುಣ ಬೇಡವೋ" ಏನು ಆರ್ತತೆ ಕರುಣೆಯಿದೆ ನೋಡಿ. ಈ ಇಡೀ ವಾಕ್ಯದಲ್ಲಿ ಒಂದು ಒತ್ತಕ್ಷರಾನೂ ಇಲ್ಲ. ಅಂದರೆ ಭಾಷೆಯಲ್ಲೂ ಕೂಡಾ ಎಷ್ಟು ಆಹಿಂಸಾತ್ಮಕ ಇದೆ ಅಂದರೆ, ನಮ್ಮ ಮನಸ್ಸಿನ ಫೀಲಿಂಗು ಯಾವ ಭಾಷೆಯನ್ನು ಹ್ಯಾಗೆ ಆರಿಸ್ಕೊಳ್ತದೆ ಅನ್ನೋದು ಬಸವಣ್ಣನವರ ವಚನದಲ್ಲಿ ನನಗೆ ಯಾವತ್ತೂ ಸೋಜಿಗ.

**ಕುತೂಹಲದ ಸಂಗತಿ ಅಂದರೆ, ಧಾರವಾಡ ಭಾಗದಿಂದ ಬರುವ ಲೇಖಕರಾದ ನಿಮಗೆ ಮತ್ತು ಬಸವರಾಜ ಕಟ್ಟೀಮನಿಯವರಿಗೆ ಬೇಂದ್ರೆಯವರಿಗಿಂತ ಕುವೆಂಪು ಅವರ ಕಡೆ ಸೆಳೆತ ಹೆಚ್ಚು. ಕಾದಂಬರಿಕಾರರಾಗಿ ಕಟ್ಟಿಮನಿಯವರಿಗೆ ಕುವೆಂಪು ಸೆಳೆತವಾಗಿದ್ದು ಸಹಜ. ಕವಿಯಾಗಿ ನಿಮಗೂ ಕುವೆಂಪು ಸೆಳೆತ. ಇದಕ್ಕೆ ಕಾರಣ ಏನಿರಬಹುದು.**

ಧಾರವಾಡದಲ್ಲಿ ನನಗೆ ಬೇಂದ್ರೆಯವರು ಬಹಳ ಸಮೀಪ ಇದ್ದರು. ಆದರೆ

ನಾನು ಧಾರವಾಡದಲ್ಲಿದ್ದುಕೊಂಡು ಕೂಡ ಮೊದಲು ಓದಿದ್ದು ಕುವೆಂಪುರವರನ್ನು. ಕಾವ್ಯ ಅಂದ್ಕೊಕ್ಡೆ ಒಂದು ಮೆಜಿಸ್ಟಿಕ್ ಸ್ಟೈಲ್ ಇರಬೇಕು, ಒಂದು ಗಂಭೀರವಾದದ್ದಿರಬೇಕು, ಭಾಷೆ ಒಳ್ಳೇದಿರಬೇಕು ಅನ್ನೋದು ಸಾಮಾನ್ಯವಾಗಿ ಇದ್ದ ಭಾವನೆ. ಹೀಗಾಗಿ ಅವರ ಕವಿತೆಗಳನ್ನು ಓದಿದಾಗ ಅಂಥಾ ಭಾಷೆ ಶೈಲಿ ರೀತಿ ಇದೆಲ್ಲ ಇದೆ ಅನಿಸಿತು. ಮತ್ತೆ ನನ್ನ ಸುತ್ತ ಮುತ್ತಲ ಜನ ಧಾರವಾಡದಲ್ಲಿದ್ದುಕೊಂಡೇನೇ ಆಡಿಕೊಳ್ತಿದ್ದು ಕೇಳಿಸ್ತಿತ್ತು. "ಏನು ಬೇಂದ್ರೇನಾ? ಲಾವಣಿ ಬರೀತಾನೆ ಆ ಕವಿ ಹೌದಿಲ್ಲೋ?" ಅಂತಿದ್ದರು. ಅದೂ ಸ್ವಲ್ಪ ಮನಸ್ಸಿಗೆ ಪರಿಣಾಮ ಬೀರಿರಬೇಕು.

**ಬೇಂದ್ರೆಯವರು ಬೀದಿಯ ಭಾಷೆಯನ್ನು ಜನಪದ ಲೋಕವನ್ನ ಇಟ್ಟುಕೊಂಡು ಮಾಡ್ತಾ ಇದ್ದ ಪ್ರಯೋಗಗಳು ಮಹತ್ವದವು ಅಂತ ಜನರಿಗೆ ಅನಿಸ್ತಿರಲಿಲ್ಲವಾ?**

ಇಲ್ಲಿನ ಜನಕ್ಕೆ ಅನಿಸಿರಲಿಲ್ಲ ಆ ಹೊತ್ತಿಗೆ. ಏನು ನಮ್ಮ ಲಾಂಗವೇಜನ್ನೇ ಹಾಕ್ತಾ ಇದಾನೆ ಅನಿಸ್ತಿತ್ತು. 'ಹಕ್ಕಿ ಹಾರುತಿದೆ ನೋಡಿದಿರಾ?' ಅಂದರೆ ಏನು, ಗುಬ್ಬಿ ಹಾರುತಿದೆ ನೋಡಿದಿರಾ, ಅಂದ್ರೆ ಏನು. ಇದರಲ್ಲಿ ಕಾವ್ಯ ಏನು ಬಂತು? ಆದರೆ ಅದೇ ಕುವೆಂಪುರವರಲ್ಲಿ "ನಾಡಿನ ಪುಣ್ಯದ ಪೂರ್ವ ದಿಗಂತದಿ ನವ ಅರುಣೋದಯ ಹೊಮ್ಮುತಿದೆ" ಅನ್ನುವಂಥಾ ಸಾಲುಗಳು ಕಾವ್ಯದ ಬಗ್ಗೆ ಭಿನ್ನವಾದ ಭಾವನೆ ಹುಟ್ಟಿಸ್ತಾ ಇದ್ದವು. ಕಟ್ಟೀಮನಿ ಇವನ್ನೆಲ್ಲ ಭಾಳ ಚೆನ್ನಾಗಿ ಓದ್ತಿದ್ದರು.

**ಕುವೆಂಪುರವರ ಕಾವ್ಯಭಾಷೆಗೆ ಕವಿತೆ ಪ್ರಾಕ್ಟೀಸ್ ಮಾಡ್ತಿದ್ದ ನೀವು ಸಹಜ ಆಕರ್ಷಿತರಾದಿರಿ. ಅದರ ಸಂಸ್ಕೃತಭೂಯಿಷ್ಠತೆ ಎಂದಾದರೂ ತೊಡಕು ಅನಿಸಿತಾ?**

ಕಣವಿ : ಕುವೆಂಪುರವರದು ಪೂರ್ತಿ ಸಂಸ್ಕೃತ ಅನಿಸೋಲ್ಲ. ಸಂಸ್ಕೃತ ಕನ್ನಡ ಎರಡರ ಲಲಿತ ಮಿಶ್ರಣ ಅವರು ತರ್ತಾರೆ. ಅನೇಕ ಕವಿತೆಗಳಲ್ಲಿ ಅರ್ಧಭಾಗ ಸಂಸ್ಕೃತದ್ದು ಇದ್ರೆ, ಮುಂದಿನ ಭಾಗ ಕನ್ನಡದ್ದು ಬಂದ್ ಬಿಡ್ತದೆ. "ಆಕ್ರಮಿಸು ಬಂದೆನ್ನ ಅಲ್ಪತ್ವವಂ ಓ ಅನಂತ" ಎಂಬೊ ಕವಿತೆ ಇದೆ. ಆಮೇಲೆ ಎರಡನೇ ಸಾಲ್ನಲ್ಲಿ ಶಿವನ ವರ್ಣನೆ ಮಾಡ್ತಾರೆ. ಅವೆಲ್ಲಕ್ಕೂ ಕನ್ನಡದ ಹೆಸರು ಕೊಟ್ಟುಬಿಡ್ತಾರೆ. 'ಪಾವುಡುಗೆ, ಬೆಂಕೆಗಣ್, ಗಂಗೆಮುಡಿ, ಓಬಾರ ವ್ಯೋಮಕೇಶ,' ನೋಡಿ, ಫಾಲನೇತ್ರಕ್ಕೆ ಬದಲಾಗಿ ಬೆಂಕಿಗಣ್ಣು, ನಾಗಭೂಷಣಕ್ಕೆ ಬದಲಾಗಿ ಪಾವುಡುಗೆ.

**ಬೇಂದ್ರೆ.......?**

ಆಮೇಲೆ ಬೇಂದ್ರೇನ ಓದಿದೆ. ಅವರೂ ಬಹಳ ಸೆಳೆದರು ನನ್ನ. ಆದರೆ ಪೂರ್ತಿ ಜಾನಪದ ಇರದೇನೆ ಪೂರ್ತಿ ಗ್ರಾಂಥಿಕವಾಗಿ ಇರದೇನೇ, ಇವೆರಡರ ನಡುವಿನ ಭಾಷೆಯನ್ನು ನಾನು ರೂಪಿಸಲಿಕ್ಕೆ ಆರಂಭ ಮಾಡಿದೆ ಅನಿಸುತ್ತೆ. ಆದರೆ ಕವಿತೆ ಮಾತಾಡಿದ ಹಾಗಿರಬೇಕು. "ಏನು ಬಾನೊ ಎನಿತು ದೂರವಿದ್ದಂತಿಹುದು ನಮಗೂ ಅದಕೂ ಮಾತುಕತೆಯೇ ಇಲ್ಲ" ಅಂತ ನನ್ನ 'ನಿಯಮೋಲ್ಲಂಘನ' ಪದ್ಯದಲ್ಲಿ ಬರ್ತದೆ.

**ಬೇಂದ್ರೆಯವರ ಭಾಷೆ ಕುವೆಂಪು ಅವರ ಭಾಷೆಯಂತೆ ನಿಮಗೆ ಪ್ರಭಾವ ಬೀರದೆ ಇರೋಕೆ, ಅದು ತುಂಬಾ ಪರಿಚಿತವಾದದ್ದು ಅನ್ನೋದು ಸರಳ ಕಾರಣ ಅನಿಸ್ತಾ ಇದೆ. ಇನ್ನೂ ಬೇರೆ ಆಳವಾದ ಕಾರಣಗಳು ಇರಬಹುದು.**

ಅಂದರೆ ಅವರ ಮೊದಲಿನ ಪದ್ಯಗಳು ಅಥವಾ ಪ್ರೀತಿಯ ಬಗ್ಗೆ ಬರಿಯೋವಂಥ ಪದ್ಯಗಳು, ನಿಸರ್ಗದ ಪದ್ಯಗಳು, ಶ್ರಾವಣದ ಪದ್ಯಗಳು, ಇವನ್ನೆಲ್ಲಾ ನೋಡ್ತಿದ್ದಾಗ ನಾನೂ ಧಾರವಾಡದಲ್ಲಿ ಇದ್ದುದರಿಂದ, ಧಾರವಾಡದ ಯಾವ್ಯಾವ ಪ್ರೇರಣೆಗಳು ಅವರಿಗಿದ್ದವು, ಅವೆಲ್ಲ ನನ್ನ ಕಣ್ಣೆದುರಿಗೇ ಕಾಣ್ತಾ ಇದೆ. ಅದೇ ಶ್ರಾವಣ, ಅದೇ ಮಳೆಯ ವೈಭವ ಇದೆಲ್ಲ. ಅವರು ಮುಂದೆ ನನ್ನ 'ನೆಲಮುಗಿಲು' ಕವನ ಸಂಕಲನಕ್ಕೆ ಮುನ್ನುಡಿ ಬರೆಯೋವಾಗ ಆ ಮಾತನ್ನ ಹೇಳ್ತಾರೆ. "ನನಗೆ ಯಾವ ಯಾವ ಪ್ರೇರಣೆಗಳು ಧಾರವಾಡದಲ್ಲಿ ಇದ್ದವೋ, ಅವೇ ಪ್ರೇರಣೆಗಳು ಚೆನ್ನವೀರನಿಗೂ ಇವೆ" ಅಂತ. ಬಹಳ ಅದ್ಭುತವಾದಂಥ ಮುನ್ನುಡಿ ಅದು. ಇದನ್ನು ಬರೆದಾಗ, ಬಹಳ ಜನ"ಏನು ಬೇಂದ್ರೆಯವರು ಎಷ್ಟು ಮುಕ್ತವಾಗಿ ಬರ್ದಿದಾರೆ. ಅವರು ಯಾರಿಗೂ ಹಿಂಗ ಬರಿದಿಲ್ಲ" ಅನ್ನೋವಂಥ ಒಂದು ಮಾತು ಹೇಳಿದರು. ಆದರೆ ನಾನು ಕುವೆಂಪು ಅವರು ಕಾಣೋ ನಿಸರ್ಗ ಆಗಲೀ, ಬೇಂದ್ರೆಯವರು ಕಾಣೋವಂಥ ನಿಸರ್ಗ ಆಗಲೀ ಇವರಕ್ಕಿಂತ ಭಿನ್ನವಾಗಿ ಕಂಡೆ ಅಂತ ಅನ್ಸುತ್ತೆ. ನಿಸರ್ಗ ಆರಾಧನೆಯ ವಸ್ತುವಲ್ಲ, ಅದು ನನ್ನ ಜೀವನದ ಭಾಗ ಅಂತ ಅನ್ಸುತ್ತೆ.

**ಟಾಗೂರ್ ಕಾವ್ಯ ಅನುವಾದ ಮಾಡಿದಿರಿ. ಆದರ್ಶವಾದದ ಕಾರಣದಿಂದ ನಿಮಗೆ ಅದು ಆಪ್ತವೆನಿಸಿತು?**

ಇಲ್ಲ. ಟ್ಯಾಗೂರ್ ನಾನು ಓದಿದ್ದೆ. ಅವರ 'ಗೀತಾಂಜಲಿ' ಪ್ರಸಿದ್ಧವಾಗಿತ್ತಲ್ಲ ಆ ಕಾಲಕ್ಕೆ. ಅವರ ಪ್ರಭಾವ ನನಗೆ ಸ್ವಲ್ಪ ಮಟ್ಟಿಗಿತ್ತು. ಆದರೂ ಅವರ

ಆದರ್ಶವಾದ ಅಷ್ಟು ಮುಖ್ಯ ಅನಿಸಲಿಲ್ಲ. ಅವರಲ್ಲಿ ಮಿಸ್ಟಿಕ್ ಎಲಿಮೆಂಟ್ ಇರ್ತಿತ್ತು. ಈ ಭಾವನೆ ಅದು ನನಗೆ ಶರಣರ ಅಥವಾ ಅನುಭಾವಿಗಳ ಸಮೀಪ ಅನಿಸಿಬಿಡ್ತಿತ್ತು. ಈ ಜಾನಪದ ಕಾವ್ಯ ಏನಿತ್ತು, ಅದು ನಾನು ಹಳ್ಳಿಯಲ್ಲಿದ್ದಾಗಲೇ ಕೇಳ್ತಿದ್ದೆ. ಇವೆಲ್ಲ ಹಾಡು ಕಿವಿ ತುಂಬಿ ಬರ್ತಿತ್ತು. ಅದಕ್ಕಾಗೇ ನನಗೆ ನರಸಿಂಹಸ್ವಾಮಿ ಪದ್ಯಗಳೂ ಸೆಳೇತಿದ್ದವು. ಹೈಸ್ಕೂಲ್‌ನಲ್ಲಿದ್ದಾಗ ಯಾವುದೇ ಒಂದು ಕಾರ್ಯಕ್ರಮ ಮಾಡಲಿ, ಭಾವಗೀತೆಗಳನ್ನ ಹಾಡ್ತಿದ್ದರು. ಆವಾಗ ಕುವೆಂಪುರವರ 'ತೇನೆಹಕ್ಕಿ' ಬಹಳ ಚೆನ್ನಾಗಿ ಹಾಡ್ತಾ ಇದ್ದರು. "ಜ್ಯೋತ್ಸ್ನೆ ತುಂಬಿತುಳುಕಿ ಹರಿಯೆ ಸ್ನಿಗ್ಧ ಶರತ್ಕಾಲದಿ" ಅದರ ಒಂದು ವಾತಾವರಣಾನೇ ನನಗೆ ರೋಮಾಂಚನ ತರ್ತಿತ್ತು.

**ನಿಮ್ಮ ಕವಿತೆಯಲ್ಲಿ ಜಾನಪದ ಲೋಕ ನೆನಪಿನ ಚಿತ್ರಗಳಾಗಿ ಬರ್ತದೆ. ಅದು ಕಾವ್ಯ ಭಾಷೆಯಲ್ಲಿ ಅಂತರ್ಗತವಾಗಿ ಬ್ಲೆಂಡ್ ಆಗೋದಿಲ್ಲ.**

ಯಾಕೆಂದರೆ ಜನಪದರು ಆಡೋ ಮಾತನ್ನ ಬೇಂದ್ರೆಯವರು ಬಳಸಿದ ರೀತಿಯಲ್ಲಿ ನಾನು ಬಳಸಲೇ ಇಲ್ಲ. ಹಂಗ ಮಾಡಿದ್ದರೆ ಬೇಂದ್ರೆಯವರ ಅನುಕರಣೆ ಅಂತಾಗಿ ಬಿಡ್ತಿತ್ತು. ಧಾರವಾಡದ ಗೆಳೆಯರ ಗುಂಪಿನ ಬಹಳ ಜನ ಕವಿಗಳು ಯಾಕೆ ಹೆಸರು ಮಾಡ್ಲಿಲ್ಲ! ದೇಸಾಯಿ ದತ್ತಮೂರ್ತಿ, ನರೇಗಲ್ಲ ಪ್ರಹ್ಲಾದ- ರಾಯರು. ಇಂಥದೆಲ್ಲ ನೋಡಿದಾಗ ಏನು ಬೇಂದ್ರೇನೆ ಇದ್ದಾರಲ್ಲ, ಇವಾರ್‍ಯಾಕೆ ಅನಿಸ್ತಿತ್ತು.

**ಒಬ್ಬ ಪ್ರಭಾವಶಾಲಿ ಕವಿಯ ಜತೆಯಲ್ಲಿರುವುದು ಒಂದು ವರವೂ ಹೌದು, ಪ್ರಭಾವದಿಂದ ತಪ್ಪಿಸಿಕೊಂಡು ಬರೆಯೋದು ಸವಾಲೂ ಹೌದು.**

ನನ್ನ ದೃಷ್ಟಿಯಿಂದ ಪ್ರಭಾವ ಬೇರೆ ಪ್ರೇರಣೆ ಬೇರೆ. ಪ್ರಭಾವಕ್ಕೆ ಒಳಗಾಗಿದ್ದಾರೆ ಅಂದರೆ, ಕೆಲವು ಅಂಶಗಳು ಶಬ್ದ ರೂಪದಲ್ಲೊ, ಶೈಲಿ ರೂಪದಲ್ಲೊ, ರೂಪಕದಲ್ಲೊ ಬಂದು ಸೇರಿಬಿಡ್ತವೆ. ಪ್ರೇರಣೆ ಅಂತಂದರೆ ಓ ಇಂಥಾದ್ದು ಬರೆದವರಲ್ಲ ಅವರು, ನನಗೆ ಮತ್ತೊಂದು ಅಂಥಾ ಪದ್ಯ ಬರೀಲಿಕ್ಕೆ ಸ್ಫೂರ್ತಿ ಕೊಡೋವಂಥಾದ್ದು. ಈಗೊಂದು ಉದಾಹರಣೆ ಕೊಡ್ತೇನೆ. ಬೇಂದ್ರೆಯವರು 'ಪಾತರಗಿತ್ತಿ ಪಕ್ಕ, ನೋಡಿದೇನೆ ಅಕ್ಕ' ಅಂತ ಬರೆದರು. ಅವು ಎರಡೂ ಸಾಲು ಅವರವಲ್ಲ. ನಾನು ಸಣ್ಣ ಹುಡುಗನಿದ್ದಾಗ ಕೇಳಿದ್ದವು. ಹಳ್ಳಿಯಲ್ಲಿ ಹುಡುಗರು ಎಲ್ಲರೂ ಇದನ್ನ ಅಂತಿದ್ದರು. ಆ ಎರಡು ಸಾಲನ್ನೆ ಎತ್ತಿಕೊಂಡು ಬಹಳ ಅದ್ಭುತವಾದಂತಹ ಪದ್ಯವನ್ನ ಅವರು ಬರೆದರು. ಆಮೇಲೆ ನಾನು

"ಗಿರಿಗಿರಿ ಗಿಂಡಿ ಈ ಬತ್ತಿ ಉಂಡಿ" ಅಂತ ಪದ್ಯ ಬರದೆ. ಅದನ್ನ ಬರೀಲಿಕ್ಕೆ, ಬಹುಶಃ ಧೈರ್ಯ ಪ್ರೇರಣೆ ಒದಗಿದ್ದು ಪಾತರಗಿತ್ತಿ ಪಕ್ಕದಿಂದ. ಇದು ಪ್ರಭಾವ ಅಲ್ಲ. ಪ್ರೇರಣೆ, ಅದರ ಭಾವ ರೀತಿ, ಲಯಾನೇ ಬೇರೆ, ಇದೇ ಬೇರೆ.

**'ರಾಮಾಯಣ ದರ್ಶನಂ' ಓದಿ ಮೆಚ್ಚಿ ಒಂದು ಪದ್ಯ ಬರಿದಿರಿ. ಆದರೆ ಕವಿಯಾಗಿ ನಿಮಗೆ ಮಹಾಕಾವ್ಯ ರಚನೆ ಮಾಡಬೇಕು ಅನಿಸಲಿಲ್ಲ....**

ಅದೂ....(ಯೋಚಿಸುತ್ತ) ಒಂದು ದೃಷ್ಟಿಯಿಂದ ಈ ಕಥನದ್ದು ಕಡಿಮೆ ನನ್ನಲ್ಲಿ. ಎರಡು ಮೂರು ಪದ್ಯಗಳನ್ನ ರೇರಾಗಿ ಬರೆದಿರಬಹುದು. ಆ ರೀತಿ ಬರೀಲಿಕ್ಕೆ ಸ್ವಲ್ಪ ನೆರೇಟೀವ್ ಶಕ್ತಿ ಬೇಕು ನೋಡಿ. ಭಾವ ಪ್ರಧಾನ ಕಾವ್ಯದಲ್ಲೆ ನನ್ನ ಮನಸ್ಸು.

**ಸಾರ್, ನಿಮ್ಮ ಇಡೀ ಕವಿತೆಯಲ್ಲಿ ಆಕಾಶ ಬಹಳ ಮುಖ್ಯವಾದ ವಸ್ತು, ಯಾಕೆ ಅದು ಅಷ್ಟು ಕಾಡ್ತದೆ?**

ಹಳ್ಳಿಗಳಲ್ಲಿ ಮಣ್ಣಿನ ಮನೆಗಳು, ಹೊರಗೆ ಕಟ್ಟೆ ಇರ್ತಿತ್ತು. ನಾವು ಸಾಧಾರಣ ಮಾಳಿಗೆ ಮೇಲೆ ಮಲಗ್ತಾ ಇದ್ದೀವಿ. ಸೆಖೆ ಇರ್ತಿತ್ತಲ್ಲ. ಬೇಸಗೆ ಬಂದಾಗ ಹೆಚ್ಚಾಗಿ ಮಾಳಿಗೆ ಉಪಯೋಗ ಮಾಡ್ತಿದ್ದೆವು. ಸಾಲಿಂದ ಬಂದ ಕೂಡ್ಲೆ ರೊಟ್ಟಿ ಹಚ್ಚಿಕೊಂಡು ಮಾಳಿಗೆ ಮೇಲೆ ಹೋಗಿ ತಿನ್ನೋದು. ರಾತ್ರೀನೂ ಅಲ್ಲೆ ಮಲಕ್ಕೊಳ್ಳೋದು. ಮಲ್ಕೊಂಡಾಗ ಆ ಇಡೀ ಆಕಾಶ ಎದುರಿಗೆ ಕಟ್ಟಿದಂಗಾಗೋದು. ಆ ಚುಕ್ಕಿಗಳು, ಚಂದ್ರ, ಯಾವುದೋ ಒಂದು ನಿಗೂಢವಾದಂಥ ಶಕ್ತಿ, ಅದಕ್ಕೂ ನಮಗೂ ಭಾಳ ಸಂಬಂಧ ಅದೆ. ಈಗ ಮಳೆ. ಆಕಾಶಕ್ಕೂ ಭೂಮಿಗೂ ಜೋಡಿಸುವಂತಹ ಒಂದೇ ಒಂದು ಸೇತುವೆ ಮಳೆ. ಇದು ಕಣ್ಣೆದುರಿಗೆ ನೇದು ಕೂಡಿಸ್ತದಲ್ಲ? ಮಳೆ ಬಗ್ಗೂ ಬಹಳ ಆಕರ್ಷಣೆ ನನಗೆ. ಒಟ್ಟು ಆಕಾಶದಲ್ಲಿ ಏನು ವಿದ್ಯಾಮಾನಗಳು ನಡೀತವೆ, ಅವೆಲ್ಲವೂ ನನ್ನ ಮನಸ್ಸಿಗೆ ತುಂಬ್ಕೊಳ್ಳೋವು. ಗುಡುಗು ಮಿಂಚು, ಮೋಡ. ಮೋಡಗಳ ಬಗ್ಗೆಯಂತೂ ಸುಮ್ನೆ ನೋಡ್ಕೊತಾ ಇದ್ದು ಬಿಡತಿದ್ದೆ. 'ಮೇಘೋಪಾಸನೆ' ಅಂತ ನನ್ನ ಪದ್ಯ ಇದೆಯಲ್ಲ 'ಕಾವ್ಯಾಕ್ಷಿ'ಯಲ್ಲಿ ನೋಡು ನೋಡುತಿರೆ.....

**ಕಾವ್ಯದೊಳಗಿನ ಆದರ್ಶವಾದದದ ಸೆಳೆತಕ್ಕೂ ಮುಗಿಲಿನ ಸೆಳೆತಕ್ಕೂ ಏನೋ ಸಂಬಂಧ ಇದ್ದಂಗೆ ಕಾಣ್ತದೆ.**

ಇರಬಹುದು. ಈಗ ಮೋಡ ಅಂತಂದಾಗಲೂ ಕೂಡಾ, ಅಲ್ಲೆ ಒಮ್ಮೆಲೆ

ಹುಟ್ಟಿದ್ದು ಅಂತ ಅನಿಸಬಹುದು. ಆದರೆ ಅದೂ ಭೂಮಿ ಮೇಲಿನ ನೀರು ಆವಿಯಾಗಿ ಹೋಗಿ ಆ ಆಕಾರವನ್ನು ಪಡೆದಿರುವಂಥದ್ದು. ಅದು ತನ್ನಲ್ಲಿನ ಸತ್ವವನ್ನು ಭೂಮಿಗೆ ಕೊಡುಗೆಯಾಗಿ ಕೊಡ್ತು. ಆಕಾರ ಇತ್ತು ಅದಕ್ಕೆ ಮೊದಲು. ಆದರೆ ನಿರಾಕಾರ ಆಗಿಬಿಡ್ತು. ಆಕಾರ ತಳಿಯೋದು ಮತ್ತೆ ನಿರಾಕಾರವಾಗಿ ಬಿಡೋದು, ಈವೆರಡೂ ನನಗೆ ಯಾವತ್ತೂ ಸೋಜಿಗ.

**ನಿಮ್ಮ ಕವಿತೆಯ ಎರಡನೆಯ ಬಹಳ ಮುಖ್ಯ ವಸ್ತು ಕಾಲ ಅಥವಾ ಸಾವು. ಇವು ನಿಮ್ಮ ಕಾವ್ಯ ಜೀವನ ದರ್ಶನ ರೂಪಿಸುವಂತೆ ಹಿನ್ನೆಲೆಯಾಗಿ ಬರ್ತವೆ.**

ನಾನು ಸಣ್ಣವನ್ನಿದ್ದಾಗಿನಿಂದಲೂ ಬಹಳ ಸಾವುಗಳನ್ನ ನೋಡಿದೇನೆ. ಪ್ರಾಥಮಿಕ ಶಾಲೆಯಲ್ಲಿದ್ದಾಗ ಎರಡು ಸಲ ದೊಡ್ಡ ಪ್ರಮಾಣದಿಂದ ನಮ್ಮೂರಿಗೆ ಪ್ಲೇಗು ಬಂತು. ಪಟಪಟಪಟ ಇವತ್ತು ಇದ್ದೋರು ನಾಳೆಗೆ ಇರ್ತಿರ್ಲಿಲ್ಲ. ಆ ಸಾವು ಒಂದು ರೀತಿಯಲ್ಲಿ ಮನಸ್ಸಿಗೆ ಘಾಸಿ ಮಾಡಿತು. ಆಮೇಲೆ ಕೆಲವು ನಮ್ಮ ಮನೆಯಲ್ಲೇನೆ ಆದಂತಹ ಸಾವು. ಸಣ್ಣ ವಯಸ್ಸಿನಲ್ಲಿಯೇ ನಮ್ಮಕ್ಕ ಯಾವುದೋ ಒಂದು ಜಡ್ಡಿನಿಂದ ತೀರ್ಕೊಂಡ ರೀತಿ. ಇದನ್ನ ನೋಡ್ತಿದ್ದಾಗ ಏನಿದು ಮೃತ್ಯು? ಯಾಕೆ ಹೀಗೆ ಆಕಾಲಿಕವಾಗಿ ಬರ್ತಿದೆ... ಆಮೇಲೆ ನಮ್ಮ ತಂದೆಯವರು ಪ್ರತಿವರ್ಷ ಮುಳಗುಂದಕ್ಕೆ ಹೋಗಿ, ಅವರ ಗುರುಗಳ ಮನೇಲಿ ಒಂದು ದಿವಸ ಇದ್ದು ಬರೋವಂಥ ಒಂದು ಪದ್ಧತಿಯಿತ್ತು. ಅವರ ಗುರುಗಳ ಹೆಸರು ಚೆನ್ನವೀರಯ್ಯನವರು ಅಂತ, ನನಗೆ ಅವರ ಹೆಸರನ್ನೇ ಇಟ್ಟಿದ್ದಾರೆ. ಒಂದ್ಸಲ ಹೋದಾಗ ಇಳಿಸಿ ಕೈ ಹಿಡಿದುಕೊಂಡು ಹೋಗ್ತಾ ಇದ್ದೆ. ಹೊಸ್ತಲಲ್ಲೆ ನಿತ್ಕೊಂಡು ಕಣ್ಣು ಮುಚ್ಚಿ ಗುರುವೇ ಗುರುವೇ ಅಂತ ಧ್ಯಾನ ಮಾಡಿದರು. ಆಮೇಲೆ ಹಂಗೇ ನಿಂತಬಿಟ್ರು. ನಿಲ್ಲೋಣ ಆಯಾಸ ಆಗಿರಬೇಕು ಅಂತಿಳಕೊಂಡು, ಅಲ್ಲೇಕಟ್ಟೆ ಇತ್ತು, ಸ್ವಲ್ಪ ಹೊತ್ತ ಕೂಡ್ರೋಣ ಅಂತ ಹಿಡಕೊಂಡೆ. ಅಲ್ಲೇ ತೀರ್ಕೊಂಡುಬಿಟ್ಟರು.

**ನಿಮ್ಮ ಕವಿತೆಯಲ್ಲಿ ಜೀವನವನ್ನು ಅರ್ಥಪೂರ್ಣವಾಗಿ ಬದುಕುವ ಒತ್ತಾಯಗಳನ್ನು ಸಾವಿನ ಸಾನ್ನಿಧ್ಯದಲ್ಲೇ ಹುಟ್ಟಿಸುವ ಆಶಯಗಳಿವೆ.**

ಸಾವಿನ ಸಾನ್ನಿಧ್ಯದಿಂದ ಜೀವನದ ಘನತೆ ಕೂಡ ಗೊತ್ತಾಗುತ್ತೆ. ಜೀವನ ಬೆಲೆಯುಳ್ಳದ್ದು ಅನ್ನೋ ಕಲ್ಪನೆ ಉಂಟಾಗ್ತದೆ. ಆಮೇಲೆ ಹಿರಿಯರು ಮನೆ ಒಳಗೆ ಆದಾರ ಅಂತಂದ್ರೆ ಮನೆ, ತುಂಬ್ಕೊಂಡಿರ್ತದೆ. ಸಣ್ಣ ಒಂದು ಕೋಣೆಯಲ್ಲಿದ್ದುಕೊಂಡೂ ಕೂಡ ತಮ್ಮ ಸಣ್ಣ ಕಣ್ಣಿಂದಾನೇ ಇಡೀ ಮನೆಗೆಲ್ಲ

ಒಂದು ಬೆಳಕು ಕೊಡೋಹಾಗೆ, ಎಲ್ಲಾನು ಅಬ್ಸರ್ವ್ ಮಾಡ್ತಿದ್ದಾರೆ ಅನಿಸೋ ಹಾಗೆ ಇರ್ತದೆ.

**ನಿಮ್ಮ ಕಾವ್ಯದಲ್ಲಿ ಶಿಶುಮುಗ್ಧತೆಯ ಅಂಶ ಹೆಚ್ಚು. ನಿಸರ್ಗದ ಮುಂದೆ ಸೋಜಿಗ ಪಡುವಾಗ ನೀವು ಇನ್ನೂ ದೊಡ್ಡವರೇ ಆಗಿಲ್ಲ ಅನಿಸುವಂತಹ ಸರಳ ಅನ್ನೋದಿದೆ.**

ನೀವು ಭಾಳ ಒಳ್ಳೇದು ಕಂಡು ಹಿಡಿದಿರಿ. ಈಗ್ಲೂ ಕೂಡ ನನಗೆ ನಾನು ದೊಡ್ಡಂವ ಆಗಿದೀನಿ ಅಂತ ಅನಿಸೋದೆ ಇಲ್ಲ. ನನ್ನ ಕವಿತೆ ಓದಿ ಮೆಚ್ಕೊಂಡವರು ಬರ್ತಾರಲ್ಲ, ಅವರು ಹಿಂಗ ಬಗ್ಗಿ ನಮಸ್ಕಾರ ಮಾಡ್ಲಿಕ್ಕೆ ಬರ್ತ್ತಾರೆ. ಬಹಳ ಮುಜುಗರ ಆಗಿಬಿಡ್ತದೆ. ಆಯ್ಯೋ ನಾನು ಸಣ್ಣವನು, ಮಾವಿನ ಕಾಯೊಳು ಎಕ್ಕೆಯ ಕಾಯಿ ನಾನು, ಯಾಕೆ ಹಿಂಗೆ ಮಾಡ್ತಾರಲ್ಲಪ್ಪಾ ಅನಿಸಿಬಿಡ್ತದೆ.

**ನಿಮ್ಮ ಕವಿತೆಗಳಲ್ಲಿ ಸಾನೆಟ್ಟಿನದು ಒಂದು ಮುಖ್ಯ ಪ್ರಯೋಗ. ಅದರ ವಸ್ತು ಸಾಮಾನ್ಯವಾಗಿ ಹೀರಿಕರನ್ನು ಕುರಿತದ್ದು. ಹಿರಿಯ ತಲೆಮಾರಿಗೆ ಕಿರಿಯ ತಲೆಮಾರಿನವರು ಆರಾಧನೆ ಮಾಡುವಂಥ ನಿಲುವು ನಿಮ್ಮಲ್ಲಿ ತುಂಬಾ ಆಳವಾಗಿದೆ. ಆ ಕಾರಣಕ್ಕಾಗಿಯೇ ಎರಡು ಕೊರತೆಗಳು ಕೂಡ ಕಂಡು ಬರ್ತವೆ. ಹಿರೀಕರನ್ನು ಪರಂಪರೆ ಅಥವಾ ಚರಿತ್ರೆಯ ಅವಾಹನೆ ಅನ್ನೋದಾದರೆ, ಅದರ ಜೊತೆಗೆ ನೀವು ವಿಮರ್ಶಾತ್ಮಕವಾಗಿ ಒಡನಾಡೋದಕ್ಕೆ ಅಷ್ಟು ಸಾಧ್ಯವಾಗಲ್ಲಿಲ್ಲವೇನೋ ಅಂತ ಅನ್ನುತ್ತೆ. ಅಂದರೆ ಪರಂಪರೆ ಜೊತೆ, ವರ್ತಮಾನದ ಜೊತೆ, ವಿಮರ್ಶಾತ್ಮಕವಾದ ಗುದ್ದಾಟಗಳಿಗೆ ನಿಮ್ಮ ಈ ಮಗು ಮುಗ್ಧತೆಯೆ ಬಿಡಲಿಲ್ಲವಾ?**

ಇಲ್ಲ, ಅದನ್ನ ಪೂರ್ಣ ನಾನು ಒಪ್ಪೋದಿಲ್ಲ. ವ್ಯಕ್ತಿಗಳ ಬಗ್ಗೆ ಬರೆದ ಬಹಳಷ್ಟು ಸುನೀತಗಳನ್ನು ನೋಡ್‌ದಾಗ, ಅವರ ವ್ಯಕ್ತಿತ್ವ, ಕೊಡುಗೆ ಜೀವನ ಎಲ್ಲಾ ಕಣ್ಮುಂದೆ ತುಂಬಿ ಬರೋಹಂಗೆ ನಾಲ್ಕು ಸಾಲಲ್ಲಿ ಕೊಡೋದು. ಸಾನೆಟ್ ಬರೀವಾಗ ನಾನು ಬಹಳ ಕಷ್ಟಪಡ್ತೀನಿ. ನನ್ನ ಮನಸ್ಸಿಗೆ ಸಂಪೂರ್ಣ ತೃಪ್ತಿಯಾಗೋ ಹಂಗೆ, ಯಾವುದೋ ಒಂದು ಶಬ್ದ ಕೂಡ ಸರಿಯಾದ ರೀತಿ ಬರಬೇಕು, ಅರ್ಥಪೂರ್ಣವಾಗಿರಬೇಕು, ಅನ್ನೋಹಂಗೆ ಬರೀಲಿಕ್ಕೆ ಪ್ರಯತ್ನ ಪಡ್ತೀನಿ. ಹಾಗೆ ಬರೀವಾಗ ನನಗೆ ಗೊತ್ತಿಲ್ಲದ ಹಾಗೇನೆ, ಜೀವನದಲ್ಲಿ ನಾನು ಯಾವ ಮೌಲ್ಯಗಳಿಗೆ ಮಹತ್ವ ಕೊಡ್ತೀನಿ, ಆ ಮೌಲ್ಯಗಳನ್ನ ಅಲ್ಲಿ

ಗುರ್ತಿಸ್ತೀನಿ. ಅದಕಾಗಿ ನನಗೆ ಆ ವ್ಯಕ್ತಿ ಹೆಚ್ಚು ಮಹತ್ವದ್ದು ಅನಿಸ್ತದೆ. ಕರ್ಕಿಯವರ ಮೇಲೆ ಬರೆದಾಗ, ಬೇಂದ್ರೆಯವರ ಮೇಲೆ ಬರೆದಾಗ ಅಲ್ಲಿ ನಾನು ಮೆಚ್ಕೊಂಡ ಗುಣಗಳನ್ನ ಗುರ್ತಿಸ್ತೀನಿ. ಬೇಂದ್ರೆಯವರ ಬಗ್ಗೆ ಬರೀವಾಗ ಸೈತ ಅವರ ಮತ್ತೊಂದು ಸ್ವಭಾವ ತರ್ತೀನೆ. "ಹಣ್ಣಾದ ಕೇದಿಗೆಯ ಹೊಡೆ, ಚೂಪಾದ ಗರಿ, ಹುಷಾರಿ" ಅಂತನ್ನೊ ಮಾತು ಬರ್ತದೆ.

**ಹಂಗಲ್ಲ ಸಾರ್, ಅಡಿಗರು ಚರಿತ್ರೆ ವರ್ತಮಾನಗಳ ಜತೆ ಮಾಡೋ ಗುದ್ದಾಟ ನೋಡುವಾಗ, ನೀವು ಮಾಡೋ ಗುದ್ದಾಟದಲ್ಲಿ ಗುಣಗ್ರಾಹಿತನ ಹೆಚ್ಚು ಕೆಲಸ ಮಾಡ್ತದೆ. ಇದೇ ಒಂದು ಮಿತಿ ಕೂಡ ಆಗಿರಬಹುದು ಅಂತನ್ನೋದು ನನ್ನ ಅಭಿಪ್ರಾಯ. ಇನ್ನೊಂದು ಪ್ರಶ್ನೆ ಅಂದ್ರೆ ನಿಮ್ಮಲ್ಲಿ ಸಾನೆಟ್ ಯಾಕೆ ವ್ಯಕ್ತಿಚಿತ್ರಕ್ಕೆ ಬಹಳ ಹೊಂದಿಕೊಳ್ಳೊ ಪ್ರಕಾರವಾಗಿದೆ.**

ನಾನು ಬರೆದ ಸಾನೆಟ್‌ಗಳಲ್ಲಿ ಮೂರು ವಸ್ತುಗಳಿವೆ. ವ್ಯಕ್ತಿ ಚಿತ್ರಗಳು, ನಿಸರ್ಗ ಸ್ಪಂದನ, ಇನ್ನೊಂದು ಜಿಜ್ಞಾಸೆ. ಈಚೆಗಂತೂ ಹೆಚ್ಚಾಗಿ ಜಿಜ್ಞಾಸೆ ಬರ್ತಾ ಇದೆ. "ಸಾನೆಟ್ಟುಗಳ ಮೂಲಕ ಸಾಹಿತ್ಯ ಚರಿತ್ರೇನೆ ಕಟ್ಟಿಬಿಟ್ಟಿದ್ದೀರಾ" ಅಂತ ಶಿವರುದ್ರಪ್ಪ ಹೇಳಿದರು. ನನಗೂ ಆಶ್ಚರ್ಯ ಅನಿಸಿತು. ಯಾಕೆಂದರೆ ನಾನು ಹಳಕಟ್ಟಿಯವರ ಬಗ್ಗೆ ಬರ್ದೀದೀನಿ, ಮುದ್ದಣ, ಆಲೂರು ವೆಂಕಟರಾಯರು, ಗೋಕಾಕರು, ಬೇಂದ್ರೆಯವರು, ಕರ್ಕಿಯವರು, ಈ ರೀತಿಯಾಗಿ.

**ಸಾನೆಟ್‌ಗಳ ಜೊತಗೇನೆ ನೀವು ಚೌಪದಿಗಳನ್ನು ಪ್ರಯೋಗಿಸಿದಿರಿ. ಅದರಲ್ಲೂ ಕಥನದಲ್ಲಿ, ಇದಕ್ಕೆ ನೀವು ಎಲ್ಲಿಂದ ಪ್ರೇರಣೆ ಪಡಕೊಂಡಿರಿ ಇಂಗ್ಲೀಷ್ ಗೀತಗಳಿಂದನಾ?**

ಇಲ್ಲ, ಕನ್ನಡ ಛಂದಸ್ಸಿಗೆ ಚೌಪದಿ ಬಹಳ ಸ್ವಾಭಾವಿಕವಾದಂತಹ ರೀತಿಲಿ ಬರ್ತದೆ. ೫ ಮಾತ್ರೆ ಗಣ ಅಂತೂ ಅದರಿಂದ ಪಾರಾಗೋದಿಕ್ಕೆ ಆಗೋದಿಲ್ಲ. ಶ್ರೀಯವರ 'ಇಂಗ್ಲೀಷ್ ಗೀತೆಗಳು' ಕಾವ್ಯದ ಬಗ್ಗೆ ಆಸಕ್ತಿ ಮೂಡಿಸಲಿಕ್ಕೆ ಕಾರಣ ಆಯಿತು. ಆದರೆ ಅಷ್ಟು ಪ್ರಭಾವ ನನಗೆ ಆಗ್ಲಿಲ್ಲ. ನಿಜವಾಗಿಯೂ ಹೆಚ್ಚು ಪ್ರಭಾವಿಸಿದ್ದು ಶ್ರೀಯವರು ಸಂಪಾದನೆ ಮಾಡಿದ 'ಕನ್ನಡ ಬಾವುಟ'. ನಾನು ಹೈಸ್ಕೂಲ್‌ನಲ್ಲಿದ್ದಾಗ ನನಗದು ಬಹುಮಾನವಾಗಿ ಬಂತು. ನೋಡಿ, ನಮ್ಮ ಇಡೀ ಕನ್ನಡ ಕಾವ್ಯ ಪರಂಪರೆಯೆ, ಶಾಸನಗಳನ್ನು ಹಿಡಿದುಕೊಂಡು, ಹಿಂದಿನ ಕವಿಗಳ ಭಾಗಗಳನ್ನೊಳಗೊಂಡು ಹೊಸಗನ್ನಡ ಕವಿತೆಯಲ್ಲಿ ಪ್ರಮುಖರಾದವರಲ್ಲಿ ಎಲ್ಲರದೂ ಇದೆ. ಕನ್ನಡ ಕಾವ್ಯ ಬಗ್ಗೆ ಒಂದು ಇಡೀ

ಕಲ್ಪನೆ ಕಣ್ಣೆದುರಿಗೆ ಬರ್ತದೆ. ಇದರಲ್ಲಿ ಹೊಸ ರೀತಿ ಇತ್ತು. ಆ ಹೊತ್ತಿಗೆ ಗೋವಿಂದ ಪೈ ಸಾನೆಟ್ ಬರೆದಿದ್ದರು. ಮಾಸ್ತಿಯವರ 'ಮಲಾರ'ಇತ್ತು. ಬೇಂದ್ರೆಯವರ 'ಉಯ್ಯಾಲೆ' ಬಂದಿತ್ತು. ಕುವೆಂಪು, ಗೋಕಾಕ್, ಪುತಿನ ಸಾನೆಟ್ ಬರೆದಿದ್ದರು. ಇಂಗ್ಲೀಷಿನಲ್ಲೂ ನಾನು ವರ್ಡ್ಸ್‌ವರ್ತನ ಸಾನೆಟ್ಟುಗಳನ್ನ ನೋಡಿದ್ದೆ. ಇದೆಲ್ಲಾ ನೋಡ್ಕೊಂಡಾಗ ನನಗೆ ಕುವೆಂಪುರವರ 'ಕೃತ್ತಿಕೆ' ಬೇಂದ್ರೆಯವರ 'ಉಯ್ಯಾಲೆ' ಭಾಳ ಮನಸ್ಸಿಗೆ ಬಂದವು. 'ಕೃತ್ತಿಕೆ'ಯಲ್ಲಿ ಸಾನೆಟ್ಟಿನ ಕಟ್ಟುನಿಟ್ಟುಗಳು ಏನಿವೆಯಲ್ಲ, ಅವನ್ನೆಲ್ಲ ಕುವೆಂಪು ಬಹಳ ಪಾಲಿಸಿ ಕೊಂಡಿದಾರೆ. ಬೇಂದ್ರೆಯವರು 'ಅಷ್ಟಷಟ್ಪದಿ' ಅಂದರು. ಮೊದಲಿನಿಂದಲೂ ನಾನು ಏನು ಪ್ರಯತ್ನ ಮಾಡ್ತಿದ್ದೆ ಅಂದ್ರೆ, ಈ ಭಾವಗೀತೆಗಳ ಭಾವೋದ್ವೇಗಕ್ಕೆ ಒಳಗಾಗಬಾರದು, ಕಂಟ್ರೋಲ್ ಮಾಡಬೇಕು ಅಂತ. ಯಾವಾಗ ಸಾನೆಟ್ ಬರೀಲಿಕ್ಕೆ ಪ್ರಾರಂಭ ಮಾಡಿದೆ. ಇದು ತಾನೇತಾನಾಗಿ ಕಂಟ್ರೋಲ್ ಮಾಡಲಿಕ್ಕೆ ಹತ್ತಿಬಿಟ್ಟಿತು. ಭಾವ ಮತ್ತು ಬುದ್ಧಿಯ ಒಂದು ಸಮನ್ವಯವಾಗಿ, ಹೇಳಬೇಕಾದ್ದನ್ನು ಸಂಕ್ಷಿಪ್ತವಾಗಿ ಸಾರವಾಗಿ ಸಮಗ್ರವಾಗಿ ಹೇಳಬೇಕು. ಈ ಕ್ರಾಫ್ಟ್‌ಮನ್‌ಶಿಪ್‌ಗೆ, ಕಾವ್ಯದ ಕಸಬುದಾರಿಕೆಗೆ, ಉಳಿದ ಯಾವುದೇ ಕವಿತೆಯ ಪ್ರಕಾರಕ್ಕಿಂತಲೂ ಸಾನೆಟ್‌ನಲ್ಲಿ ಹೆಚ್ಚು ಅವಕಾಶವಿದೆ.

**ಈ ಕಸುಬುಗಾರಿಕೆಯು ಒತ್ತಡ ನವ್ಯರಿಂದ ಬಂತು?**

ಇಲ್ಲ, ಸಾನೆಟ್ಟಂತೂ ನಾನು ಮೊದಲನೆ ಸಂಗ್ರಹದಿಂದಾನೇ ಶುರುಮಾಡಿದ್ದೆ. ಬಹುಶಃ ನವ್ಯದವರು ಏನು ಸಂಕ್ಷಿಪ್ತವಾಗಿ ಹೇಳಬೇಕು, ಭಟ್ಟಿ ಇಳಿಸಬೇಕು ಅನ್ನೋವಂಥ ಮಾತು ಬಳಸ್ತಿದ್ದರಲ್ಲಾ, ಅದು ನನಗೆ ಪೋಷಕವಾಗಿರಬೇಕು. ಅದು ಇನ್ನಷ್ಟು ರೂಪ ತೆಗೆದುಕೊಳ್ಳಲಿಕ್ಕೆ ಗಟ್ಟಿಯಾಗಲಿಕ್ಕೆ ಅದೂ ಅಂಶತಃ ಕಾರಣವಾಗಿರಬೇಕು. ಈಗಲೂ ಕೂಡ ನನಗೆ ಅದರ ಕಟ್ಟುನಿಟ್ಟು, ಪ್ರಾಸಗಳ ಬಂಧ ಅದನ್ನ ಮೀರಬೇಕು, ಅಂತ ಅನಿಸೋದಿಲ್ಲ. ಸಾನೆಟ್ ಓದಿದಾಗ ಇವೆಲ್ಲ ಬಂಧನಾ ಅಂತನಿಸಿರಬಾರದು. ಸಹಜವಾಗಿ ಬಂದಿದೆ ಅಂತನಿಸಿರಬೇಕು.

**ನೀವು ನವೋದಯ ಪರಂಪರೆಯಲ್ಲಿ ಹುಟ್ಟಿ ಬೆಳೆದ ಕವಿ. ನಿಮಗೆ ನವ್ಯದ ಎರಡು ದಶಕಗಳು ಯಾವ ಬಗೆಯ ಒತ್ತಡ ತಂದವು? ಎಂಥ ಬದಲಾವಣೆಯನ್ನು ಉಂಟು ಮಾಡಿದವು. ಇದರ ಬಗ್ಗೆ ಕುತೂಹಲವಿದೆ.**

ನಾನು ಬರೀತಿದ್ದಾಗಲೇ ಅಡಿಗರು ಪರಿಚಯವಾಗಿದ್ದರು, ಪತ್ರದ ಮೂಲಕ. ಆ ಹೊತ್ತಿಗೆ ಅಡಿಗರ 'ಭಾವತರಂಗ' ಬಂದಿತ್ತು. ಅವರಿಗೆ ನನ್ನ ಸಂಕಲನ

'ಭಾವಜೀವಿ'ಯನ್ನ ಕಳಿಸಿದ್ದೆ. ಅದಕ್ಕೆ ಅವರು ಮೆಚ್ಕೊಂಡು ಪತ್ರ ಬರೆದರು. ಆಗ ಕುಮಟಾ ಕಾಲೇಜಿನಲ್ಲಿ ಅವರು ಅಧ್ಯಾಪಕರಾಗಿದ್ದರು.

**ನನ್ನ ಪ್ರಶ್ನೆಯ ಉದ್ದೇಶ ಅಂದರೆ, ಅಡಿಗರು ರಮ್ಯಕಾವ್ಯ ಸಂಪ್ರದಾಯವನ್ನು ತೀವ್ರವಾಗಿ ವಿರೋಧಿಸ್ತಿದ್ದ ಕವಿಯಾಗಿದ್ದರು. ಅವರ ಜೊತೆ ನಿಮ್ಮ ಸಾಹಿತ್ಯಕ ಸಂಬಂಧ ಯಾವ ರೀತಿಯಲ್ಲಿ ಇತ್ತು?**

ಅಡಿಗರು 'ಭಾವತರಂಗ'ಬರೆಯೋವಾಗ ನವ್ಯದವರೇನಾಗಿರಲಿಲ್ಲ. 'ನನ್ನ ನುಡಿಯೊಳೆ ಬಣ್ಣಿಸುವ ಪನ್ನತಿಕೆ ಬರುವನಕ ನನ್ನ ಬಾಳಿದು ನರಕ" ಅಂತ ಹೇಳ್ಕೊಂಡಿದ್ದರಲ್ಲ. ಅಂದರೆ ನಮ್ಮ ಕಾವ್ಯದ ರೀತಿ ಬದಲಾಗಬೇಕು ಅನ್ನೋ ಅವರ ಈ ವಿಚಾರಧಾರೆಯನ್ನ ಫಾಲೋ ಮಾಡಿದೀನಿ ಅಷ್ಟೇ. ಅಷ್ಟರಲ್ಲಿ ೧೯೫೦ರಲ್ಲಿ ಗೋಕಾಕರು ಕೊಲ್ಲಾಪುರದಿಂದ ಕರ್ನಾಟಕದ ಕಾಲೇಜಿಗೆ ಬಂದರು. ಆಗಲೇ ಗೋಕಾಕರು ಮುಂಬೈ ಸಾಹಿತ್ಯ ಸಮ್ಮೇಳನದೊಳಗೆ ಮೊಟ್ಟ ಮೊದಲಿಗೆ ನವ್ಯತೆ ಬಗ್ಗೆ ಮಾತನಾಡಿದ್ದರು, 'ಸಾಹಿತ್ಯದಲ್ಲಿ ನವ್ಯತೆ' ಅಂತ. ಅವಾಗೆಲ್ಲ ಹೊಸ ಹೊಸ ರೀತಿಯಲ್ಲಿ ಪ್ರಯೋಗಗಳು ನಡೀತಿದ್ದವು. ಮುಂದೆ ಈ ರೀತಿ ಹೊಸದಾಗಿ ಬರೀತಿರೋರದೆಲ್ಲ ಒಂದು ಸಂಗ್ರಹ ಮಾಡಬೇಕು ಅಂದಾಗ, 'ಆಯಿತು' ಅಂದರು. ಹಾಗೆ ನೋಡಿದರೆ ಅಡಿಗರ 'ಭೂಮಿಗೀತ' ಪದ್ಯ ಮೊಟ್ಟ ಮೊದಲು ಬಂದಿದ್ದೆ ನಮ್ಮ 'ನವ್ಯಧ್ವನಿ' ಸಂಕಲನದಲ್ಲಿ. ಆದರೆ ಅಡಿಗರು ಯಾವುದನ್ನು ನವ್ಯ ಅಂತ ಅಂತಿದ್ದರೋ ಅದಕ್ಕೆ ಗೋಕಾರದು ಸ್ವಲ್ಪ ಭಿನ್ನವಾಗಿರುತ್ತಿತ್ತು. ಅದಕ್ಕಾಗಿ ಸಾಮಾನ್ಯವಾಗಿ ಯಾರ್‍ಯಾರು ಬೇರೆ ರೀತಿಯಿಂದ ಬರೀತಿದಾರೆ ಅಂತ ಗುರುತಿಸಿಕೊಂಡು 'ನವ್ಯಧ್ವನಿ' ಅಂತ ಒಂದು ಕವನ ಸಂಕಲನವನ್ನು ಮಾಡಿದಿವಿ. ಅದಕ್ಕೆ ಪ್ರಸ್ತಾವನೆ ಗೋಕಾಕರವರದು. ಆಮೇಲೆ ಅಡಿಗರು ನನಗೊಂದು ಪತ್ರ ಬರೆದರು. 'ಇಲ್ಲ ನೀನು ಕೇಳಿದೆ ಅಂತ ಕವಿತೆ ಕೊಟ್ಟೆ. ಆಯಿತು, ಆದರೆ ಈ ಸಂಕಲನ ನನಗೆ ಒಪ್ಪಿಗೆ ಇಲ್ಲ' ಅನ್ನೋ ಮಾತನ್ನ ಅದರಾಗೆ ತಿಳಿಸಿದರು. ಆಮೇಲೆ ತಮ್ಮ ನವ್ಯತೆಯ ರೀತಿ ಯಾವುದು ಅಂತ ಲೇಖನಾನೂ ಬರೆದರು. ಆ ರೀತಿಯಲ್ಲಿ ಅವರದ್ದೊಂದು ಗ್ರೂಪ್ ಆಯಿತು. ಆದರೆ ಯಾವ ಕವಿಗಳ ಬಗ್ಗೆ ಅವರ, ಕಾವ್ಯದ ಬಗ್ಗೆ ನಮಗೆ ಗೌರವ ಇತ್ತೋ, ಕುವೆಂಪುರವರ ಬಗ್ಗೆ ಆಗಲೀ, ಬೇಂದ್ರೆಯವರ ಬಗ್ಗೆ ಆಗಲೀ, ಅಡಿಗರು ಬೇರೆ ರೀತಿ ಮಾತಾಡ್ತಾ ಇದ್ದರು. ಇದು ನಮ್ಮ ಮನಸ್ಸಿಗೆ ಸ್ವಲ್ಪ ಕಿರಿಕಿರಿಯಾಗುತ್ತಿತ್ತು. 'ನನ್ನ ಕಾವ್ಯ ಈ ರೀತಿ ಇರ್ತದೆ '

ಅಂತ ಹೇಳೋದು ಬೇರೆ. ನವೋದಯ ಕಾವ್ಯ ಅಂತ ಬಂದಾಗಲೂ ಕೂಡ, ನಮ್ಮ ಹಿಂದಿನ ಕಾವ್ಯಕ್ಕೆ ಪ್ರತಿಭಟನೆ ಅಂತ ಮಾಡಿದ್ದಲ್ಲ. ನವೋದಯ ಕವಿಗಳೂ ಒಂದು ಕೈಯಲ್ಲಿ ಧ್ವಜ ಹಿಡಕೊಂಡೇ ಹೊರಟವರು. ಅವರು ಕೈಯಲ್ಲಿ ಹಿಡಿದ ಧ್ವಜ ಯಾವುದೂ ಅಂದರೆ 'ಕನ್ನಡ ಬಾವುಟ.' ಇವರಿಗೆಲ್ಲ ಕನ್ನಡ ಬೆಳೆಸಬೇಕು ಅಂತನ್ನೋದು ಇತ್ತೇ ಹೊರತು ಒಮ್ಮೇಲೆ ಹಿಂದಿನ ಕಾವ್ಯ ವಿರೋಧ ಮಾಡಬೇಕು ಅಂತಿರಲಿಲ್ಲ.

**ಅಡಿಗರು ೬೦ರ ದಶಕದಲ್ಲಿ ನವೋದಯದ ಮೇಲೆ ಬಂಡಾಯ ಎದ್ದಾಗ, ಆ ಕಾವ್ಯ ಸಂಪ್ರದಾಯವು ಬೇಕಾದಷ್ಟು ಕ್ರೈಸಿಸ್‌ಗೆ ಒಳಗಾಗಿತ್ತಲ್ವ?**

ಇತ್ತು, ಅದರ ಸತ್ವ ತೀರತಾ ಬಂದಿತ್ತು. ಅನುಕರಣೆ ಭಾಳ ಬೆಳೀತಾ ಇತ್ತು. ಎಲ್ಲಾ ನಿಜಾನೆ. ಆದರೆ ಅವರು ಒಮ್ಮೆಲೆ 'ಹಿಮಗಿರಿಯ ಕಂದರ' ಬರೆದರು. ಅಡಿಗರ 'ಚಂಡೆಮದ್ದಳೆ' ಪ್ರಕಟವಾಗಿತ್ತು. ವಿಸೀಯವರ ಅಧ್ಯಕ್ಷತೆಯಲ್ಲಿ ಕುಮಟಾದಲ್ಲಿ ಸಾಹಿತ್ಯ ಸಮ್ಮೇಳನ ಆದಾಗ, ಬೇಂದ್ರೆಯವರು ಕವಿಗೋಷ್ಠಿಯ ಅಧ್ಯಕ್ಷ ಭಾಷಣದಲ್ಲಿ ಸ್ವಲ್ಪ ತಿಕ್ಕಾಟ ಆಯಿತು. ನನಗಿನ್ನೂ ನೆನಪಿದೆ. ಅಂದರೆ 'ತಾನು ಹರೆಯಕ್ಕೆ ಬಂದಿದೀನಿ ಅಂತ ತಿಳ್ಕೋಬೇಕಾದರೆ, ಹಗಲೆಲ್ಲ ಮೀಸಿ ತಿಕ್ಕೊಂಡು ತಿಕ್ಕೊಂಡು ನೋಡಬೇಕಾಗಿಲ್ಲ' ಅಂತ ಬೇಂದ್ರೆ ಕಾಮೆಂಟ್ ಮಾಡಿದರು. ಆದರೂ ಅಡಿಗರ ಆಡು ಮಾತಿನ ಲಯ ನನಗೆ ಸೇರ್ತಿತ್ತು. ಯಾಕೆಂದರೆ ನಾವು ಆಗಲೇ ಅದನ್ನ ಉಪಯೋಗ ಮಾಡ್ತಿದ್ದೆವು. ಅಂದರೆ ಒಂದು ದೃಷ್ಟಿಯಿಂದ ಅಡಿಗರು ನನ್ನ ಕವಿತೆಗಳ ಮೇಲೆ ಕಾಮೆಂಟ್ ಮಾಡ್ತಾ ಇದ್ದರು. ಮಾಸ್ತಿಯವರ 'ಜೀವನ'ದಲ್ಲಿ ನನ್ನ ಪದ್ಯಗಳು ಬರ್ತಿದ್ದವು. 'ಪ್ರಾರ್ಥನೆ' ಅಂತ ಪದ್ಯ ಬಂದ ಮೇಲೆ ಅಡಿಗರು ನನಗೆ ಒಂದು ಪತ್ರ ಬರೆದರು "ನಿಮ್ಮ ಹೊಸ ಕವಿತೆಗಳನ್ನು ನೋಡ್ತಾ ಇದೀನಿ. ಆದರೆ ಈಗ 'ಜೀವನ'ದಲ್ಲಿ ನೋಡಿದ ಮೇಲೆ ಬಹಳ ನಿರಾಸೆಯಾಯಿತು" ಅಂತ.

**ಅಡಿಗರ ಈ ಬಗೆಯ ನೇರನುಡಿ, ಕಾಮೆಂಟ್ ಮಾಡುವ ಗುಣ, ಸಾಹಿತ್ಯಕ ಪರಿಸರದಲ್ಲಿ ಒಂದು ಬಗೆಯ ಕ್ರಿಟಿಕಲ್ ಆಟಿಟ್ಯೂಡ್ ಬೆಳೆಯಲು, ಹೊಸ ಕವಿಗಳಿಗೆ ಬೇಕಾದ ಉದ್ದೀಪನೆ ಮಾಡುವುದಕ್ಕೆ ಕಾರಣವಾಗ್ತಿತ್ತಲ್ಲಾ?**

ಅಲ್ಲಾ, ಅದು ಉದ್ದೀಪನಕ್ಕಿಂತ ಬೇರೆ ಒಂದು ರೀತಿಯ ಬೆಳವಣಿಗೆಗೆ ಕಾರಣವಾಯಿತು ಅಂತ ಅನ್ಸುತ್ತೆ. ಉದ್ದೀಪನೆಗಿಂತ ಡಿಸ್ಟರ್ಬ್ ಮಾಡ್ತಿತ್ತು. ಯಾವುದೋ ಒಂದು ಸಂದರ್ಶನದಲ್ಲಿ ಓದಿದ್ದೆ. ಅದು 'ಪ್ರಜಾವಾಣಿ'ಯಲ್ಲಿ

ಬಂದಿತ್ತು. "ಕುವೆಂಪುರವರು ಕವೀನೇ ಅಲ್ಲ" ಅಂತನ್ನೊ ಮಾತನ್ನ ಅಡಿಗರು ಆಡ್ಯಾರ. ದಾಖಲೆ ಆಗಿರಬೇಕು ಅದು. ಒಮ್ಮೆಲೆ ನಮಗೆ ಶಾಕ್ ಆಯಿತು. ಆಮೇಲೆ ಗೋಕಾಕ್‌ರವರ ಬಗ್ಗೆ ಹೇಳ್ತೀರುವಾಗ "ಗೋಕಾಕರದು ನವ್ಯ ಕಾವ್ಯವಾದರೆ ನಂದಲ್ಲ. ನನ್ನದು ನವ್ಯಕಾವ್ಯ ಅಂತನ್ನೋದಾದರೆ ಗೋಕಾಕರದಲ್ಲ." ಈ ರೀತಿ ಕೆಲವು ಸ್ಟೇಟ್‌ಮೆಂಟ್ಸ್ ನಮಗೆ ಇಷ್ಟವಾಗಲಿಲ್ಲ. ಆದರೆ ಅಡಿಗರು ನಿಜವಾದ ನವ್ಯಕವಿ. ಅದನ್ನ ನಾನು ಒಪ್ಕೋತೀನಿ.

**ಪರಂಪರೆಯ ಜೊತೆಗೆ ಗುದ್ದಾಟ ಮಾಡುವ ಕವಿಗಳಲ್ಲಿ ಅಡಿಗರು ಒಂದು ತುದಿಯಾದರೆ, ಪರಂಪರೆಯಿಂದ ಶಕ್ತಿ ಚೈತನ್ಯ ಪಡೆಯುವಲ್ಲಿ ಬಹಳ ವಿನಯ ತೋರಿಸುವ ನೀವು ಇನ್ನೊಂದು ತುದಿ.**

ಆದರೆ ಪರಂಪರೆಯನ್ನು ಅಡಿಗರು ಬಿಟ್ಟಿದ್ದರು ಅಂತ ಅನಿಸ್ತಿರಲಿಲ್ಲ. ಪರಂಪರೆಯ ಸಾರವನ್ನು ಅವರು ಚೆನ್ನಾಗಿ ಗ್ರಹಿಸಿದ್ದರು. ಅದನ್ನು ಹೀರಿಕೊಂಡೆ ಅವರು ಬೆಳೆದವರು. ಇಲ್ಲದಿದ್ದರೆ ಆ ರೀತಿಯಾಗಿ ಶಕ್ತಿ ಬರ್ತಿರ್ಲಿಲ್ಲ. ಧೋರಣೆ ರೀತಿ ಮಾತ್ರ ಬದಲಾಯಿತು. ಆದರೆ ಹಿರಿಯ ಲೇಖಕರ ಬಗ್ಗೆ ಅವರ ಟೀಕೆ ಪರ್ಸನಲ್ ಆಗಿರ್ತಿತ್ತು. ಆಮೇಲೆ ಸ್ವಲ್ಪ ಮೆಲು ಆದರೂ ಅವರಿಗೂ ಅನಿಸಿರಬೇಕು. ನಾನು ಹಂಗ ಅನ್ನಬಾರದಾಗಿತ್ತು ಅಂತ. ಇದನ್ನ ಅವರು ಎಕ್ಸ್‌ಪ್ರೆಸ್ ಮಾಡಿದರು ಅಂತ ಕಾಣ್ಸುತ್ತೆ.

**ಸಾರ್, ನೀವು ನವ್ಯದಿಂದ ಬಹಳ ಕಲಿತೆ ಅಂತಂದಿರಿ. ಆದರೆ ನಿಮಗೆ 'ಸಮನ್ವಯ' ಕವಿ ಅಂತಂದರೆ ಬೇಸರ ಆಗ್ತದೆ?**

'ಸಮನ್ವಯ ಕವಿ' ಅನ್ನೋ ಶಬ್ದದ ಬಗ್ಗೆ ಅಲ್ಲ. ಆದರೆ ಅದರ ಹಿಂದಿನ ಧೋರಣೆಯ ಬಗ್ಗೆ. ನವ್ಯ ಕವಿಗಳು ಈ ಒಂದು ಬ್ರಾಂಡ್ ಮಾಡುವಾಗ ಆ ಮಾತಿನ ಹಿಂದೆ ಅವರ ಐಡಿಯಾ ಏನಿತ್ತು. ಅದು ಅಷ್ಟು ಸಮಂಜಸವಾದದ್ದಲ್ಲ. ಈಗ ಸಮನ್ವಯ ಮಾಡಿಕೊಳ್ಳದಿದ್ದರೆ ಕಾವ್ಯಾನೇ ಹೇಗಾಗುತ್ತೆ? ಪಂಪನ ಹಿಡಕೊಂಡು ಮಾರ್ಗದೇಶಿ ಸಮನ್ವಯ ಅಂತೀವಿ. ಪೂರ್ವ-ಪಶ್ಚಿಮದ ಸಮನ್ವಯ ಅಂತೀರಿ. ಇಡೀ ನಮ್ಮ ಕಾವ್ಯ ಪರಂಪರೆಯೇ ಆ ರೀತಿಯಾಗಿ ಬಂದ್ದದಲ್ಲವಾ? ಆದರೆ ನವ್ಯರು 'ಸಮನ್ವಯ' ಅನ್ನುವ ಹೊತ್ತಿನಲ್ಲಿ 'ಹೆಚ್ಚು ಗಣಿಸಬೇಕಾದಂಥ ಕವಿಗಳಲ್ಲ' ಅನ್ನೋ ಅರ್ಥ ಇತ್ತು. ಆದರೆ ಇವರನ್ನ ಬಿಟ್ಟು ಬಿಡ್ಲಿಕ್ಕೂ ಆಗೋಲ್ಲ. "ನರಸಿಂಹಸ್ವಾಮಿ, ಕಣವಿ, ಶಿವರುದ್ರಪ್ಪ ಮುಂತಾದ ಸಮನ್ವಯ ಕವಿಗಳು" ಅಂತ ಎರಡು ವಾಕ್ಯದಲ್ಲಿ

ಮುಗಿಸಿಬಿಟ್ಟು, ಅವರ ವಿಮರ್ಶೆ ಬೇರೆಕಡೆ ಹೊರಳಿ ಬಿಡ್ತಿತ್ತು.

**ಸೃಜನಶೀಲ ಪ್ರಕ್ರಿಯೆಯಲ್ಲಿ ಈ ಸಮನ್ವಯ ಅನ್ನೋದು ಬಹಳ ಅರ್ಥಪೂರ್ಣ ಕ್ರಿಯೆ ಅಂತ ನೀವು ಪರಿಭಾವಿಸ್ತೀರಾ?**
ಹೌದು, ಈಗ ನಿಮಗೆ ನಿಮ್ಮದೇ ಆದಂಥ ವೈಶಿಷ್ಟ್ಯ ಇರ್ತದೆ. ನನಗೇ ನನ್ನದೇ ಆದಂತಹ ಕಾವ್ಯದ ಸ್ವಂತಿಕೆ ಇರ್ತದೆ. ನಾನು ಬರವಣಿಗೆ ಮಾಡಬೇಕಾದರ ಇದಕ್ಕೂ ಪೋಷಕವಾಗುವಂಥ ಅಂಶಗಳನ್ನ, ಅವು ಎಲ್ಲಿಂದಲೇ ಇರಲಿ, ಹೀರಿಕೊಂಡು ಬೆಳೀಬೇಕು. ಈಗ ಅವರಿಗೆ ಎಲಿಯಟ್ ಇರಲಿಲ್ಲವೋ ಆ ರೀತಿಯಾಗಿ? ಪಂಪನಿಂದ ಬೇಂದ್ರೆಯವರಿಗೂ ಈ ಸಮನ್ವಯ ಕೆಲಸ ಮಾಡಿದೆ. ಈಗ ಬೇಂದ್ರೆಯವರನ್ನು ಒಬ್ಬರನ್ನೇ ಓದಿದರೆ, ನಮ್ಮ ಇಡೀ ಕಾವ್ಯದ ಪರಂಪರೆಯನ್ನು ನೋಡ್ತೀವಿ. ಪಂಪ ಕಾಣಿಸ್ತಾನ, ಕುಮಾರವ್ಯಾಸ ಕಾಣಿಸ್ತಾನ, ದಾಸರಿದಾರ, ವಚನಕಾರರಿದ್ದಾರ, ಅಲ್ಲಮ ಇದ್ದಾನ, ನಿಜಗುಣರು ಇದ್ದಾರ. ಎಲ್ಲ ಅಲ್ಲಿ ಇದ್ದಾರ. ಈ ಸಾವಿರಾರು ವರ್ಷದಿಂದ ಕನ್ನಡ ಕಾವ್ಯ ಭಾಷೆಗೆ ಈ ಶಕ್ತಿ ತೇಜಸ್ಸು ಸತ್ವ ತಂದುಕೊಟ್ಟವರೇ ಅವರಲ್ಲ? ಮತ್ತೆ ಆ ಪರಂಪರೆಯನ್ನು ನಾವು ತಿಳಿದುಕೊಳ್ಳದೇ ಇದ್ದರೆ ಹೆಂಗೆ ಬೆಳವಣಿಗೆ ಸಾಧ್ಯವಾಗ್ತದೆ? ಇವತ್ತಿನ ಸಮಕಾಲೀನತೆ ಅನ್ನೋವಂಥ ಅಂಶ ಇದ್ದರೂ ಕೂಡಾ, ನಮ್ಮ ಹಿಂದಿನ ಕವಿಗಳನ್ನೂ ನಾವು ಸಮಕಾಲೀನಗೊಳಿಸತಾನೇ ಹೋಗಬೇಕಾಗ್ತದೆ. ಪಂಪನನ್ನೂ ನಾವು ಇವತ್ತಿನ ಸಮಕಾಲೀನ ಕವಿಯನ್ನಾಗಿ ನೋಡ್ತಾ ಹೋಗ್ತೀದೀವಿ. ವಚನಕಾರರು ನಮಗಿಂತಲೂ ಎಷ್ಟೋ ಸಲ ಸಮಕಾಲೀನರಾಗಿ ಕಾಣ್ತಾರೆ.

**ಪರಂಪರೆ ಜೊತೆಗೆ ಅರ್ಥಪೂರ್ಣವಾದ ಗುದ್ದಾಟ ಮತ್ತು ಸ್ವೀಕಾರವನ್ನ ಸಮನ್ವಯ ಅನ್ನೋದಾದರೆ ಅದು ಕ್ರಿಯೆಟಿವ್ ಪ್ರಾಸೆಸ್‌ಗೆ....**
ಬಹಳ ಅಗತ್ಯ. ಆದರೆ ನವ್ಯರು ಈ ಪದವನ್ನ ನಮ್ಮನ್ನ ಒಂದು ಕಡೆ ಸರಿಸಿಡಲಿಕ್ಕೆ ಬಳಸಿದರು.

**ನಮ್ಮ ಹಿರಿಯ ಲೇಖಕರಲ್ಲಿ ಮಾಸ್ತಿ, ಕುವೆಂಪು, ಬೇಂದ್ರೆಯವರು ನಿಮಗೆ ಸವಾಲಾಗಿ ಪ್ರೇರಕವಾಗಿ ಪ್ರಭಾವಗಾರರಾಗಿ ಅಥವಾ ಪ್ರಭಾವ ತಪ್ಪಿಸಿ ಕೊಳ್ಳೋದಿಕ್ಕೇ ಕಾರಣರಾಗಿ, ಬೇರೆ ಬೇರೆ ಬಗೆಯಲ್ಲಿ ಮುಖ್ಯವಾಗಿದಾರೆ. ಆದರೆ ಕಾರಂತರ ಬಗ್ಗೆ ಎಲ್ಲೂ ಹೇಳಲೇ ಇಲ್ಲ. ಕಾರಂತರ ಮೇಲಿನ ನಿಮ್ಮ ರೀಡಿಂಗ್ ತಿಳಿಯೋ ಕುತೂಹಲವಿದೆ. ಕಾರಂತರು ನಮ್ಮ ಈ ಪರಂಪರೆ ಅನ್ನೋದರ**

**ಜೊತೆಗೆ ಬಹಳ ಭಿನ್ನವಾದ ಗುದ್ದಾಟ ಮಾಡಿದೋರು. ಅವರ ನಾಸ್ತಿಕವಾದಿ ವೈಚಾರಿಕತೆ, ಆಮೇಲೆ ವೈಯಕ್ತಿಕವಾಗಿ ಸಂವಾದ ಮಾಡೋಕೆ ಆಗೋಲ್ಲ ಅನ್ನೋ ಅವರ ಸಿಡುಕುತನ ಎಲ್ಲಾ ನಿಮಗೆ ವಿಪರೀತ ಅನ್ನೋ ಸ್ವಭಾವ.**

ಇಲ್ಲಿಲ್ಲ. ಆ ಮನುಷ್ಯನಲ್ಲಿ ಒಂದು ರೀತಿಯ ಪ್ರೀತಿಯಿತ್ತು. ನಿಮ್ಮೆದುರಿಗೆ ನಿಷ್ಠುರವಾಗಿ ಏನೋ ಮಾತಾಡಿಬಿಡಬಹುದು. ಆದರೆ ಒಳಗೆ ಕರುಳಿನ ಗುಣ ಭಾಳ ಇತ್ತು. ಅವರಿಗೆ ಪಂಪ ಪ್ರಶಸ್ತಿ ಬಂತಲ್ಲ, ಇನ್‌ಫ್ಯಾಕ್ಟ್ ಆ ವರ್ಷದ ಆಯ್ಕೆ ಸಮಿತಿಯಲ್ಲಿ ನಾನೂ ಇದ್ದೆ. ಅವರ 'ಮೈಮನಗಳ ಸುಳಿಯಲ್ಲಿ' ಕಾದಂಬರಿಗೆ ಪ್ರಶಸ್ತಿ ಬಂದಾಗ, ಅವರು ಎಲ್ಲೋ ಒಂದು ಸಭೆಯಲ್ಲಿ ಹೇಳಿದರಂತೆ. 'ನಾನು ಪಂಪನನ್ನೇ ಓದಿಲ್ಲ, ನನಗೆ ಪಂಪ ಪ್ರಶಸ್ತಿ ಬಂದಿದೆ'ಅಂತ. ಕಾರಂತರು ಹಿಂಗೆ ಅಂದರಲ್ಲ ಅಂತ ಯೋಚಿಸಿದೆ. ಅವರು ಪಂಪನನ್ನು ಓದಿಲ್ಲದೆ ಇದ್ದರೂ ಕೂಡ ಪಂಪನ ಪ್ರಭಾವ ಅವರ ಮೇಲೆ ಇದೆ ಅಂತ ನಾನು ಹೇಳಿದೆ. ಪಂಪನಂಥ ಕವಿಗಳು ಏನು ಇದಾರಲ್ಲ, ಅವರನ್ನು ಓದಿಯೇ ನಮ್ಮ ಪ್ರಭಾವ ಆಗಬೇಕಾಗಿಲ್ಲ. ಒಬ್ಬ ದೊಡ್ಡ ವ್ಯಕ್ತಿಯ ವಿಚಾರಗಳು ಅವರ ಕಾವ್ಯಗಳು ಸ್ವತಃ ಓದದೇ ಇದ್ದರೂ ಉಳಿದವರನ್ನ ಓದುವಾಗಲೀ ಮಾತಾಡುವಾಗ ಆಗಲೀ ನಮ್ಮ ಕಿವಿ ಮೇಲೆ ಬೀಳ್ತಿರ್ತವೆ. ಈಗಲೂ ಕೂಡಾ ವೈಜ್ಞಾನಿಕವಾಗಿ ನೋಡಿದಾಗ ಒಂದು ಸಭೆಯಲ್ಲಿ ಮಾತನಾಡಿದೀವಿ ಅಂದರೆ, ನಮ್ಮ ಮಾತುಗಳು, ವಿಚಾರ ತರಂಗಗಳು ಅವು ಸಭಿಕರಿಗಷ್ಟೇ ಅಲ್ಲ, ಇನ್ನೂ ದೂರ ಹೋಗ್ತವೆ. ಹಾಗಿದ್ದಾಗ ಪಂಪನ 'ಮನುಷ್ಯ ಜಾತಿ ತಾನೊಂದೆ ವಲಂ' ಅನ್ನೋ ಮಾತು ಕಾರಂತರ ಜೀವನ ದೃಷ್ಟಿಗೆ ಒಪ್ಪುದೆಯೋ ಇಲ್ಲವೋ?

**ಕನ್ನಡದಲ್ಲಿ ಈಗ ಬರೀತಿರೊ ಅನೇಕ ಕವಿಗಳಲ್ಲಿ ಒಂದು ಬಗೆಯ ಚಡಪಡಿಕೆ ಕಾಣ್ತಾದೆ. ಕಾವ್ಯಕ್ಕೆ ಓದುಗರಿಲ್ಲ, ಓದುಗರ ಬರ ಇದೆ ಅಂತನ್ನೋ ಆತಂಕ ಕೇಳ್ತಾ ಇದೆ. ಈ ಬಿಕ್ಕಟ್ಟು ನಿಜವಾ? ನಿಜವೇ ಆಗಿದ್ದರೆ ಇದಕ್ಕೆ ಏನು ಕಾರಣ?**

ಕವಿತೆಗೆ ಓದುಗರು ಈಗೇ ಇಲ್ಲ ಅಂತಲ್ಲ, ಮೊದಲಿನಿಂದಲೂ ಅಷ್ಟೆ. ಮೊದಲಿಗೆ ಓದುಗರು ಅನ್ನೋದಕ್ಕಿಂತ ಕೇಳುಗರು ಇದ್ದರು. ಗಮಕದಲ್ಲಿ ಕೂತುಕೊಂಡು ಕೇಳ್ತಾ ಇದ್ದರು. ಈ ಓದೋದು ಅನ್ನುವಂತಹದ್ದು ಇದೆಯಲ್ಲ, ತಮಗೆ ಮೆಚ್ಚಿದ ಕವಿಗಳನ್ನು ಓದುವಂಥವರು ಇದ್ದೇ ಇರ್ತಾರೆ. ಅದರ ಬಗ್ಗೆ ಪ್ರೀತಿ ಇರ್ತದೆ. ಉಳಿದ ಯಾವ ಸಾಹಿತ್ಯ ಪ್ರಕಾರದಲ್ಲಿಯೂ

ದೊರೆಯದೇ ಇರತಕ್ಕಂಥ ಯಾವುದೋ ಒಂದು ವಿಶೇಷ ಗುಣ ಕವಿತೆಯಲ್ಲಿ ಕಾಣಿಸ್ತದೆ. ಅವರು ಇಡೀ ಬೇಂದ್ರೇನ ಓದ್ದೇ ಇರಬಹುದು. ಯಾವುದೋ ಒಂದೆರಡು ಭಾವಗೀತೇನ ಕೇಳೀನೆ, ಅದರ ಸತ್ವ, ವಿಶೇಷವಾದಂತಹ ಗುಣವನ್ನು ಮೆಚ್ಕೊಂಡಿರ್ತಾರೆ. ಈಗಂತೂ ವೇಗದ ಯುಗ. ಕೂತ್ಕೊಂಡು ಅಭ್ಯಾಸ ಮಾಡೋವಂಥ ರೀತಿ ಬಹಳ ಕಡಿಮೆ ಆಗಿದೆ. ಈಗ ಉದಯೋನ್ಮುಖ ಕವಿಗಳು ಅಂತ ತೆಗೆದುಕೊಂಡಾಗ, ಅನೇಕ ಜನ ಕವಿತೆ ತೋರಿಸಲಿಕ್ಕೆ ಬರ್ತಿರ್ತಾರ. ಮುನ್ನುಡಿ ಬರೀರಿ ಅಂತ ಬರ್ತಾರ. ಅವರಲ್ಲಿ ಕಂಡುಕೊಂಡ ಒಂದು ಸಂಗತಿ ಅಂದರೆ, ಅಭ್ಯಾಸದ ಪ್ರವೃತ್ತಿನೇ ಇಲ್ಲ. ನಾವೇನ್ಮಾಡ್ತ ಇದ್ವಿವಿ, ಬೇಂದ್ರೆಯವರ ಅಥವಾ ಕುವೆಂಪು ಅವರ ಪುಸ್ತಕಗಳನ್ನ ಓದ್ತಿದ್ವಿವಿ. ಮೇಲಿಂದ ಮೇಲೆ ಓದೋದು. ಈಗ ಇಲ್ಲವೇ ಇಲ್ಲ. ಬೇಂದ್ರೆನಾ ಓದಿದೀರಾ ಅಥವಾ ಯಾವುದಾದರೂ ಒಳ್ಳೇ ಪುಸ್ತಕಾನ ಓದಿದೀರಾ ಎಂದು ಕೇಳಿದರೆ 'ಇಲ್ಲ'ಅಂತಾರೆ. ಬೇಂದ್ರೆಯವರ 'ಗರಿ' ಕುವೆಂಪುರವರ 'ನವಿಲು' ಹೀಗೆ ಒಬ್ಬೊಬ್ಬ ಕವಿಯ ಒಂದೊಂದು ಸಂಕಲನವನ್ನೇ ಸರಿಯಾಗಿ ಓದಿದರೂ ಸಾಕು, ಆ ಕವಿಯ ಭಾಷೆ, ಲಯ, ಅವನ ಆಶಯ, ಆ ಧಾಟಿ ಧೋರಣೆ ಗೊತ್ತಾಗುತ್ತದೆ. ಇವೆಲ್ಲವನ್ನ ಗಮನದಲ್ಲಿ ಇಟ್ಟುಕೊಂಡು ಅಭ್ಯಾಸ ಮಾಡುವ ಪ್ರವೃತ್ತಿ ಇಲ್ಲವೇ ಇಲ್ಲ.

**ಈಗ ಬರೀತಿರೋರಲ್ಲಿ ನಿಮಗೆ ಯಾರು ಪ್ರಾಮಿಸಿಂಗ್ ಕವಿ ಅಂತ ಅನಿಸ್ತದೆ.**
ಅಲ್ಲಲ್ಲಿ ಇದ್ದಾರೆ. ಕೆಲವರಾಗದೇ ಹಿರಿಯ ಕವಿಗಳ ಲೈನಲ್ಲೇ ಬರ್ತಾರೆ. ಎಚ್.ಎಸ್.ಶಿವಪ್ರಕಾಶ್ ಇದ್ದಾರೆ. ಎಸ್.ಜಿ. ಸಿದ್ಧರಾಮಯ್ಯ ಇದ್ದಾರೆ. ಆನಂದ ಝುಂಜರವಾಡ ಇದ್ದಾರೆ. ಎಸ್. ಮಂಜುನಾಥ, ಲಕ್ಷ್ಮೀಪತಿ ಕೋಲಾರ, ಶಂಕರಕಟಗಿ ಇದ್ದಾರೆ. ನಿರಾಸೆ ಆಗುವಂಥ ಸ್ಥಿತಿ ಇಲ್ಲ. ಆದರೆ ಅದಕ್ಕೊಂದು ಪ್ರವಾಹದ ಗತಿ 'ಸಮಷ್ಟಿಯ ಗತಿ'ಇಲ್ಲ. ನವೋದಯ ಕಾವ್ಯ, ನವ್ಯಕಾವ್ಯ ಅಂದರೆ ಹೆಂಗೆ ಒಂದು ಪ್ರವಾಹದ ಗತಿ ಕಾಣ್ತೇವಲ್ಲ, ಹಂಗೆ ಈಗ ಎಲ್ಲ ಕೂಡಿಸಿ ಯಾವುದನ್ನ ಗುರುತಿಸಲಿಕ್ಕೆ ಆಗ್ತಾ ಇಲ್ಲ. ಆದರೆ ಎಲ್ಲೆಲ್ಲಿ ಈ ಹೊಸತನ ಕಂಡು ಬರ್ತಾ ಇದೆ, ಅದನ್ನ ಅವಶ್ಯಕವಾಗಿ ಗುರುತಿಸಬೇಕು. ನಿಜವಾಗಿಯೂ ಒಳ್ಳೇ ಕವಿಗಳೂ ಬರೀತಾ ಇದಾರೆ. ಆದರೆ ಯಾಕೋ ವಿಮರ್ಶಕರ ಲಕ್ಷ್ಯ ಆ ಕಡೆಗೆ ಇನ್ನೂ ಹೊರಳಿಲ್ಲ. ಈಗ ಶತಮಾನ ಬ್ಯಾರೆ ಮುಗದ ಬಿಟ್ಟಿದೆಯಲ್ಲ, ಅವರೆಲ್ಲಾ ಈಗ ಶತಮಾನ ಸಮೀಕ್ಷೆಯಲ್ಲಿ

ತೊಡಗಿಬಿಟ್ಟಾರ. (ನಗು) ....

**ಬಹುಶಃ ಈಗಿನ ವಿಮರ್ಶೆ ಒಂದು ಕವಿತೆ ಮೇಲೆ ಅಥವಾ ಒಬ್ಬ ಕವಿಯ ಮೇಲೆ ಪೋಕಸ್ ಮಾಡ್ತಾ ಇಲ್ಲ. ಅದು ಹೋಗಿ, ಒಂದು ದೊಡ್ಡ ಕ್ಯಾನ್ವಾಸ್‌ನಲ್ಲಿ ಸಂಸ್ಕೃತಿ ವಿಮರ್ಶೆ ಅಂತಾಗಿ, ಸಾಹಿತ್ಯದ ಮೇಲೆಯೇ ಹೆಚ್ಚು ಗಮನ ಹರಿಸೋದು ಕಡಿಮೆಯಾಗಿದೆ. ಸಂಸ್ಕೃತಿ ಚಿಂತನೆಗೆ ಸಾಹಿತ್ಯವೂ ಒಂದು ಸಣ್ಣ ಅಂಶವಾದಂತಿದೆ.**

ಈಗ ಅಪ್ರಿಸಿಯೇಶನ್, ರಸವಿಮರ್ಶೆ ಅಂತ ಏನು ಕರೀತೀವಿ, ಬರಬರತಾ ಅದಕ್ಕೆ ವ್ಯಾಲ್ಯೂ ಕಡಿಮೆ ಅಂತನ್ನೋ ರೀತಿಯಲ್ಲಿ ಆಗಿದೆ. ಆದರೆ ಈಗದು ಮತ್ತೆ ಬೇಕು ಅಂತ ಅನಿಸ್ತಾ ಇದೆ. ಕಾವ್ಯದ ಅಭಿರುಚಿಯನ್ನ ಓದುಗರಿಗೆ ಹುಟ್ಟಿಸಬೇಕು ಅಂತಂದರೆ, ಆ ಕಾವ್ಯದ ಬಗ್ಗೆ ರಸವಿಮರ್ಶೆ ಬೇಕು. ಈ ಸಾಂಸ್ಕೃತಿಕ ವಿಮರ್ಶೆನೂ ಇರ್ಲಿ, ಅದೂ ಬೇಕು. ಆದರೆ ಮೊದಲು ಓದುಗನಲ್ಲಿ, ಕವಿತೆಯಲ್ಲಿ ಆಸ್ಥೆಯ ತನ್ಮಯತೆಯನ್ನ ಹುಟ್ಟಿಸಬೇಕು. ಆಮೇಲೆ ಕೈ ಹಿಡಿದು ಕರೆದುಕೊಂಡು ಹೋಗಿ, ವಿಶಾಲ ಜಗತ್ತನ್ನು ತೋರಿಸ್ಕೊಡೋವಂಥದ್ದು ಮಾಡಿ. ಆದರೆ ನೀವು ಒಮ್ಮೆಲೇನೇ ತೂರಿ ಆಕಾಶಕ್ಕೆ ಕರಕೊಂಡು ಹೋಗಿಬಿಟ್ಟರೆ ಹೇಗೆ?

**ವಿಮರ್ಶೆ ಸಂಸ್ಕೃತಿ ಚಿಂತನೆಯಾಗಿ ಬದಲಾಗಲಿಕ್ಕೆ, ಲಿಟರೇಚರ್ ಮೇಲೆ ಅಭಿರುಚಿ ಹುಟ್ಟಿಸುವ ಕೆಲಸಕ್ಕಿಂತ ಹೆಚ್ಚಾಗಿ ಲೋಕವನ್ನು ಕುರಿತು ಮಾತಾಡ್ತಾ ಇರೋದಕ್ಕೆ ಕಾರಣ ಏನಿರಬಹುದು? ಜಾಗತೀಕರಣ ಮುಂತಾದ ಜಗತ್ತಿನ ಬಹಳ ಮುಖ್ಯವಾದ ವಿದ್ಯಮಾನಗಳು ಕ್ರೈಸಿಸ್‌ಗಳು ಹುಟ್ಟೋದಕ್ಕೂ ಸಾಹಿತ್ಯ ವಿಮರ್ಶೆಯ ಈ ರೂಪಾಂತರಕ್ಕೂ ಸಂಬಂಧ ಇರಬಹುದೋ ಏನೋ....**

ಇದಕ್ಕೂ ಮೊದಲೇನೇ ಆಗಿದೆ. ಗ್ಲೋಬಲೈಜೆಶನ್ ಇವುಗಳ ಅಬ್ಬರ ಇನ್ನೂ ಹೆಚ್ಚು ಕೇಳದೇ ಇರುವಾಗಲೇನೇ ನಮ್ಮ ಜೀವನದ ಸಂಸ್ಕೃತಿ ಬಗ್ಗೆ ಚಿಂತನೆ ಶುರುವಾಗಿತ್ತು. ಈಗ ನೋಡಿ, ಸಂಸ್ಕೃತಿ ಬಗ್ಗೆನೇ ಎಷ್ಟು ವಿವೇಚನೆ ನಡೀತು? ಸಂಸ್ಕೃತಿ ಅಂತಾತು. ಉಪಸಂಸ್ಕೃತಿ ಅಂತಾತು. ಪ್ರತಿಸಂಸ್ಕೃತಿ ಅಂತಾತು. ಬುಡಕಟ್ಟಿನ ಬಗ್ಗೆ ಅಭ್ಯಾಸ ನಡೀತಿರುವಂಥಾದು.... ಹೀಗೆ ಸಂಸ್ಕೃತಿಯ ವ್ಯಾಪ್ತಿ ವಿಸ್ತಾರವಾಗಿ ಬರ್ತಾ ಇದೆ. ನಮ್ಮ ಮೊದಲಿನ ಭಾವನೆ ಏನಿದ್ದವು, ಭಾರತೀಯ ಸಂಸ್ಕೃತಿ ಇದೆಲ್ಲ ಒಂದು ಅಂತ, ಅದು ಬದಲಾಗ್ತಾ ಇದೆ. ಇದೆಲ್ಲ ಸಾಹಿತ್ಯ ಕೃತಿಯ ಸಾಂಸ್ಕೃತಿಕ ವಿಶ್ಲೇಷಣೆಗೆ ಹೊಸ ದೃಷ್ಟಿಯನ್ನು ತಂದು

ಕೊಡ್ತಾ ಇದೆ. ಆದರೆ ಇದು ಅತೀ ಆಗಿಬಿಡ್ತು ಅಂದರೆ, ಹೊಸದಾಗಿ ಅಭಿರುಚಿ ಹುಟ್ಟಬೇಕಾದಂತಹವರಿಗೆ, ಅದು ಒಮ್ಮೆಲೇ ನಿಲುಕದಾಗಬಹುದು ಅಥವಾ ಗೊಂದಲವನ್ನು ಉಂಟುಮಾಡಬಹುದು.

**ಗ್ಲೋಬಲೈಜೇಶನ್ ಅಬ್ಬರ ಅಂದಿರಿ. ಈ ಆರ್ಥಿಕ ರಾಜಕಾರಣದ ವಿದ್ಯಮಾನವನ್ನು ಕವಿಯಾಗಿ ನೀವು ಹೆಂಗೆ ಗ್ರಹಿಸಿದೀರಿ?**

ಇದು ಬಲಿಷ್ಠವಾದ ರಾಷ್ಟ್ರಗಳ ದೃಷ್ಟಿಯಿಂದ ರಾಜಕೀಯವಾಗಿ ಬಹಳ ಪ್ರಭಾವ ಬೀರತಾಇದೆ. ಈಗ ನಮ್ಮನ್ನು ನಾವು ಉಳಸ್ಕೋಬೇಕು ಅಂತಂದರೆ, ಸಾಂಸ್ಕೃತಿಕವಾಗಿ ಗಟ್ಟಿಯಾದ ನಿಲುವನ್ನು ತಳೀಬೇಕಾಗ್ತದೆ. ವಿಶ್ವವೇ ಒಂದು ಹಳ್ಳಿ ಅನ್ನುವಾಗ, ಮೊದಲು ನನಗೆ ನನ್ನ ಹಳ್ಳಿ ನನ್ನದಾಗಬೇಕಲ್ಲ. ನನ್ನ ಜನ, ನನ್ನ ನಾಡು, ನಮ್ಮ ಸಂಸ್ಕೃತಿ ಇದು ನನ್ನದಾಗಬೇಕು. ಗ್ಲೋಬಲೈಜೇಶನ್ ಯಾವುದೋ ಒಂದು ಹದ್ದು ಎರಗಿದಂಗಾಗಬಾರದು. ತಾಯಿ ಮಗುವನ್ನೆತ್ಕೊಂಡು ಪೋಷಣೆ ಮಾಡೋದು ಬೇರೆ. ಹದ್ದು ಬಂದು ಕಚ್ಕೊಂಡು ಹೋಗೋದು ಬ್ಯಾರೆ.

**ಕೆಲವು ವಿಮರ್ಶಕರು ನಿಮ್ಮ ಕಾವ್ಯದ ಬಗ್ಗೆ ತುಂಬಾ ಕ್ರಿಟಿಕಲ್ ಆಗಿ ಬರೆದಿದ್ದಾರೆ. ಹೀಗೆ ನಿಷ್ಠುರವಾದ ಪ್ರತಿಕ್ರಿಯೆ ಬಂದಾಗ ಕವಿಯಾಗಿ ಹೆಂಗೆ ಸ್ವೀಕರಿಸ್ತೀರಿ?**

ಕೆಲವು ಅದರಲ್ಲಿ ಸರಿಯಾದ ಅಂಶಗಳು ಇರಬಹುದು. ಆದರೆ ಕೆಲವು ತಪ್ಪು ಗ್ರಹಿಕೆಗಳಿಂದಾದವು ಅಂತ ಅನಿಸ್ತದೆ. ನಾನು ಅದರ ಬಗ್ಗೆ ಮೌನವಾಗಿ ಬಿಡ್ತೇನೆ. ಅವರು ಬಹುಶಃ ನನ್ನ ಕಾವ್ಯದ ಕೆಲವು ಶಬ್ದಗಳ ಬಗ್ಗೆ, ಅದಕ್ಕೆ ಇರತಕ್ಕಂಥ ಹಿನ್ನೆಲೆ, ಅದು ಕಟ್ಟಿಕೊಡೋವಂಥ ಪ್ರತಿಮೆ, ನಾನು ಯಾವ ರೀತಿಯಿಂದ ಭಾವಿಸಿ ಅಲ್ಲಿನ ಸನ್ನಿವೇಶಕ್ಕೆ ತಂದಿರ್ತೀನಿ, ಅದನ್ನ ವಿಮರ್ಶೆ ತಿಳ್ಕೊಳ್ಳದಿದ್ದರೆ ಏನ್ಮಾಡೋದು. ಈಗ ಮಧುರಚೆನ್ನರ ಬಗ್ಗೆ ಬರೆದ ಪದ್ಯದಲ್ಲಿ ಇದಿದೆ. "ತನುವು ನಿಸದಿಗೆಗಲ್ಲು ಮನವು ಮಾಸತಿಕಲ್ಲು, ನಿಮ್ಮ ಸಾಧನೆಯೊಂದು ವೀರಗಲ್ಲು" ಕವಿತೆಗೆ ಅರ್ಥ ಕೊಡುವಂತಹ ಇದರ ಹಿಂದಿನ ಭಾವಕೋಶ ಏನಿದೆ, ಆ ದೃಷ್ಟಿಯಿಂದ ನೋಡಬೇಕು. 'ಮಾಸತಿಕಲ್ಲು' ಅಂತಕ್ಷಣ ಮಾಸ್ತಿ ಹೋಗೋದಕ್ಕೆ ನಾನು ಫಾರ್ ಆದೀನಿ ಅಂತನ್ನೋ ರೀತಿ ಅಲ್ಲ.

**ಅಂದರೆ ಮಹಾಸತಿ ಅಂದಾಗ ಅದರ ಭಾವಕೋಶದಲ್ಲಿ ಹೆಣ್ಣು ಜೀವಂತವಾಗಿ**

**ಸುಟ್ಟುಹೋದ ದುಸ್ವಪ್ನದ ನೆನಪುಗಳು ಕಳಚಿ ಹೋಗ್ತಾವೆಯೆ?**

ಹಾಗಲ್ಲ, ಆದರೆ ಜನ ನೋಡುವ ರೀತಿ ಅಂದಾಗ, ಅಷ್ಟರ ಮಟ್ಟಿಗೆ ತೀವ್ರತೆ ಅಂತ. 'ಸಾಧನೆಯೊಂದು ವೀರಗಲ್ಲು' ಅಂದಾಗ ಅದರ ಅಸೋಸಿಯೇಶನ್ ಸರಿಯಾದ ರೀತಿಯಲ್ಲಿ ಅವರು ಭಾವಿಸ್ಕೊಂಡಿಲ್ಲ ಅಂತ. ಮತ್ತೆ ಅದನ್ನೆ ಮುಖ್ಯ ಮಾಡ್ಕೊಂಡು ಇಡೀ ನನ್ನ ಕಾವ್ಯದ ಬಗ್ಗೆ ಒಂದು ಶರಾ ಬರೀವಂಥಾದ್ದು ಇದೆಯಲ್ಲ, ಅದು ತಪ್ಪಾಗಬಹುದು. ಅಂಥವು ಬಂದಾಗ ನನ್ನಷ್ಟಕ್ಕೇ ನಾನು ಮೌನವಾಗಿ ಬಿಡ್ತೇನೆ.

**ಸಾರ್, ನೀವು ಅನುವಾದ ಮಾಡಿದೀರಿ. ಸಾತ್ವಿಕ ಸ್ವಭಾವದವರಾದ ನೀವು ಅನುವಾದದಲ್ಲಿ ಮಾತ್ರ ಪೊಲಿಟಿಕಲ್ಲಾಗಿ ರ್‍ಯಾಡಿಕಲ್ ಕವಿಗಳನ್ನ ಆರಿಸಿಕೊಂಡಿದೀರಿ.**

ದೇಶದ ದೃಷ್ಟಿಯಿಂದ ಈಗ ಆ ಕವಿಗಳನ್ನು ಓದೋದು ಅಗತ್ಯವಿದೆ. ಬಹುಶಃ ಕನ್ನಡದ ಕವಿಯಾಗಿ ಯಾವುದನ್ನ ನನಗ ಮಾಡೋದಿಕ್ಕೆ ಸಾಧ್ಯವಾಗಲಿಲ್ಲ, ಯಾವ ವಿಚಾರವನ್ನ ತರಲಿಕ್ಕೆ ಸಾಧ್ಯವಾಗಲಿಲ್ಲ, ಈ ಮೂಲಕವಾಗಿಯಾದರೂ ತಂದಿರಬಹುದು. ತಮಿಳಿನಿಂದ, ತೆಲುಗಿನಿಂದ ಆಫ್ರಿಕನ್ ನಿಗ್ರೋ ಕಾವ್ಯದಿಂದ ಹೆಚ್ಚು ಪೊಲಿಟಿಕಲ್ ಇರೋವಂಥಾ ಪದ್ಯಗಳನ್ನು ಅನುವಾದ ಮಾಡಿದೀನಿ. ಯಾವುದು ನಮ್ಮಲ್ಲಿ ಕೊರತೆ ಇದೆ ಅದನ್ನು ತುಂಬಿಕೊಳ್ಳಬೇಕಾಗಿದೆ. ಇಲ್ಲಿ ಇಚ್ಛಿಸಿದ್ದು ಅಲ್ಲಿ ಅಭಿವ್ಯಕ್ತಿ ಪಡೀತದೆ. ಅದು ನಮ್ಮದೇ. ನಮ್ಮದನ್ನು ಮಾಡ್ಕೊಳ್ಳಬಹುದು. ಬಹುಶಃ ಸುಪ್ತ ಮನಸ್ಸಿನಲ್ಲಿ ಈ ವಿಚಾರ ಇದ್ರೂ ಇರಬೇಕು. ಸ್ಪಷ್ಟವಾಗಿ ಹೇಳಲಾರೆ ಅದನ್ನ.

(ಬರಹರೂಪ: ಪಾರ್ವತಮ್ಮ)

**'ಕನ್ನಡ ಅಧ್ಯಯನ'** ಚಳಿ ಸಂಚಿಕೆ-೨

(ತ್ರೈಮಾಸಿಕ) * 2002

*

# ಚೆನ್ನವೀರ ಕಣವಿ ಸಂದರ್ಶನ

● ರವಿ ಉಪಾಧ್ಯ

**ನಾನು :ಚೆನ್ನವೀರ ಕಣವಿಯವರೇ, 80ಕ್ಕೆ ಕಾಲಿಟ್ಟ ನಿಮ್ಮನ್ನು ನಾನೀಗ ಮತ್ತೊಮ್ಮೆ ಅಭಿನಂದಿಸುತ್ತಿದ್ದೇನೆ. ಶ್ರಾವಣದ ಮಳೆ-ಕೊಳೆಯಲ್ಲಿ ನಮ್ಮ 'ಗೆಲುವಿನ ಸರದಾರ' ಏನು ಮಾಡುತ್ತಿದ್ದಾನೆ. ಈ ಚಾತುರ್ಮಾಸದಲ್ಲಿ ಚತುರನೇ ಆಗಿರಬೇಕಲ್ಲ?**

**ಕಣವಿ :** ನಿಮ್ಮ ಪ್ರೀತಿ, ವಿಶ್ವಾಸಕ್ಕೆ ಧನ್ಯವಾದಗಳು. 'ಶ್ರಾವಣದ ಮಳೆ-ಕೊಳೆ' ಎಂದು ವಾಸ್ತವ ಸಂಗತಿಯನ್ನೇ ನುಡಿದಿದ್ದೀರಿ. ಸೃಷ್ಟಿ ತನ್ನಷ್ಟಕ್ಕೆ ಸುಂದರವಾಗಿಯೇ ಇದೆ. ಆದರೆ ಮನುಷ್ಯ ಅದನ್ನು ಕೊಳೆಯಾಗಿಸುತ್ತ ಸಾಗಿದ್ದಾನೆ. ರಸ್ತೆಗಳಲ್ಲಿ ಮಾರಿಗೊಂದು ಗುಂಡಿ. ನಗರದ ಕೆಲವು ಮುಖ್ಯ ರಸ್ತೆಗಳೇನೋ ರಿಪೇರಿಯಾಗಿವೆ. ಕಸ-ರಾಡಿ-ಕೆಸರು ಹೇಳತೀರದಷ್ಟು. ನಗರ ಪಾಲಿಕೆಗೆ ಹೊಸದಾಗಿ ಆಯ್ಕೆಗೊಂಡ ಸದಸ್ಯರು ಏನು ಕಸರತ್ತು ಮಾಡುತ್ತಾರೊ ನೋಡಬೇಕು. ಬೆಳಗಾವಿಯ ಪರಿಸ್ಥಿತಿಯೂ ಇದಕ್ಕಿಂತ ಭಿನ್ನವಾಗೇನೂ ಇರಲಾರದು, ಅಲ್ಲವೆ? ಒಂದು ಊರನ್ನು ಸ್ವಚ್ಛವಾಗಿ, ಅಚ್ಚುಕಟ್ಟಾಗಿ ಇಟ್ಟುಕೊಳ್ಳದ ನಾವು ದೇಶವನ್ನು ಹೇಗೆ ಕಟ್ಟಬಲ್ಲೆವು?

ಅತ್ತಿಕೊಳ್ಳದ ಗುಡ್ಡಗಳು ಮಾತ್ರ ಹಸುರಿನಿಂದ ಕಂಗೊಳಿಸುತ್ತಿವೆ. ಅವುಗಳ ಸುತ್ತು-ಮುತ್ತು ನನ್ನ ಬೆಳಗಿನ ವಾಯುವಿಹಾರ ಒಬ್ಬಂಟಿಯಾಗಿ. ಕುವೆಂಪು ಬರೆದಿದ್ದಾರಲ್ಲ, "ನಾನು, ನಾಯಿ, ಮೆಟ್ಟು, ಕೊಡೆ, ನಾಲ್ವರೆ ತಿರುಗಾಟಕೆ"-ಹಾಗೇ.

ನೀವು ಈ ಮೊದಲು ಓದಿದ್ದರೂ ಇನ್ನೊಮ್ಮೆ ಅವರ 'ಭಾದ್ರಪದದ ಬಯಲುಸೀಮೆ' ಕವಿತೆಯನ್ನು ಓದಿನೋಡಿ. ಮಲೆನಾಡಿನಂತೆಯೇ ಬಯಲುಸೀಮೆಯ ಚೆಲುವನ್ನು ಆತ್ಮೀಕರಿಸಿಕೊಂಡದ್ದು ನನಗೆ ಹೆಚ್ಚು ಇಷ್ಟವಾಯಿತು. ಅದರಲ್ಲೂ ಈ ನುಡಿ:

'ಸಹ್ಯಾದ್ರಿಯ ಪ್ರಕೃತಿ ಭಾಮೆ
ಸೌಂದರ್ಯ ಪರಾಕ್ರಮಿ;
ಭಾದ್ರಪದದ ಬಯಲುಸೀಮೆ
ರಮ್ಯತೆಯಲಿ ಸಂಯಮಿ'

ಬೇಂದ್ರೆಯವರ 'ಶ್ರಾವಣ'ದಂತೆಯೇ ಕುವೆಂಪು ಅವರ 'ಭಾದ್ರಪದ'ವೂ ಧಾರವಾಡದಲ್ಲಿ ಮೇಳೈಸಿದೆ. ನಿಮ್ಮ ಪ್ರಶ್ನೆಗೆ ಹೀಗೆ ಇಷ್ಟೊಂದು ಲವಲವಿಕೆಯಿಂದ ಹೇಳುತ್ತಿರುವ ನಾನು ಚತುರನಲ್ಲದೆ ಮತ್ತೇನು?

**ನಾನು : ವರಕವಿ ಬೇಂದ್ರೆಯವರ ಪ್ರಭಾವ ನಿಮ್ಮ ಮೇಲೆ ಸಾಕಷ್ಟಾಗಿದ್ದನ್ನು ಒಪ್ಪಿಕೊಳ್ಳುವ ನೀವು, ಅವರ ಆ ಬಾಯ್ಮಾತಿನ ಗತ್ತಿಗೆ ಇಡಿಯಾಗಿ ಯಾಕೆ ಮಾರುಹೋಗಲಿಲ್ಲ? ಗ್ರಾಮೀಣ ಪ್ರದೇಶದಿಂದ ಬಂದಿದ್ದ ನಿಮಗೆ ಅದು ಸುಲಭವೂ ಆಗಬಹುದಿತ್ತಲ್ಲ? ಹೌದು. ''ಜಾನಪದ' ಮತ್ತು 'ಜನಪದ' ಈ ಶಬ್ದಗಳ ನಡುವಿನ ಅಂತರವನ್ನು ಸರಿಯಾಗಿ ಅರಿಯದೆ ಬೇಂದ್ರೆಯವರನ್ನು ಯಥೇಚ್ಛವಾಗಿ ಜಾನಪದ ಕವಿ ಎಂದೇ ಅನ್ನುತ್ತಾರಲ್ಲಾ. ಹೊಸ ಪೀಳಿಗೆಯವರು ಹೋಗಲಿ, ನುರಿತವರಲ್ಲೂ ಈ ಗೊಂದಲವಿದೆಯಲ್ಲ?**

**ಕಣವಿ :** ಬೇಂದ್ರೆಯವರ ಪ್ರಭಾವ ಬೇರೆ ಬಗೆಯ ಬರವಣಿಗೆಗೆ ನನಗೆ ಪ್ರೇರಣೆ ಒದಗಿಸಿತು. ಬೇಂದ್ರೆಯವರ ಬಾಯ್ಮಾತಿಗೆ ಇಡಿಯಾಗಿ ಮಾರುಹೋಗಿದ್ದರೆ 'ಕಣವಿತನ' ಎಲ್ಲಿ ಉಳಿಯುತ್ತಿತ್ತು? ಗ್ರಾಮೀಣ ಪ್ರದೇಶದಿಂದ ಬಂದಿದ್ದ ನಾನು ನನ್ನ ರೀತಿಯಲ್ಲಿ ಕಾವ್ಯಭಾಷೆಯನ್ನು ನಿರ್ಮಿಸಿಕೊಂಡೆ. ನನ್ನ 'ನೆಲ-ಮುಗಿಲು' ಸಂಗ್ರಹಕ್ಕೆ ಬರೆದ ಮುನ್ನುಡಿಯಲ್ಲಿ ಅವರೇ ಹೇಳಿದ್ದಾರೆ : "ಬೇಂದ್ರೇನ 'ಅಂಬಿಕಾತನಯ'ನಂತೆ ಕಣವಿ ಚೆನ್ನವೀರನಿಗೂ ಇವೇ, ಇಂಥವೇ ಪ್ರೇರಣೆಗಳು" ಎಂದು.

ನೀವು ತಿಳಿದಂತೆ ನುರಿತವರಾರೂ ಬೇಂದ್ರೆಯವರನ್ನು ಜಾನಪದ ಕವಿ ಎಂದು ಕರೆದಿಲ್ಲ. ಅವರದು ಜನಪದ ಭಾಷೆಯಲ್ಲ. ಆದರೆ ತಮ್ಮ ಕಾವ್ಯಕ್ಕೆ ಜನಪದ ಸಾಹಿತ್ಯದ ತಂತ್ರಗಳನ್ನು ಬಳಸಿದ್ದಾರೆ. ಅವರಲ್ಲಿ ಬರುವ ದೇಶೀಭಾಷೆ ಆಡುನುಡಿಯೇ ಹೊರತು ಜನಪದ ಭಾಷೆಯಲ್ಲ. "ಬೇಂದ್ರೆಯವರು ಪರಂಪರೆಯ ಕಾವ್ಯ ಹಾಗೂ ಜಾನಪದ ಕಾವ್ಯಗಳನ್ನು ಸ್ವೀಕರಿಸಿ ಅವುಗಳಿಗೆ ಹೊಸ ಸಂಸ್ಕಾರ ಕೊಟ್ಟರು" ಎಂದು ಕುರ್ತಕೋಟಿಯವರು ಹೇಳಿರುವುದು ಸಮಂಜಸವಾಗಿದೆ.

**ನಾನು : 'ಜಾಗತೀಕರಣ'ವನ್ನು ಬಹುತೇಕ ಕವಿ-ಸಾಹಿತಿಗಳು ವಿರೋಧಿಸುತ್ತ ಅದರ ನಷ್ಟಮುಖಕ್ಕಷ್ಟೇ ಯಾಕೆ ಇಷ್ಟೊಂದು ಚಿಂತಾಕ್ರಾಂತರಾಗಿದ್ದಾರೆ?**

**ಕಣವಿ :** ಜಾಗತೀಕರಣಕ್ಕೆ ಮನುಷ್ಯ ಸಂಬಂಧ ಮುಖ್ಯವಲ್ಲ. ಲಾಭದ ದುರಾಸೆಯೇ ಹೆಚ್ಚು. ಆ ಪದ ಆಕರ್ಷಕವಾಗಿದೆ, ಅಷ್ಟೇ. 'ಜಾಗತಿಕ ಜ್ಞಾನಪರಂಪರೆ' ಎನ್ನುವ ವಿಚಾರಧಾರೆಯ ಪರಿಣಾಮ ಇಂದಿಲ್ಲ ನಾಳೆ 'ದೇಶೀಪರಂಪರೆ'ಯೋಚಕರ ನಾಶ.

ಅಂತರರಾಷ್ಟ್ರೀಯ ಕಂಪನಿಗಳಲ್ಲಿನ ಉದ್ಯೋಗಕ್ಕೂ ಇಂಗ್ಲೀಷ ಭಾಷೆಯ

ಜ್ಞಾನಕ್ಕೂ ಒಂದು ಸಂಬಂಧವಿದೆ. ಇದರ ಪರಿಣಾಮದಿಂದ ಕೊನೆಗೆ ಪ್ರಾದೇಶಿಕ ಭಾಷೆಗಳಿಗೆ ದೊಡ್ಡ ಕಂಟಕ ಎದುರಾಗುವುದಿಲ್ಲವೆ? ಅದು ಹೂಡುವ ಗಳಿಗೆಗೆ ನಿರ್ದಿಷ್ಟ ಗುರಿಯಿದೆ. ಈ ಉದ್ವಿಮೆಗಳಲ್ಲಿ ಸಾಹಿತ್ಯವಿರುವುದು ಕಷ್ಟಸಾಧ್ಯ. 'ಅಭಿವೃದ್ಧಿ', 'ಜಾಗತಿಕ ಸಮಾನತೆ', 'ಮುಕ್ತತೆ', ಎನ್ನುವ ಮಾತುಗಳೆಲ್ಲ ಎಷ್ಟು ಪೊಳ್ಳು ಎಂಬುದು ಜಾಗತೀಕರಣವನ್ನು ಆದರಿಂದ ಸ್ವಾಗತಿಸಿದ ದೇಶಗಳ ಅರಿವಿಗೆ ಬಂದಿದೆ. ಈ ಕುರಿತು ಕೂಲಂಕುಷವಾಗಿ ಚರ್ಚಿಸುವ ಡಾ.ಕೆ. ಕೇಶವಶರ್ಮಾ ಅವರು ಹೇಳುವಂತೆ "ಸಾಹಿತ್ಯ ಯಾವ ಮೂಲದಿಂದ ಹರಡುವುದೋ ಅದಕ್ಕೆ ಜಾಗತೀಕರಣ ಧಕ್ಕೆಯನ್ನು ತರುತ್ತದೆ. ಒಂದೆಡೆ ಪ್ರಾದೇಶಿಕ ಭಾಷೆಗಳ ನಾಶ, ಮತ್ತೊಂದೆಡೆಯಿಂದ ಮನುಷ್ಯರ ನಡುವಣ ಸಂಬಂಧಗಳ ನಾಶ. ಇವೆರಡೂ ವಾಸ್ತವವಾಗಿ ಘೋರ ಪರಿಣಾಮಗಳೇ!!

**ನಾನು : ಅಭಿವ್ಯಕ್ತಿ ಸ್ವಾತಂತ್ರ್ಯವೆಂದರೇನೆಂಬುದನ್ನು ಚೆನ್ನಾಗಿಯೇ ಅರಿತ ನೀವು ಮೊನ್ನೆ ಮೊನ್ನೆಯಷ್ಟೇ ಡಾ. ಬಂಜಗೆರೆ ಜಯಪ್ರಕಾಶ ಅವರ 'ಆನುದೇವಾ ಹೊರಗಣವನು....'ಎಂಬ ಸಂಶೋಧನಾ ಕೃತಿಯ ಬಗ್ಗೆ ಅಸಡ್ಡೆ ಮಾತಾಡಿದ್ದಲ್ಲದೆ ಅದರ ಮುಟ್ಟುಗೋಲಿಗೂ ಸಮ್ಮತಿಸಿದಿರಿ. ಯಾಕೆ? ಬಸವಣ್ಣನ ಮೂಲ ತತ್ವವೇ 'ಇವ ನಮ್ಮವ, ಇವ ನಮ್ಮವ, ಇವ ನಮ್ಮವ' ಎಂದಿರುವಾಗ ಆಯಾ ಜನಾಂಗ-ಪಂಗಡದವರು ಬಸವಣ್ಣನನ್ನು ತಮ್ಮ ತಮ್ಮವನೆಂದು ಅಪ್ಪಿಕೊಳ್ಳುತ್ತಿರುವುದು ತಪ್ಪೇ? 'ಆನುದೇವಾ....' ಕೃತಿಗೆ ಸಂಶೋಧನಾ ಚೌಕ್ಕಟ್ಟಿಗಿರುವ ತಲಸ್ಪರ್ಶಿತ್ವ, ವಿಚಾರ ಖಾಚಿತ್ಯ, ತೌಲನಿಕತೆಯ ಆಯಾಮಗಳು ಅಷ್ಟೊಂದಾಗಿ ಇರಲಿಕ್ಕಿಲ್ಲ. ಆದರೂ?**

**ಕಣವಿ :** ಮುಟ್ಟುಗೋಲಿಗೆ ನನ್ನ ಸಮ್ಮತಿಯಿದೆಯೆಂದು ನಾನು ಎಲ್ಲಿಯೂ ಹೇಳಿಲ್ಲ. ಅದಕ್ಕೆ ಪರ್ಯಾಯವಾಗಿ ಬೇರೆ ಮಾರ್ಗಗಳಿದ್ದವು. ಅಂಥ ಒಂದು ಮಾರ್ಗವನ್ನು ಲೇಖಕರಿಗೆ ಸೂಚಿಸಿ, ಅವರಿಂದ ತಕ್ಕ ಪ್ರತಿಕ್ರಿಯೆ ಬಾರದ್ದರಿಂದ ಸರ್ಕಾರ ಮುಟ್ಟುಗೋಲು ಹಾಕುವ ನಿರ್ಧಾರ ತೆಗೆದುಕೊಂಡಿತೆಂದು ಸಂಸ್ಕೃತಿ ಇಲಾಖೆ ಸಚಿವರು ಹೇಳಿದ್ದುಂಟು. 'ಜಾತಿ-ಮೂಲದ ವಿಶ್ಲೇಷಣೆ'ಎನ್ನುವ ಮಾತೇ ಮನಸ್ಸಿಗೆ ಬೇಕಾದಂತೆ ಅರ್ಥೈಸುವುದನ್ನು ಸೂಚಿಸುತ್ತದೆ. ಸಂಬಂಧಪಟ್ಟ ವಚನಗಳನ್ನು ಅರ್ಥೈಸುವ ರೀತಿಯನ್ನು ನೋಡಿದರೆ ಇದು ಒಬ್ಬ ಸಾಹಿತ್ಯದ ವಿದ್ಯಾರ್ಥಿ ಗ್ರಹಿಸುವ ರೀತಿಯಲ್ಲ ಎನ್ನುವುದು ಯಾರಿಗಾದರೂ ಗೊತ್ತಾಗುತ್ತದೆ. ಆದ್ದರಿಂದ ಈ ಕೃತಿಯನ್ನು ಗಂಭೀರವಾಗಿ ಪರಿಗಣಿಸುವ ಅವಶ್ಯಕತೆಯೇ ಇರಲಿಲ್ಲ. ಅದು ಸಂಶೋಧನೆಯ ಹಾದಿಯೇ ಅಲ್ಲವೆಂದ ಮೇಲೆ, ಬಂಡಾಯದ ಆಜೀವ ಮುಖಂಡರು ಆಪಾದಿಸುವಂತೆ ಆ ಹಾದಿಯಲ್ಲಿ ಮುಳ್ಳು ಚುಚ್ಚುವ ಪ್ರಸಂಗವೆಲ್ಲಿಂದ ಬರುತ್ತದೆ?

ಸತ್ಯಶೋಧನ ಸಮಿತಿಯ ಕೆಲ ಸದಸ್ಯರು ಸತ್ಯಾಸತ್ಯತೆಯ ಪರಾಮರ್ಶೆಯ ಗೊಡವೆಗೇ ಹೋಗದೆ ತಮ್ಮ ಪೂರ್ವನಿರ್ಧಾರಿತ ನಿಲುವಿಗೆ ಅಂಟಿಕೊಂಡದ್ದು ಎಷ್ಟು ಸರಿ? ಈ ಪ್ರಕರಣದ ಉದ್ದೇಶ ವಿದ್ವತ್ತಿಗಿಂತ ವಿವಾದವನ್ನು ಹುಟ್ಟಿಸುವುದೇ ಆಗಿತ್ತೆಂದು ಯಾರಿಗಾದರೂ ಅನಿಸಿದರೆ ತಪ್ಪೇನು?

**ನಾನು : ಡಾ. ಎಸ್.ಎಲ್. ಭೈರಪ್ಪನವರ ಈಚಿನ 'ಆವರಣ' ಒಂದು ಕೋಮು ಸೌಹಾರ್ದದ ಕಾದಂಬರಿಯೋ, ಕೋಮು ಪ್ರಚೋದನಾತ್ಮಕ ಕಾದಂಬರಿಯೋ? ಅತಿಕೆಟ್ಟ ರಾಜಕೀಯ ವಿಷಮತೆಯ ಇಂದಿನ ಸಂದರ್ಭದಲ್ಲಿ ಇಂಥ ಕಾದಂಬರಿಯ ಅವಶ್ಯಕತೆ ಇತ್ತೇ?**

**ಕಣವಿ :** ನಮ್ಮ ಪ್ರಮುಖ ಕಾದಂಬರಿಕಾರರಲ್ಲಿ ಒಬ್ಬರಾದ ಭೈರಪ್ಪನವರ ಕೃತಿಗಳಲ್ಲಿ ಮೌಲ್ಯವಿಧಾನದ ಸಮಸ್ಯೆ ಇರುವ ಬಗ್ಗೆ ಕುರ್ತಕೋಟಿ ಬಹಳ ಹಿಂದೆಯೇ ಬರೆದದ್ದುಂಟು. 'ಅನಾವರಣ'ದಲ್ಲಿ ಭೈರಪ್ಪನವರ ಉದ್ದೇಶದ ಬಗ್ಗೆಯೇ ವಿಚಾರವಂತರು ಇಂದಿನ ಸಾಂಸ್ಕೃತಿಕ ಸಂದರ್ಭದಲ್ಲಿ ಅಸಮಾಧಾನಗೊಂಡಿರುವುದು ಸಹಜವಾಗಿದೆ. ಈಚೆಗೆ ಒಂದು ಸಂದರ್ಭದಲ್ಲಿ ಭೈರಪ್ಪನವರು 'ಆವರಣದಿಂದ ನನ್ನನ್ನು ಬಿಡುಗಡೆ ಮಾಡಿ' ಎಂದಿರುವುದು ಅರ್ಥಪೂರ್ಣವಾಗಿದೆ.

**ನಾನು : ಸಾಹಿತ್ಯ ಕೃಷಿ ಇಂದು ಅದೇಕೋ ವೈಯಕ್ತಿಕ ವರ್ತುಲದ ಕಕ್ಷೆಗಷ್ಟೇ ಸೀಮಿತವಾಗುತ್ತಲಿದ್ದು, ಹೊಸಬರಿಗೆ ಹಿರಿಯರ ಮಾರ್ಗದರ್ಶನವಿಲ್ಲದಾಗಿ ಸಾಹಿತ್ಯ ಎಲ್ಲಿ ನಿಂತುಬಿಡುವುದೋ ಎಂಬ ಆತಂಕ ಸೃಷ್ಟಿಯಾಗುತಿಲ್ಲವೇ? ಇದಕ್ಕೆ ಪೂರಕವೆಂಬಂತೆ ಡಾಕ್ಟರ್-ಇಂಜಿನಿಯರ್ ಕೋರ್ಸುಗಳ ಆಮಿಷದಬ್ಬರ ಬೇರೆ. ಹೀಗೇ ಕನ್ನಡದ ಸ್ಥಿತಿ-ಗತಿ ಮುಂದುವರಿದರೆ?**

**ಕಣವಿ :** ಹೊಸಬರಲ್ಲನೇಕರು ಪ್ರಕಟಣೆಗೆ ಆತುರ ತೋರುತ್ತಾರೆಯೇ ಹೊರತು ಮಾರ್ಗದರ್ಶನಕ್ಕಾಗಿ ಕಾಯುವುದಿಲ್ಲ. ಅಧ್ಯಯನವಂತೂ ಅವರಿಗೆ ಬೇಕಾಗಿಲ್ಲ. ಆದರೆ, ಯುವಪ್ರತಿಭೆಗಳಿಗೆ ಕೊರತೆಯಿಲ್ಲ. ಕೆಲವರಂತೂ ಅಚ್ಚರಿಗೊಳಿಸುವಷ್ಟು ಹೊಸತನ ತೋರುತ್ತಿದ್ದಾರೆ. ಆದ್ದರಿಂದ ಸಾಹಿತ್ಯ ನಿಂತುಬಿಡುತ್ತದೆಂಬ ಆತಂಕಕ್ಕೆ ಆಸ್ಪದವಿಲ್ಲ. ಕನ್ನಡಕ್ಕೆ ಅಂಥ ಸ್ಥಿತಿ ಎಂದೂ ಒದಗಿಲ್ಲ.

**ನಾನು : ನಿಮ್ಮ ದೃಷ್ಟಿಯಲ್ಲಿ ಸಾಹಿತ್ಯಿಕ ಶ್ರೇಷ್ಠತೆ ಎಂದರೇನು?**

**ಕಣವಿ :** ಲೇಖಕ ತನ್ನ ಅನುಭವದ ಎಲ್ಲ ಶಕ್ತಿಯನ್ನು ಉಪಯೋಗಿಸಿ ಅತ್ಯುತ್ತಮವಾದುದನ್ನು ಸಾಧಿಸುವುದು ಶ್ರೇಷ್ಠತೆಯ ಒಂದು ಬಗೆ. ಎಲ್ಲ ಸಂದರ್ಭಗಳಲ್ಲಿಯೂ ಅದು ಈಡೇರುತ್ತದೆಂದು ಹೇಳಲಾಗದು. ಅದಕ್ಕಾಗಿ ಬರೆಯುವುದನ್ನೇ ಬಿಡಬೇಕಾಗಿಲ್ಲ.

ಅಡಿಗರಂಥವರು ಅದನ್ನು 'ಜೀವನ್ಮರಣ ಪ್ರಶ್ನೆ'ಯಾಗಿ ಭಾವಿಸಿರಬಹುದು. ಅವರದು ಯಾವಾಗಲೂ ವ್ಯಕ್ತಿವಿಶಿಷ್ಟತೆಯ ಮೇಲೆಯೇ ಒತ್ತು. ಸಮಾಜದ ಬಗ್ಗೆ ಸಹಾನುಭೂತಿಗಿಂತ ಅವರಿಗೆ ಆಕ್ರೋಶವೇ ಹೆಚ್ಚು. 'ಶ್ರೇಷ್ಠತೆ' ಒಂದು ವ್ಯಸನವಾಗಬಾರದೆಂದು ಕೆ.ವಿ.ಸುಬ್ಬಣ್ಣ ಬರೆದದ್ದು ನೆನಪಿಗೆ ಬರುತ್ತದೆ.

**ನಾನು : ನಿರ್ಗುಣ ಆಕಾಶಕ್ಕೆ ತಲೆ ಎತ್ತದ ನೀವು ಆಶಾವಾದಿಯಾಗಿ ಮತ್ತೇನು ಹೊಸದನ್ನು ಬರೆಯಬೇಕೆನ್ನುತ್ತೀರಿ?**

**ಕಣವಿ :** ಅಂಥ ಮಹಾತ್ವಾಕಾಂಕ್ಷಿ ಯೋಜನೆಯನ್ನೇನೂ ಹಾಕಿಕೊಂಡಿಲ್ಲ. ಅಂಥ ರೂಢಿಯನ್ನೂ ಇಟ್ಟುಕೊಂಡಿಲ್ಲ. ಅಲ್ಲದೆ ಬೇರೆ ಬಗೆಯ ಸಾಂಸ್ಕೃತಿಕ ಕಾರ್ಯಗಳ ಒತ್ತಡದಲ್ಲಿ ಬರವಣಿಗೆ ಸಲೀಸಾಗಿ ಸಾಗುತ್ತಿಲ್ಲ. ಅದರಿಂದ ಅತೃಪ್ತಿಯೇನೂ ಇಲ್ಲ.

**ನಾನು : ಕಣವಿಯವರೇ, 1964ರಷ್ಟು ಹಿಂದೆಯೇ ನೀವು 'ಪ್ರಪಂಚ ನನ್ನನ್ನು ನನ್ನನ್ನಾಗಿಯೇ ಕಾಣಬೇಕೆಂದು ನನ್ನ ಅಪೇಕ್ಷೆ. ನನ್ನ ಸ್ಥಾನದಲ್ಲಿ ಮತ್ತೊಬ್ಬರನ್ನಿರಿಸಿ ಅಥವಾ ಇನ್ನೊಬ್ಬರೊಡನೆ ನನ್ನನ್ನು ಹೋಲಿಸಿ ನೋಡಬಾರದು. ಏಕೆಂದರೆ ನನ್ನಲ್ಲಿರುವ ದೌರ್ಬಲ್ಯಗಳು ಯಾವಾಗಲೂ ನನ್ನವೇ. ನನ್ನಲ್ಲಿರುವ ಗುಣಗಳಂತೆಯೇ ದೋಷಗಳ ಬಗೆಗೂ ಇತರರು ಆತ್ಮೀಯತೆ ತೋರಿಸಬೇಕು ಅಷ್ಟೆ'ಎಂದು ಸಮಚಿತ್ತದಲ್ಲಿ ಸೌಜನ್ಯಪೂರ್ವಕವಾಗಿ ಅರಿಕೆ ಮಾಡಿಕೊಂಡದ್ದನ್ನು ಈಗ ನಿಮಗೆ ಜ್ಞಾಪಿಸುತ್ತ ನಾನು ನಿರೀಕ್ಷೆಯಲ್ಲಿಯೇ ಇದೆಯೋ ಅಥವಾ ಅಪೇಕ್ಷೆಯಂತೆಯೇ ಸತ್ಯವನ್ನು ಕಂಡುಕೊಂಡಿದ್ದೀರೋ?**

**ಕಣವಿ :** ಅದು ನಾಲ್ಕು ದಶಕಗಳಷ್ಟು ಹಿಂದಿನ ಅಪೇಕ್ಷೆಯಾಗಿದ್ದರೂ ಅದಕ್ಕೆ ಈಗಲೂ ಬಾಧೆಯಿಲ್ಲ. ಜನ ಇಷ್ಟರಮಟ್ಟಿಗೆ ಆದರ ಪ್ರೀತಿ ತೋರುತ್ತಿದ್ದಾರೆಂದರೆ ನನ್ನನ್ನು ಅರ್ಥಮಾಡಿಕೊಂಡಿದ್ದಾರೆಂದೇ ನನ್ನ ಭಾವನೆ.

**ನಾನು : ತೌಲನಿಕ ದೃಷ್ಟಿಯಿಂದಲಂತೂ ಇಬ್ಬರ ಮಧ್ಯದ ಹೋಲಿಕೆ ಅನಿವಾರ್ಯ. ವಿಮರ್ಶಕರಂತೂ ಸರಿಯೇ, ಜಾಣ ಓದುಗರೂ ಅದರಲ್ಲೂ ಪ್ರಜ್ಞಾವಂತರು ನಿಮ್ಮನ್ನು ಮತ್ತು ಜಿ.ಎಸ್.ಎಸ್. ಅವರನ್ನು ಕಾವ್ಯಘಟ್ಟಗಳ ಹಿನ್ನೆಲೆಯಲ್ಲಿ 'ಸಮನ್ವಯ' ಕವಿಗಳೆಂದು ಕರೆದಿದ್ದಾರಲ್ಲಾ, ಇದಕ್ಕೇನೆನ್ನುವಿರಿ? ಅವರ ಈ ರೀತಿಯ ಪರಿಭಾವನೆ ನಿಮ್ಮಿಬ್ಬರಲ್ಲಿಯ ವಸ್ತು ಮತ್ತು ಆಶಯಗಳನ್ನು ನೋಡಿಕೊಂಡು ಬಂದಿರಬಹುದೇ? ಸ್ಥೂಲದಲ್ಲಿ ಇದನ್ನು ಒಪ್ಪಿಕೊಂಡರೂ, ನಿಮ್ಮದು ಭಾವಜನ್ಯ ಕಾವ್ಯವಾದರೆ, ಜಿ.ಎಸ್.ಎಸ್. ಅವರದು ಬುದ್ಧಿಜನ್ಯಕಾವ್ಯ. ಎಷ್ಟೇ ಅಂದರೂ ನಿಮ್ಮನ್ನು**

**ಬೇಂದ್ರೆಯವರು ಪ್ರಭಾವಿಸಿದಂತೆ ಅವರನ್ನು ಕುವೆಂಪು ಅಲ್ಲವೇ?**

ಕಣವಿ : ಬೇಂದ್ರೆ, ಕುವೆಂಪು ಅವರಂಥ ಕವಿಗಳ ಪ್ರಭಾವಕ್ಕೆ ಯಾರು ಒಳಗಾಗಿಲ್ಲ, ಹೇಳಿ. ಅವರಿಂದ ಕಲಿಯಬೇಕಾದ್ದನ್ನು ಕಲಿತು ನಾನಾಗಲಿ, ಶಿವರುದ್ರಪ್ಪನವರಾಗಲಿ ನಮ್ಮ ದಾರಿಯನ್ನು ನಿಚ್ಚಳವಾಗಿ ಕಂಡುಕೊಂಡು ಮುಂದೆ ಸಾಗಿದ್ದೇವೆ.

'ಸಮನ್ವಯ ಕವಿ' ಎಂಬ ಹಣೆಚೀಟಿಯ ಬಗ್ಗೆ ನಾವಿಬ್ಬರೂ ಹಿಂದೆಯೇ ನಮ್ಮ ಪ್ರತಿಕ್ರಿಯೆ ವ್ಯಕ್ತಪಡಿಸಿದ್ದೇವೆ. ಸಾಮಾನ್ಯ ಓದುಗರು ಅದನ್ನೊಂದು ಬಿರುದುಬಾವಲಿ ಎಂದು ಭಾವಿಸಿರುವ ಸಂಭವವಿದೆ. ಜಿ.ಎಸ್.ಎಸ್. ಅವರ ಬಗ್ಗೆ ಬರೆದ ಲೇಖನ ವೊಂದರಲ್ಲಿ ('ನಮ್ಮ ಕಾಲದ ದ್ರೋಣರು') ಯು.ಆರ್. ಅನಂತಮೂರ್ತಿಯವರು ಹೇಳಿದ ಮಾತನ್ನು ನೀವು ಗಮನಿಸಿದ್ದೀರಾ? 'ಸಮನ್ವಯ ಕವಿಗಳೆಂದು ಜಿ.ಎಸ್.ಎಸ್. ಹಾಗೂ ಕಣವಿಯವರನ್ನು ಕರೆದಿದ್ದೇವಲ್ಲ, ಅದು ಒಂದು ದೊಡ್ಡ ತಪ್ಪು.... ಒಬ್ಬ ಒಳ್ಳೆಯ ಸಾಹಿತಿ ಯಾವ ಕಾಲದಲ್ಲೇ ಇರಲಿ, ಅವನು ಬೇರೆ ಬೇರೆ ರೀತಿಯ ಸಮನ್ವಯವನ್ನು ಮಾಡಿಯೇ ಇರುತ್ತಾನೆ. ಅದು ಎಲ್ಲ ಕಾಲಕ್ಕೂ ಇರಬೇಕಾದ ಗುಣ."

**ನಾನು : ವಿಮರ್ಶೆಯನ್ನು ತಿರಸ್ಕರಿಸುವ ಅಹಂಕಾರ ಮತ್ತು ಎಲ್ಲವನ್ನು ಸಾಯಿಸುವ ಅದರ ವ್ಯಾಧವೃತ್ತಿಯ ಬಗ್ಗೆ ಕುವೆಂಪು ಅವರಿಗೆ ವಿರೋಧವಿತ್ತು. ಬೇಂದ್ರೆಯವರಲ್ಲಿ ನೀವಿದನ್ನು ಕಂಡದ್ದುಂಟೆ?**

ಕಣವಿ : ಬೇಂದ್ರೆಯವರಿಗೆ ಅಂಥ ತೀವ್ರ ವಿರೋಧವಿರಲಿಲ್ಲ. ಆದರೂ ಅವರಿಗೆ ರಸಿಕರಲ್ಲಿ, ಸಹೃದಯರಲ್ಲಿ ಹೆಚ್ಚು ವಿಶ್ವಾಸ. ಕವನ ಕಟ್ಟುವ ಕ್ರಿಯೆಯಲ್ಲಿ ಓದುಗನೂ ಭಾಗವಹಿಸುತ್ತಾನೆಂದು ಅವರ ನಂಬಿಕೆ. ರಸಿಕರಲ್ಲಿ ಅವರು ಕೇಳುವುದೇನು?

'ಎನ್ನ ಪಾಡೆನಗಿರಲಿ, ಅದರ ಹಾಡನ್ನಷ್ಟೆ
ನೀಡುವೆನು ರಸಿಕ ನಿನಗ,
ಕಲ್ಲು ಸಕ್ಕರೆಯಂಥ ನಿನ್ನೆದೆಯು ಕರಗಿದರೆ
ಆ ಸವಿಯ ಹಣಿಸು ನನಗೆ.'

ಹಾಗೆ ನೋಡಿದರೆ ನಿಜವಾದ ಕವಿ ವಿಮರ್ಶಕರನ್ನು ಅವಲಂಬಿಸಿರುವುದಿಲ್ಲ. ಕಾವ್ಯಸೃಷ್ಟಿಯ ಸಂದರ್ಭದಲ್ಲಿ ಅವನು ಎಲ್ಲ ಸಾಧಿಸಿದಂತೆ ವಿಮರ್ಶಕನಿಂದಲೂ ಮುಕ್ತನಾಗಿರುತ್ತಾನೆ. ಕೃತಿಯ ಅರ್ಥೈಸುವಿಕೆ ಸೃಜನಶೀಲತೆಗೆ ಪೋಷಕವಾಗಬಲ್ಲುದು. ಸೃಜನಶೀಲತೆಯ ಮೇಲೆ ಆಕ್ರಮಣ ಮಾಡುವುದನ್ನು ಕುವೆಂಪು ಸಹಿಸುವುದಿಲ್ಲ.

**ನಾನು : ನಾವು ಹೊಸ ಮೌಲ್ಯಗಳನ್ನು ಪ್ರಜ್ಞೆಯ ಸ್ತರದಲ್ಲಿ ಒಪ್ಪಿಕೊಂಡರೂ, ಸುಪ್ತಾವಸ್ಥೆಯಲ್ಲಿ ಅದನ್ನು ಸ್ವೀಕರಿಸಲಾಗದು. ನಮ್ಮ ಸುಪ್ತಾವಸ್ಥೆಯಲ್ಲಿನ**

ಅನುಮಾನಗಳನ್ನು ಗೆಲ್ಲುವುದೇ ನಿಜವಾದ ಕವಿತೆ ಎನ್ನುತ್ತಾರಲ್ಲ, ಯು.ಆರ್.ಅನಂತಮೂರ್ತಿಯವರು. ನಿಮ್ಮ ಅಭಿಪ್ರಾಯವೇನು?

ಕಣವಿ : ಒಂದು ರೀತಿಯಲ್ಲಿ ಸುಪ್ತಾವಸ್ಥೆ.... ಅನೇಕ ಬಗೆಯ ಸಂಸ್ಕಾರಗಳನ್ನು ತನ್ನಲ್ಲಿ ಹೀರಿಕೊಂಡಿರುತ್ತದೆ. ಆ ದೃಷ್ಟಿಯಿಂದ ಅನಂತಮೂರ್ತಿಯವರ ಅಭಿಪ್ರಾಯವನ್ನು ಒಪ್ಪಬಹುದು.

ನಾನು : ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಕಾವ್ಯಕ್ಕೇ ಯಾಕೆ ಅಗ್ರಪಟ್ಟ? ನನ್ನ ದೃಷ್ಟಿಯಲ್ಲಿ ಕಾವ್ಯ ರೊಟ್ಟಿ. ಯಾಕೆಂದರೆ, ನಾವು ಎಲ್ಲಿಗೆ ಹೋಗಬೇಕಂತೇವೋ ಅದನ್ನು ತಲುಪಿ ತಿರುಗಿ ನಾವಿದ್ದಲ್ಲಿಗೇ ಕರೆತರುವ ಕ್ಷಮತೆ ಅದಕ್ಕಿದೆ. ಅದೇ ಉಳಿದ ಪ್ರಕಾರಗಳು ಅನ್ನಮಯವಾಗಿರುವದರಿಂದ, ನಾವು ಎಲ್ಲಿಗೆ ಮುಟ್ಟಬೇಕೋ ಅಷ್ಟುಮಾತ್ರಕ್ಕೆ ಅನ್ನ ಸಹಕರಿಸುತ್ತದೆ. ಅಲ್ಲವೇ?

ಕಣವಿ : ಭಾವ-ಭಾಷೆಗಳ ಅತ್ಯಂತ ಸೂಕ್ಷ್ಮ ಆವಿಷ್ಕಾರವನ್ನು ಕಾವ್ಯದಲ್ಲಿ ಕಾಣಬಹುದು. ಆದ್ದರಿಂದ ಅದರಿಂದ ಒದಗುವ ಸುಖ, ಆನಂದ ಅದ್ವಿತೀಯವಾದವು. ಕಾವ್ಯ ನೇರವಾಗಿ ಮನಸ್ಸಿನೊಡನೆ ಮಾತನಾಡುತ್ತದೆ. ಹೃದಯವನ್ನು ತಟ್ಟುತ್ತದೆ. ಹ್ಯಾಜ್ಲಿಟ್ ಹೇಳಿದಂತೆ 'Man is a poetical animal'. ಇನ್ನು ನೀವು ಸೂಚಿಸಿರುವ ಹೋಲಿಕೆಗಳು ಸಮಂಜಸವಾಗಿಯೇ ಇವೆ.

ನಾನು : ಹೌದು, ಸಾಹಿತ್ಯ ಪರಿಷತ್ತಿನ ಈಚಿನ ಒಲವು ನಕ್ಸಲ್‌ವಾದಿಗಳ ಪರ ತಿರುಗಿದಂತಿದೆಯಲ್ಲ? ಅವರ ವಿದ್ರೋಹದಲ್ಲೂ ಏನಾದರೂ ಹಿತಕಾರಿ ಅಂಶಗಳಿವೆಯೇ? ಸಾಹಿತ್ಯಕ್ಕೂ ನಕ್ಸಲ್‌ವಾದಿಯ ನಂಟಿಗೂ ಅದೆಂಥ ಸಂಬಂಧ?

ಕಣವಿ : ಅಧ್ಯಕ್ಷರ ವೈಯಕ್ತಿಕ ನಿಲುವನ್ನು ಪರಿಷತ್ತಿಗೆ ಆರೋಪಿಸಬೇಕಿಲ್ಲ. ಸಾಮಾನ್ಯರ ಹಾಗೂ ಶೋಷಿತರ ಹಿತವನ್ನು ಕಾಪಾಡುವ, ಅವರ ಹಕ್ಕುಗಳನ್ನು ಅವರಿಗೆ ಒದಗಿಸಿಕೊಡುವ ಕಾರ್ಯವನ್ನು ಯಾರು ಕೈಗೊಂಡರೂ ಅದು ಸ್ವಾಗತಾರ್ಹವಾದದ್ದೆ. ಸಮಾಜವಾದಿ ಚಿಂತಕರು, ಸಾಹಿತಿಗಳು ಆ ಬಗ್ಗೆ ಸಹಾನುಭೂತಿ ತೋರಿಸುವುದರಲ್ಲಿ ತಪ್ಪಿಲ್ಲ. ಆದರೆ ಯಾವುದೇ ರೀತಿಯಲ್ಲಿ ಹಿಂಸಾಮಾರ್ಗಕ್ಕೆ ಪ್ರಚೋದನೆ ನೀಡುವಂತಿರಬಾರದು.

ನಾನು : ರಾಮನ ಅಸ್ತಿತ್ವ, ಸೇತುಸಮುದ್ರಂ ಬಗ್ಗೆ ನಿಮ್ಮ ಪ್ರತಿಕ್ರಿಯೆ ಏನು?

ಕಣವಿ : ನೂರಾರು ದಶಕಗಳಿಂದ ಭಾರತದಂಥ ಪುರಾತನ ಸಂಸ್ಕೃತಿಯನ್ನು ಪ್ರತಿನಿಧಿಸುತ್ತ ಬಂದಿರುವ ಕೃತಿ 'ರಾಮಾಯಣ'. ಆದರ್ಶಕ್ಕೂ ಬದುಕಿಗೂ ಸಂಬಂಧವಿಟ್ಟುಕೊಂಡದ್ದು ರಾಮರಾಜ್ಯದ ಕಲ್ಪನೆ. ಹಾಗೆಯೇ ಕಾವ್ಯಕ್ಕೂ ಇತಿಹಾಸಕ್ಕೂ

ವ್ಯತ್ಯಾಸವಿರುವುದನ್ನೂ ಗಮನದಲ್ಲಿಟ್ಟಿರಬೇಕು. ಅದೇ ಕಾಲಕ್ಕೆ ಮೌಢ್ಯವನ್ನು ಪೋಷಿಸಲು ಹೊರಡಬಾರದು. ನಿಸರ್ಗ ಕೆಲವು ಅದ್ಭುತಗಳನ್ನು ನಿರ್ಮಿಸಿದೆ. ಅವುಗಳಲ್ಲಿ ಈಗ ಕರೆಯಲಾಗುತ್ತಿರುವ 'ಸೇತುಸಮುದ್ರ'ವೂ ಒಂದು. ಇವೆರಡೂ ಇಂದು ಕ್ಷುಲ್ಲಕ ರಾಜಕೀಯಕ್ಕೆ ಬಳಕೆಯಾಗುತ್ತಿರುವುದು ಮಾತ್ರ ವಿಷಾದನೀಯ.

**ನಾನು : ಇನ್ಫೋಸಿಸ್‌ನ ನಾರಾಯಣಮೂರ್ತಿಯವರು ರಾಷ್ಟ್ರಗೀತೆಗೆ ಅವಮಾನವೆಸಗಿದ್ದ ಸಂಗತಿ ನಿಮಗೇನು ಹೊಸದಲ್ಲ. ಎಸ್.ಎಲ್. ಭೈರಪ್ಪನಂಥ ಪ್ರಜ್ಞಾವಂತರು ಅದನ್ನು ವಿರೋಧಿಸುವ ಬದಲು ಸಮರ್ಥಿಸಿಕೊಂಡರಲ್ಲ. ಇದಕ್ಕೇನಂತೀರಿ?**

ಕಣವಿ : ಈ ವಿಷಯದಲ್ಲಿ ಯಾವುದೇ ಕಾರಣವನ್ನು ಹೇಳಿ ತಮ್ಮನ್ನು ಸಮರ್ಥಿಸಿಕೊಳ್ಳದೆ ನಾರಾಯಣಮೂರ್ತಿಯವರು ತಮ್ಮ ತಪ್ಪನ್ನು ಒಪ್ಪಿಕೊಳ್ಳುವುದು ಒಳ್ಳೆಯದು. ಎಸ್.ಎಲ್.ಭೈರಪ್ಪನವರು ಏಕಾಏಕಿ ಸಮರ್ಥಿಸಿದ್ದೂ ಒಂದು ವಿಚಿತ್ರವೇ.

**ನಾನು : ಮಾಹಿತಿ ತಂತ್ರಜ್ಞಾನದ ಬಗ್ಗೆ ನಿಮ್ಮ ನಿಲುವೇನು?**

ಕಣವಿ : ಮಾಹಿತಿ ತಂತ್ರಜ್ಞಾನ ಜಗತ್ತನ್ನು ಹೊಸ ವಸಾಹತುಶಾಹಿಗೆ ಒಳಪಡಿಸುತ್ತದೆ. ಮಾಹಿತಿ ಲಭ್ಯತೆಯೇ ಜೀವನವಲ್ಲ. ಏನಿದ್ದರೂ ಅದು ಬಂಡವಾಳವಾದಕ್ಕೆ ಹೊಸ ಸಂಪನ್ಮೂಲ-ಹಣವಾಗಿದೆ. ಹಣವೇ ಎಲ್ಲವನ್ನು ನಿರ್ಧರಿಸುವಾಗ ಮಾನವ ಜೀವನದ ನೈತಿಕ-ಆಧ್ಯಾತ್ಮಿಕ ಮೌಲ್ಯಗಳು ಮೂಲೆ ಗುಂಪಾಗುತ್ತವೆ. ಬಹಳ ಹಿಂದೆಯೇ ಬರೆದ ಇಲಿಯಟ್‌ನ ಕವಿತೆಯ ಸಾಲು ನೆನಪಾಗುತ್ತದೆ: 'Where is the knowledge we have lost in information?'

**ನಾನು : ಅಮೆರಿಕಾದಂತೆ ನಮ್ಮ ಭಾರತ ನೆಲೆಸಿದವರ ಭಾಷೆಯನ್ನು ಕೊಲ್ಲುತ್ತಿದೆಯೇ ಎಂಬ ಭಾವನೆ ನಿಮಗೇನಾದರೂ ಬಂದಿದೆಯೇ?**

ಕಣವಿ : ಜಾಗತೀಕರಣವೆಂದರೆ ಅಮೆರಿಕೀಕರಣವೇ ಅಲ್ಲವೇ? ಆದ್ದರಿಂದ ಭಾರತದಲ್ಲಿಯೂ ಅದು ಸಂಭವಿಸಿದರೆ ಆಶ್ಚರ್ಯವೇನೂ ಇಲ್ಲ.

**ನಾನು : ಮೊನ್ನೆಯಷ್ಟೇ ನೀವು ಬೆಳಗಾವಿಯಲ್ಲಿ ವೇದಿಕೆಯೊಂದರಿಂದ 'ಇಲ್ಲಿ ಕನ್ನಡದ ವಾತಾವರಣ ನಿರ್ಮಾಣವಾಗಬೇಕು'ಎಂದದ್ದೇನೋ ಸರಿಯೇ. ಆದರೆ ಅಂಥ ವಾತಾವರಣ ನಮ್ಮ ನಾಡಿನಲ್ಲೇ ಇಲ್ಲವಲ್ಲ? ಬೆಂಗಳೂರು, ಮೈಸೂರು, ಅಷ್ಟೇ ಯಾಕೆ, ನಿಮ್ಮ ಧಾರವಾಡವನ್ನೇ ತೆಗೆದುಕೊಂಡರೆ, ನಮ್ಮ ಬೆಳಗಾವಿಯೇ ವಾಸಿ ಎನ್ನಬೇಕು. ಮರಾಠಿ ಪ್ರಾಬಲ್ಯವಿಲ್ಲದಿಲ್ಲ. ಹಾಗೆಂದುಕೊಂಡು ಕನ್ನಡದ ವಾತಾವರಣವೇ ಇಲ್ಲ**

ಎನ್ನುವ ಹಾಗಿಲ್ಲ. ಇತ್ತೀಚಿನ ಕೆಲ ವರ್ಷಗಳಲ್ಲಂತೂ, ಅದರಲ್ಲೂ ಈಗ ಕರ್ನಾಟಕ ರಕ್ಷಣಾ ವೇದಿಕೆಯಿಂದಾಗಿ ಕನ್ನಡದ ವಾತಾವರಣ ಪ್ರತಿ ಸನ್ನಿವೇಶದಲ್ಲೂ ವಿಜೃಂಭಿಸುತ್ತಲಿದೆ. ಅಲ್ಲದೆ 'ಸಾಹಿತ್ಯ ಸಂಜೆ,' 'ಸಾಹಿತ್ಯ ಸಂವಾದ'ದಂಥ ವೇದಿಕೆಗಳು ಜೊತೆಗೆ 'ಕ್ರಿಯಾಶೀಲ', 'ಇಂಪು'ವಗೈರೆಗಳು ತಮ್ಮ ಉದ್ದೇಶಿತ ನಿಟ್ಟಿನಲ್ಲಿ ಸಾಕಷ್ಟು ಸಾಂಸ್ಕೃತಿಕ ಪರಿಣಾಮ ಬೀರುತ್ತಲಿರುವುದು ಸುಳ್ಳೇನಲ್ಲ. ಇನ್ನೇನು ಕಳಕಳಿಯಿಂದ ನೀವು ಹೇಳಿದಂತೆ ಇನ್ನೂ ಹೆಚ್ಚೆಚ್ಚು ಅರ್ಥಪೂರ್ಣ ಕಾರ್ಯಕ್ರಮಗಳು ಇಲ್ಲಿ ಜರುಗಬೇಕಿದೆ. ಭಾಷಾ ಬಾಂಧವ್ಯವನ್ನೂ ಸಾಧಿಸಬೇಕಿದೆ.

ಕಣವಿ : ಬೆಳಗಾವಿಯನ್ನು ಧಾರವಾಡಕ್ಕೆ ಹೋಲಿಸುವದುಂಟೆ. ಆದರೂ ಬೆಳಗಾವಿಯಲ್ಲಿಯ ಸದ್ಯದ ವಾತಾವರಣ ಉತ್ಸಾಹದಾಯಕವಾಗಿದೆ. ಹಲವು ಯುವಕ ಸಂಘಗಳು ಹಾಗೂ ಕಾರ್ಯಕರ್ತರು ಕನ್ನಡದ ಕೆಲಸವನ್ನು ಕೈಗೆತ್ತಿಕೊಂಡಿದ್ದಾರೆ. ಸಾಹಿತ್ಯಕ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳು ತಕ್ಕಮಟ್ಟಿಗೆ ಮುಂದುವರಿದಿವೆ. ಕನ್ನಡವನ್ನು ಪ್ರತಿನಿಧಿಸುವ ಯಾವುದೇ ಸಂದರ್ಭದಲ್ಲಿ ಹಿಂಜರಿಕೆ ತಾಳಬಾರದು. ಸಾಮೂಹಿಕ ಇಚ್ಛಾಶಕ್ತಿ ಹಾಗೂ ಸಾಂಘಿಕ ಹೋರಾಟಕ್ಕೆ ಯಶಸ್ಸು ಕಟ್ಟಿಟ್ಟದ್ದು.

ಆದರೆ ರಾಜಧಾನಿ ಬೆಂಗಳೂರಿನಲ್ಲಿ ಕನ್ನಡ ದಿನ ದಿನವೂ ಕ್ಷೀಣಿಸುತ್ತ ಹೊರಟಿರುವುದು ಕಠೋರ ಸತ್ಯ. ಬ್ಯಾಂಗಲೂರನ್ನು ಬೆಂಗಳೂರು ಎಂದರೆ ಅಲ್ಲಿಯ ಕೆಲ ಪ್ರತಿಷ್ಠಿತ ಇಂಗ್ಲೀಷ್ ಪತ್ರಿಕೆಗಳ ನಾಲಿಗೆ ಸೇದಿ ಹೋಗುತ್ತದೆಯಂತೆ!ಬಾಂಬೆ ಮುಂಬಯಿ ಆದಾಗ, ಮದ್ರಾಸ್ ಚೆನ್ನೈ ಆದಾಗ ಇವರಿಗೇನೂ ಧಾಡಿಯಾಗಲಿಲ್ಲ. ಇವರಿಗೆಲ್ಲರಿಗೂ ಬೆಂಗಳೂರಿನ ಗಾಳಿ, ನೀರು, ನೆಲ ಬೇಕು, ಕನ್ನಡ ಮಾತ್ರ ಬೇಡ. ಐವತ್ತು ವರ್ಷಗಳಾದರೂ ಇನ್ನೂ ಸಹಿಸಿಕೊಂಡಿದ್ದೇವಲ್ಲ, ಸಾಕಾಗದೆ? ಅದಕ್ಕೇ ವಾಟಾಳ್ ಅಂಥವರನ್ನು ಕಡೆಗಣಿಸಕೂಡದು.

ನಾನು : ಪ್ರಖ್ಯಾತ ಲೇಖಕರಾದ ವಿ.ಎಸ್. ನೈಪಾಲ್ ಅವರು ತಮ್ಮ **'A Writers People: Ways of Looking and Feeling'** ಎಂಬ ಕೃತಿಯಲ್ಲಿ ಗಾಂಧಿ ಬಗ್ಗೆ ಬರೆದಿರುವ ಸಾಲುಗಳು ಹೀಗಿವೆ: 'ಗಾಂಧಿ ಪರಿಪೂರ್ಣವಾಗಿ ಇರಲೇ ಇಲ್ಲ. ಅಲ್ಲಿ ಇಲ್ಲಿಂದ ತುಣುಕುಗಳನ್ನು ಆಯ್ದುಕೊಂಡ ಮನುಷ್ಯ ಗಾಂಧಿ. ಅಮ್ಮನಿಂದ ಉಪವಾಸ, ವ್ರತಾಚರಣೆ, ಇಂಗ್ಲೀಷರ ಸಾಮಾನ್ಯ ಕಾನೂನು, ರಸ್ಕಿನ್‌ನ ದುಡಿತ, ಟಾಲ್‌ಸ್ಟಾಯ್‌ನ ರಷ್ಯನ್ ಧರ್ಮದ ಕನಸು, ದಕ್ಷಿಣ ಆಫ್ರಿಕಾದ ಜೈಲಿನ ನಿಯಮ, ಮ್ಯಾಂಚೆಷ್ಟರ್‌ನ **'No Breakfast Association.....'**?

ನಾನು : ಕಣವಿಯವರೇ, ನೀವು ನವೋದಯ ಪರಂಪರೆಯ ಧೋರಣೆಯಲ್ಲಿ

'ಗಾಂಧಿ'ಯನ್ನು ನೋಡಿದ್ದಕ್ಕೂ, ನವ್ಯದ ಸನ್ನಿವೇಶದಲ್ಲಿ ಅದೇ ವಸ್ತುವನ್ನು ಅನುಭವಿಸಿ ಪ್ರತಿಕ್ರಿಯಿಸಿದ್ದಕ್ಕೂ ಅಂತರವಿದೆ. ('ಹೊಂಬೆಳಕು'ಪು.406) ಈ ಅಂತರದ ನೋಟವನ್ನು ಇಟ್ಟುಕೊಂಡಿರುವ ನೀವು ಗಾಂಧಿ ಬಗ್ಗೆ ಮತ್ತೂ ಬೇರೆಯದೇ ಭಾವವನ್ನು ತಳೆಯುವ ಸಾಧ್ಯತೆ ಇದೆ ಎನ್ನುವ ಕಾರಣಕ್ಕೆ ಬೇರೊಬ್ಬ ಲೇಖಕರ ಗಾಂಧಿ ಕುರಿತ ವಿಚಾರವನ್ನು ನಿಮ್ಮ ಮುಂದೆ ಇಟ್ಟು, ನಿಮ್ಮ ಪ್ರತಿಕ್ರಿಯೆಯನ್ನು ಕೇಳುವುದು ತಪ್ಪು ಅಲ್ಲ ಅಲ್ಲವೇ?

ಕಣವಿ : ಗಾಂಧಿಯಷ್ಟೇ ಏಕೆ? ಯಾವ ಮನುಷ್ಯನೂ ಪರಿಪೂರ್ಣನಲ್ಲ. ಆದರೂ 'ಮಹಾತ್ಮಾ' ಎಂದು ಕರೆಯಿಸಿಕೊಳ್ಳಬೇಕಾದ ಬಹಳಷ್ಟು ಗುಣವಿಶೇಷಗಳು ಅವರಲ್ಲಿದ್ದವು. ರಾಜಕಾರಣವನ್ನು ಬಿಡಿ, ಅವರು ಎಂದಿಗೂ ಪರಿಶುದ್ಧವಾಗಿರಲು ಸಾಧ್ಯವಿಲ್ಲ. ಆದರೆ ಇರುವಿಕೆಯಲ್ಲಿ ಅತ್ಯಂತ ಸಾಮಾನ್ಯ ಮನುಷ್ಯನೊಡನೆ ಸರಳವಾಗಿ ತನ್ನನ್ನು ಸಮೀಕರಿಸಿಕೊಂಡು, ತನ್ನ ಆತ್ಮಶಕ್ತಿಯನ್ನು ಅವನಂತೆ ಮೆರೆದವರು ಕಳೆದ ಶತಮಾನದಲ್ಲಿ ಎಷ್ಟು ಜನರಿದ್ದಾರೆ? ತನ್ನ ಹೆಂಡತಿ, ಮಕ್ಕಳ ಬಗ್ಗೆ ನಡೆದುಕೊಂಡ ರೀತಿನೀತಿಗಳ ಬಗ್ಗೆ ಒಂದು  ಅಂತರದಲ್ಲಿ ನಿಂತು ನೋಡಿದಾಗ ಒಂದು ಕ್ಷಣ ಅಮಾನವೀಯ ಎನ್ನಿಸಬಹುದು. ರಾಜಕೀಯದಲ್ಲಿ ತಪ್ಪು ಹೆಜ್ಜೆಗಳನ್ನು ಗುರುತಿಸಬಹುದು. ಆದರೂ ಪ್ರಸ್ತುತ ಸಂದರ್ಭದಲ್ಲಿ ಅವರ ನೆನಪು ಪದೇ ಪದೇ ಕಾಡುತ್ತದೆ. ತ್ಯಾಗವೆಂದರೆ ಅಷ್ಟು ಸುಲಭವಲ್ಲ. "ಖಂಡಿಸದೆ ಕರಣವನು, ದಂಡಿಸದೆ ದೇಹವನು, ಉಂಡುಂಡು ಸ್ವರ್ಗಕ್ಕೈದಲ್ಕೆ, ಅದನೇನು ರಂಡೆಯಾಳುವಳೆ?ಎಂದು ಕೇಳುತ್ತಾನೆ ನಮ್ಮ ಸರ್ವಜ್ಞ ಕವಿ. ಈಚೆಗೆ 'Mira & the Mahatma' (ಸುಧೀರ ಕಾಕರ) ಪುಸ್ತಕ ಓದಿದೆ. ಅವರ ಜೀವನದಿಂದಲೇ ಎತ್ತಿಕೊಂಡ ಕಥೆ, ಕಾದಂಬರಿಯಂತೆ ಓದಿಸಿಕೊಳ್ಳುತ್ತದೆ.

ನಾನು : ಭಾವಗೀತೆಯಿಂದ ಮೊದಲ್ಗೊಂಡು ಬಂಡಾಯಪರ ಧೋರಣೆಯ ಕಾವ್ಯ ನಿಮ್ಮಿಂದ ಸೃಷ್ಟಿಯಾಗಿದ್ದರೂ, ನಿಮ್ಮ ಸುನೀತಗಳಲ್ಲಿ. ಸಾನೆಟ್‌ಕ್ಕೆ ಇಷ್ಟೊಂದು ಘನವ್ಯೆತ್ರಿಯ ಒತ್ತುಕೊಡುವ ನೀವು ಅದರ ಪ್ರೇರಕ ಹಿನ್ನೆಲೆಯನ್ನು ಸ್ವಲ್ಪ ವಿವರಿಸುವಿರಾ?

ಕಣವಿ : ಹಿರಿಯ ಕವಿಗಳ ಕಾವ್ಯವನ್ನು ಅಭ್ಯಾಸ ಮಾಡುತ್ತಿರುವಾಗಲೇ ಭಾವಗೀತೆಯ ಜೊತೆಗೆ ನನ್ನನ್ನು ಆಕರ್ಷಿಸಿದ. ಮಾಸ್ತಿಯವರ 'ಮಲಾರ'ವಿತ್ತು. ಈ ದಿಸೆಯಲ್ಲಿ ಸ್ವಾತಂತ್ರ್ಯವಹಿಸಿ ಬೇಂದ್ರೆಯವರ 'ಉಯ್ಯಾಲೆ' ಪ್ರಕಟವಾಗಿತ್ತು. ಗೋಕಾಕ, ಪು.ತಿ.ನ ಅವರೂ ಪ್ರಯೋಗ ಮಾಡಿದ್ದರು. ಇಂಗ್ಲೀಷ ಸಾಹಿತ್ಯದಲ್ಲಿ ಸಾನೆಟ್ ಬರೆಯದ ಕವಿಯೇ ಇಲ್ಲವೆನ್ನಬಹುದು. ವರ್ಡ್ಸ್‌ವರ್ಥ, ಮಿಲ್ಟನ್, ಷೇಕ್ಸಪಿಯರ್

ನನ್ನ ಮನೋಧರ್ಮಕ್ಕೆ ಹೆಚ್ಚು ಹತ್ತಿರವೆನಿಸಿದರು. ಕುವೆಂಪು 'ಕೃತ್ತಿಕೆ'ಯಲ್ಲಿ ಸಾನೆಟ್ಟಿನ ಕಟ್ಟುನಿಟ್ಟುಗಳನ್ನೆಲ್ಲ ಪಾಲಿಸಿಯೂ ಅದ್ಭುತ ರಚನೆ ಮಾಡಿದ್ದರು. ಭಾವಾವೇಶಕ್ಕಿಂತ ಭಾವಪರ–ಚಿಂತನೆಗಳ ಬಗೆಗಿನ ನನ್ನ ಒಲವಿಗೆ ಈ ಪ್ರಕಾರ ಅನುರೂಪವಾಗಿ ಹೊಂದಿಕೊಂಡಿತು. ಆ ಕಾಲದಲ್ಲಿ ಇದನ್ನೊಂದು ಆಹ್ವಾನವಾಗಿಯೇ ನಾನು ಸ್ವೀಕರಿಸಿದೆ.

**ನಾನು : ಗಂಭೀರ ಕಾವ್ಯದ ಹೊರತಾಗಿ ನೀವು ಮಕ್ಕಳ ಕಾವ್ಯಾಂಗಳಕ್ಕೂ ಲಗ್ಗೆ ಹಾಕಿದ್ದೀರಾ. ಮಕ್ಕಳ ಕಾವ್ಯವನ್ನು ಅಷ್ಟೊಂದು ಸಲೀಸಾಗಿ ಪೆಪ್ಪರಮೆಂಟಿನಂತೆ ಚಪ್ಪರಿಸುವ ಹಾಗೆ ಅಭಿವ್ಯಕ್ತಿಸಿದ್ದು ಹೇಗೆ?**

**ಕಣವಿ :** ಮಕ್ಕಳ ಸಾಹಿತ್ಯದಲ್ಲಿ ನನಗೆ ಮೊದಲಿನಿಂದಲೂ ಆಸಕ್ತಿಯಿತ್ತು. ಅಲ್ಲದೆ ಜನಪದ ಕಾವ್ಯದಲ್ಲಿಯ ಮಕ್ಕಳ ಆಟದ ಹಾಡುಗಳು ಬಾಲ್ಯದಲ್ಲಿಯೇ ನನ್ನನ್ನು ಆಕರ್ಷಿಸಿದ್ದವು. ನವೋದಯದ ಸಾಹಿತಿಗಳು ಮಕ್ಕಳ ಬಗೆಗೆ ವಹಿಸಿದ ಕಾಳಜಿಯಂತೂ ಅಪೂರ್ವವಾಗಿತ್ತು. ಇದೆಲ್ಲವೂ ಈ ದಿಸೆಯಲ್ಲಿ ನನಗೆ ಪ್ರೇರಣೆ ನೀಡಿದವು.

**ನಾನು : ನಿಮ್ಮ ಸುಖೀ ದಾಂಪತ್ಯದ ಗುಟ್ಟೇನು?**

**ಕಣವಿ :** ಸಮಾನವಾದ ಸಾಹಿತ್ಯಾಸಕ್ತಿ, ಪರಸ್ಪರ ಸಮಾಲೋಚಿಸಿ ನಿರ್ಣಯ ತೆಗೆದುಕೊಳ್ಳುವ ಪ್ರವೃತ್ತಿ, ಸಣ್ಣತನ, ಸಂಕುಚಿತತೆಗಳಿಂದ ದೂರವಾಗಿರುವದು, ಮಕ್ಕಳು ಸ್ವಂತ ಪ್ರತಿಭೆಯಿಂದ ತಮ್ಮ ತಮ್ಮ ಕ್ಷೇತ್ರಗಳಲ್ಲಿ ಮೇಲ್ಮೆಯನ್ನು ಸಾಧಿಸಿ ತಂದೆತಾಯಿಗಳಿಗೆ ಆತಂಕವುಂಟಾಗದಂತೆ ಪ್ರೀತಿಯಿಂದ ನೋಡಿಕೊಂಡಿರುವುದು.

**ನಾನು : ಕಣವಿಯವರೇ, ನನ್ನ ಸಾಕಷ್ಟು ಪ್ರಶ್ನೆಗಳಿಗೆ ನೀವು ಉತ್ತರಿಸಿದ್ದಾಯ್ತು. ಕೊನೆಯಲ್ಲಿ ಮುಕ್ತವಾಗಿಯೇ ಹೇಳುತ್ತಿದ್ದೇನೆ-ನಿಮ್ಮ ನಿರಾಡಂಬರ ಬದುಕು-ಬರಹದಿಂದಾಗಿ, ಹಸನ್ಮುಖಿ ಸೌಜನ್ಯತೆಯ ಆಪ್ತತೆಯಿಂದಾಗಿ, ನಾನು ವೈಯಕ್ತಿಕವಾಗಿ ನಿಮ್ಮ ಆಕರ್ಷಣೆಗೆ ಒಳಗಾದವನು. ವೊನ್ನೆ ದೂರವಾಣಿಯಲ್ಲಿ ನನ್ನೊಂದಿಗೆ ಮಾತಾಡುತ್ತ, 'ಅದೆಷ್ಟೋ ಶಿಷ್ಯಸ್ನೇಹಿತರಲ್ಲಿ ನೀವೊಬ್ಬರೇ ಇನ್ನೂ ನನ್ನ ನಿಕಟ ಸಂಪರ್ಕದಲ್ಲಿದ್ದು ಅತ್ಯಂತ ಆತ್ಮೀಯರಾಗಿದ್ದೀರಿ' ಎಂದು ಮನಬಿಚ್ಚಿ ಹೇಳಿದ್ದಕ್ಕೆ ತುಂಬಾ ಥ್ಯಾಂಕ್ಸ್.**

**ಕಣವಿ :** ನಿಮ್ಮ ಆತ್ಮೀಯತೆಗೆ ಧನ್ಯವಾದಗಳು. ಒಳ್ಳೆಯ ಕಾವ್ಯ ಒಳ್ಳೆಯ ಸ್ನೇಹಿತರನ್ನೂ ಒದಗಿಸುತ್ತದೆ.

'ಕರುನಾಡದೀಪ' ದೀಪಾವಳಿ ವಿಶೇಷಾಂಕ-೨೦೦೭

*

# ಚೆಂಬೆಳಕಿನ ಕವಿಗೆ ಕಾವ್ಯವೇ ಜೀವನ ಧರ್ಮ

● ವೀಣಾ ಕುಲಕರ್ಣಿ

ಸುಮಾರು ಆರು ದಶಕಗಳಿಂದ ಕಾವ್ಯಕನ್ನಿಕೆಯೊಂದಿಗೆ ಪಯಣಿಸಿದ ಕನ್ನಡದ ಮಾರ್ದವ ಕವಿ ಚೆನ್ನವೀರ ಕಣವಿಯವರು ಕನ್ನಡ ಕಾವ್ಯ ಪರಂಪರೆಯಲ್ಲಿ ನವೋದಯದಿಂದ ಸಾಗಿ ಬಂದ ದಾರಿ ವಿಶಿಷ್ಟವಾದದ್ದು. ಎಂಬತ್ತರ ತುಂಬು ಜೀವನವನ್ನು ಬದುಕಿದ ಚೆಂಬಳಕಿನ ಕವಿಯೊಂದಿಗೊಂದು ಆಪ್ತವಾದ ಕಾಲಕ್ಷೇಪ.

**ನೀವು ಕಾವ್ಯವನ್ನು ಒಲಿಸಿಕೊಂಡಿದ್ದರ ಬಗ್ಗೆ ಹೇಳಿ.**

ನಾನು ಹಳ್ಳಿಯೊಂದರಲ್ಲಿ ಹುಟ್ಟಿ ಬೆಳೆದವನು. ಅದು ಬಯಲು ಸೀಮೆಯೆಂದರೂ ಹೊಲ, ತೋಟ, ಬಾವಿ, ಕೆರೆ, ಗುಡ್ಡ-ಮರಗಿಡಗಳಿಂದ, ಜೋಳ, ಗೋಧಿ, ಹತ್ತಿ ಮುಂತಾದ ಬೆಳೆಗಳಿಂದ, ಶ್ರಮಜೀವಿಗಳಾದ ಒಕ್ಕಲು ಮಕ್ಕಳಿಂದ ಚೆಂದವಾಗಿತ್ತು. ವಿವಿಧ ಸಂದರ್ಭಗಳಲ್ಲಿ ನಿತ್ಯವೂ ಅವರು ಹಾಡುತ್ತಿದ್ದ ಜನಪದ ಗೀತೆಗಳು ನನ್ನ ಕಿವಿಯನ್ನು ತುಂಬುತ್ತಿದ್ದವು. ಪ್ರಾಥಮಿಕ ಶಾಲಾ ಶಿಕ್ಷಕರಾಗಿದ್ದ ನನ್ನ ತಂದೆ, ನಿಜಗುಣರ, ಬಾಲಲೀಲಾ ಮಹಾಂತ ಶಿವಯೋಗಿ ಮೊದಲಾದವರ ಅನುಭಾವ ಪದಗಳನ್ನು ವಿರಾಮವಿದ್ದಾಗ ಮನೆಯಲ್ಲಿ ತಮ್ಮದೇ ಧಾಟಿಯಲ್ಲಿ ಹಾಡಿಕೊಳ್ಳುತ್ತಿದ್ದರು. ನಮ್ಮ ಶಾಲಾ ಪಠ್ಯಪುಸ್ತಕದಲ್ಲಿ ಸೊಗಸಾದ ಪದ್ಯಗಳಿರುತ್ತಿದ್ದವು- 'ಏಳು ಮಾತಿನ ಗಿಣಿಯೆ, ಏಳು ಮುದ್ದಿನ ಕಣಿಯೆ ಏಳಯ್ಯಾ ಬೆಳಗಾಯಿತು', 'ನಾವು ಮೂರು ಮಂದಿ ದಾರಿಕಾರರಿರುವೆವು, ಸಾವಕಾಶ ಭೂಮಿಯನ್ನು ಸುತ್ತುತಿರುವೆವು', 'ಒಂದು ಜೇಡವು ತನ್ನ ಬೀಡನ್ನು ಕಟ್ಟಲೋಸುಗ ಗೆಳೆಯನೆ'- ಇವೇ ಮೊದಲಾದವು ಇಂದಿಗೂ ನನ್ನ ನೆನಪಿನಲ್ಲಿವೆ. ಸೋಮೇಶ್ವರ ಶತಕದ ಎಷ್ಟೋ ಪದ್ಯಗಳು ನನಗೆ ನಾಲ್ಕನೆಯ ಇಯತ್ತೆ ಮುಗಿಯುವುದರೊಳಗೇ ಬಾಯಿಪಾಠ ಆಗಿಬಿಟ್ಟಿದ್ದವು. ಇವೆಲ್ಲವೂ ನನ್ನ ಮನಸ್ಸನ್ನು ಕಾವ್ಯದ ಕಡೆಗೆ ಒಲಿಸಿದವು.

ಹಾಯಸ್ಕೂಲ್ ಶಿಕ್ಷಣಕ್ಕಾಗಿ ಧಾರವಾಡಕ್ಕೆ ಬಂದ ಮೇಲಂತೂ ಕವಿಗಾಳಿ ಸವಿಗಾಳಿ

ನನ್ನನ್ನು ಮುತ್ತಿಕೊಂಡಿತು. ಸಭೆ ಸಮಾರಂಭಗಳಲ್ಲಿ ಬೇಂದ್ರೆ, ಕುವೆಂಪು, ಬೆಟಗೇರಿ ಮುಂತಾದವರ ಕವಿತೆಗಳ ಹಾಡುಗಾರಿಕೆ-ಕಾವ್ಯ ಗಾಯನ-ಇದ್ದೇ ಇರುತ್ತಿದ್ದವು. ಸ್ವತಃ ಬೇಂದ್ರೆಯವರ ಕಾವ್ಯವಾಚನ ಕೇಳಿ ರೋಮಾಂಚನಗೊಳ್ಳುತ್ತಿದ್ದೆ.

**ಐದು ದಶಕಗಳಿಂದಲೂ ನೀವು ಕಾವ್ಯಯಾತ್ರೆಯಲ್ಲಿ ಪಯಣಿಸಿದ್ದೀರಿ. ಅದರ ಅನುಭವದ ಬಗ್ಗೆ ಒಂದಿಷ್ಟು....**

ನನ್ನ ಕಾವ್ಯಯಾನದ ಪಯಣ ಸಂತೋಷದಾಯಕವಾದದ್ದೇಕೆಂದು ಹೇಳಬಹುದು. ಕರ್ನಾಟಕ ಕಾಲೇಜನ್ನು ಪ್ರವೇಶಿಸಿದ ಒಂದೆರಡು ವರ್ಷಗಳಲ್ಲಿ 'ಜೀವನ', 'ಜಯಂತಿ', 'ಜಯಕರ್ನಾಟಕ' ಮೊದಲಾದ ಪತ್ರಿಕೆಗಳಲ್ಲಿ ನನ್ನ ಕವಿತೆಗಳು ಪ್ರಕಟವಾದಂತೆ ನನ್ನ ಆತ್ಮವಿಶ್ವಾಸವೂ ಹೆಚ್ಚಿತು. ನಾನು ಬಿ.ಎ. ವಿದ್ಯಾರ್ಥಿಯಾಗಿದ್ದಾಗಲೇ 'ಕಾವ್ಯಾಕ್ಷಿ' ಪ್ರಥಮ ಸಂಕಲನ ಹಾಗೂ 'ಭಾವಜೀವಿ', 'ಖಂಡ ಕಾವ್ಯ' ಪ್ರಕಟವಾದದ್ದಲ್ಲದೆ ಬೇಂದ್ರೆ ಹಾಗೂ ಗೋಕಾಕರ ಮುನ್ನುಡಿಗಳು ತುಂಬ ಪ್ರೋತ್ಸಾಹದಾಯಕವಾಗಿದ್ದವು. ಎಂ.ಎ.ಪಾಸಾದ ವರ್ಷ 1953ರಲ್ಲಿ ಬೆಳಕು ಕಂಡ 'ಆಕಾಶಬುಟ್ಟಿ' ಕವನಸಂಗ್ರಹ ಆಗಿನ ಮುಂಬೈ ರಾಜ್ಯದ ಬಹುಮಾನವನ್ನು ತಂದುಕೊಟ್ಟಿತು. ನಾಡಿನ ಅನೇಕ ಓದುಗರ ಹಾಗೂ ಕಾವ್ಯಾಸಕ್ತರ ಸ್ನೇಹ ಭಾಗ್ಯವನ್ನು ಕಾವ್ಯದ ಮೂಲಕ ನಾನು ಪಡೆಯುವಂತಾಯಿತು. ಇದು ನನ್ನ ಕಾವ್ಯಯಾತ್ರೆಯ ಮೊದಲ ಹಾಗೂ ಮಹತ್ವದ ಘಟ್ಟವೆನ್ನಬಹುದು.

ಅಲ್ಲಿಂದ ಇದುವರೆಗೆ ಕಳೆದ ವರ್ಷ ಪ್ರಕಟವಾದ 'ನೀವೇ ಪ್ರಮಾಣು' ಸಂಗ್ರಹವನ್ನು ಹಿಡಿದು ಒಟ್ಟು ಹದಿನಾರು ಕವನಸಂಗ್ರಹಗಳು ಪ್ರಕಟವಾಗಿದ್ದು 'ಕಣವಿ ಸಮಗ್ರ ಕಾವ್ಯ' ಮೂರು ಆವೃತ್ತಿಗಳನ್ನು ಕಂಡಿದೆ. ಸುಗಮ ಸಂಗೀತ ಗಾಯಕರ ಅಪೇಕ್ಷೆಯ ಮೇರೆಗೆ ಆಯ್ದ ಗೇಯ ಕವನಗಳ ಸಂಗ್ರಹ 'ಹೂವು ಹೊರಳುವುವು ಸೂರ್ಯನ ಕಡೆಗೆ' ಪ್ರಕಟವಾಗಿ ಅದೂ ನಾಲ್ಕನೆಯ ಆವೃತ್ತಿಯನ್ನು ಕಂಡಿದೆ. ನನ್ನ ಜನಪ್ರಿಯ ಭಾವಗೀತೆಗಳಿಗೆ 'ಮಲ್ಲಿಗೆ ದಂಡೆ', 'ಒಂದು ಮುಂಜಾವು'ಹಾಗೂ 'ಮಧುಕೋಗಿಲೆ'ಧ್ವನಿಸುರುಳಿಗಳು ಎಡೆಗೊಟ್ಟಿವೆ. ಕಾವ್ಯದ ಓದುಗರ ಸಂಖ್ಯೆ ಸಾಮಾನ್ಯವಾಗಿ ಕಡಿಮೆಯೆಂದು ಹೇಳಬಹುದಾದರೂ ಕೇಳುಗರ ಕಾವ್ಯಪ್ರೀತಿಯನ್ನು ಕಡೆಗಣಿಸುವಂತಿಲ್ಲ. ಯಾವುದೇ ಭಾಷಣದ ಕಾರ್ಯಕ್ರಮಕ್ಕೆ ಹೋದಾಗಲೂ ಸಭಿಕರು ನನ್ನಿಂದ ಕಾವ್ಯವಾಚನ ಮಾಡಿಸಿ ಸಂತೋಷಪಟ್ಟಿರುವುದನ್ನು ಕಂಡು ಪುಲಕಿತನಾಗಿದ್ದೇನೆ.

'ಚೆಂಬಳಕು', 'ಮುಗಿಯದ ಹಾಡು', 'ಬೆಳ್ಳಿ ತೇರಿನ ದಾರಿ' ಹಾಗೂ 'ಕಣವಿಯವರ ಕವಿತೆ: ಹೊಸ ಓದು' ಅಭಿನಂದನ ಗ್ರಂಥಗಳ ಮೂಲಕ ಕಾವ್ಯಪ್ರೇಮಿಗಳಾದ

ಹಿರಿಕಿರಿಯ ವಿಮರ್ಶಕರು ನನ್ನ ಪಯಣದ ಹಾದಿಯಲ್ಲಿ ತುಂಬ ಪ್ರೀತಿ ಹಾಗೂ ಅಭಿಮಾನದಿಂದ ಮೈಲುಗಲ್ಲುಗಳನ್ನು ನಿಲ್ಲಿಸಿ ಶುಭ ಕೋರಿದ್ದನ್ನು ನಾನು ಮರೆಯುವಂತಿಲ್ಲ.

ನವೋದಯದ ಉತ್ಕರ್ಷ ಕಾಲದಲ್ಲಿಯೇ ನಾನು ಕಾವ್ಯ ರಚನೆಗೆ ತೊಡಗಿದ್ದರೂ ಆಮೇಲೆ ನನ್ನ ಆಸಕ್ತಿಗಳು ವಿಸ್ತಾರ ಗೊಂಡದ್ದುಂಟು. ಜೀವನದ ವಾಸ್ತವದ ಅರಿವು ರಮ್ಯತೆಯನ್ನು ಭೇದಿಸತೊಡಗಿದ್ದರೂ ಆದರ್ಶಪ್ರಿಯತೆಗೆ ಭಂಗವುಂಟಾಗಲಿಲ್ಲ. ನಾನು ವಿದ್ಯಾರ್ಥಿಯಾಗಿದ್ದಾಗಲೇ ಪ್ರಗತಿಶೀಲ ಸಾಹಿತ್ಯದ ತೆರೆಯೊಂದು ರಭಸದಿಂದ ಹಾಯ್ದು ಹೋದದ್ದನ್ನು ಆಸ್ಥೆಯಿಂದ ಗಮನಿಸಿದ್ದೆ. (ಬಸವರಾಜ ಕಟ್ಟೀಮನಿ ನನ್ನ ಆತ್ಮೀಯ ಸ್ನೇಹಿತರಾಗಿದ್ದರು). ಸತ್ಯದೊಡನೆ ಸಂಘರ್ಷಕ್ಕೆ ತೊಡಗಿದಾಗಲೂ ನವೋದಯದೊಡನೆ ನನ್ನ ಸಂಬಂಧ ಆತ್ಮೀಯವಾಗಿಯೆ ಇತ್ತು. ನನ್ನದು ಗುಣಗ್ರಾಹಕ ದೃಷ್ಟಿ. ಎಲ್ಲ ಸಾಹಿತ್ಯಕ ಚಳವಳಿಗಳಿಂದ ದೂರವಿದ್ದರೂ ಅವುಗಳ ಒಳ್ಳೆಯ ಅಂಶಗಳನ್ನು ನನ್ನ ಕಾವ್ಯದ ಮೂಲದ್ರವ್ಯಕ್ಕೆ ಪೋಷಕವಾಗುವಂತೆ ಸ್ವೀಕರಿಸುತ್ತ ಬಂದಿದ್ದೇನೆ.

**ನಿಮ್ಮ ಹಾಗೂ ಬೇಂದ್ರೆಯವರ ಒಡನಾಟದ ಬಗ್ಗೆ ಕೆಲವು ಮಾತುಗಳು...**

ಹಳ್ಳಿಯ ಜಾನಪದ ಸಂಸ್ಕಾರದೊಂದಿಗೆ ಬಂದ ನನಗೆ ಬೇಂದ್ರೆ ಪರಕೀಯರೆನಿಸಲಿಲ್ಲ. ಸೊಲ್ಲಾಪುರದಿಂದ ನಿವೃತ್ತರಾಗಿ ಅವರು ಧಾರವಾಡಕ್ಕೆ ಮರಳಿ ಬಂದ ಮೇಲೆ ಸಾಧನಕೇರಿ ಹಸಿರು ಮುರಿಯ ತೊಡಗಿತು. ಹಾಗೆಯೇ ಅವರೊಡನೆ ನನ್ನ ಒಡನಾಟವೂ ಹೆಚ್ಚುತ್ತಾ ಬಂದಿತು. ಅವರ ಷಷ್ಟ್ಯಬ್ದಿ ಸಮಾರಂಭದ ಕಾರ್ಯದರ್ಶಿಯಾಗಿ ಪಾಲ್ಗೊಂಡ ಸಂದರ್ಭದಲ್ಲಿಯೇ ನನ್ನ 'ದೀಪಧಾರಿ' ಕವನ ಸಂಗ್ರಹವನ್ನು ಬೇಂದ್ರೆಯವರಿಗೆ ಅರ್ಪಣೆ ಮಾಡಿದ್ದೆ. 1965ರಲ್ಲಿ ಪ್ರಕಟವಾದ ನನ್ನ ಏಳನೆಯ ಕವನಸಂಗ್ರಹ 'ನೆಲ-ಮುಗಿಲು'ಗೆ ಬರೆದ ವಿಸ್ತಾರವಾದ ಮುನ್ನುಡಿಯಲ್ಲಿ 'ವಿನಯ ಹಳಸುವ ಬದುಕಲ್ಲ, ವಿಶಿಷ್ಟಕ್ಕೆ ತೊಡಕಲ್ಲ, ಇದು ಧಾರವಾಡ ತತ್ವ' ಎಂದು ಹೇಳುತ್ತ, 'ಬೇಂದ್ರೇನ ಅಂಬಿಕಾತನಯನಂತೆ ಕಣವಿಯ ಚೆನ್ನವೀರನಿಗೂ ಇವೇ ಇಂಥವೇ ಮಹಾಪ್ರೇರಣೆಗಳು' ಎಂಬ ಮಾತನ್ನೂ ಅಲ್ಲಿ ವ್ಯಕ್ತಪಡಿಸಿದ್ದು ನನ್ನ ನಮ್ರತೆಯನ್ನು ಇನ್ನಷ್ಟು ಹೆಚ್ಚಿಸಿತು.

ಬೇಂದ್ರೆ ನೂರಕ್ಕೆ ನೂರರಷ್ಟು ಸಂಘಜೀವಿಗಳು. ಅವರಿಗೆ ಜನ ಬೇಕು, 'ಏಕಾಂತತೆ ಗದ್ದಲದಲ್ಲಿಯೂ ಸಾಧ್ಯ' ಎನ್ನುತ್ತಾರೆ. ಕೆಲವು ಸಂದರ್ಭಗಳಲ್ಲಿ ಅವರ ನಿಷ್ಠುರ ನಡವಳಿಕೆ, ಸ್ಪಷ್ಟ ಮಾತು ತಪ್ಪು ತಿಳುವಳಿಕೆಗೆ ಆಸ್ಪದ ವಿತ್ತದ್ದುಂಟು. ಆದರೆ ಸರಿಯಾದ ದಾರಿಯನ್ನು ಅನುಸರಿಸಿದವರ ಜೊತೆಗೆ ಉದಾರವಾಗಿಯೇ ನಡೆದುಕೊಂಡದ್ದನ್ನು

ನಾನು ಕಂಡಿದ್ದೇನೆ. ಮನಸ್ಸಿನಲ್ಲಿ ಒಳಗೊಂದು, ಹೊರಗೊಂದು ಇಟ್ಟುಕೊಂಡು ಬಂದವರನ್ನು ಚೆನ್ನಾಗಿ ತಿರುವಿ ಬಿಡುತ್ತಿದ್ದರು. ತಮ್ಮ ಕಾವ್ಯದ ಬಗ್ಗೆ ಬಂದಿರುವ ವಿಮರ್ಶೆಗಳನ್ನು, ಅವರಿವರು ಆಡುವ ಮಾತುಗಳನ್ನು ಅವರು ಗಮನಿಸಿರುತ್ತಿದ್ದರು. ಆ ಬಗ್ಗೆ 'ದಿವ್ಯನಿರ್ಲಕ್ಷತೆ'ಯೇನೂ ಅವರಿಗಿರಲಿಲ್ಲ. ವಿಮರ್ಶಕರೆಂಬುವರ ಟೀಕೆಗಿಂತ ರಸಿಕರ ವಿಮರ್ಶೆ ತಮಗೆ ಪ್ರೇರಣೆ, ಉದ್ದೀಪನಗಳನ್ನು ಕೊಟ್ಟಿದೆಯೆಂದು ಅವರೇ ಒಂದೆಡೆ ಹೇಳಿದ್ದಾರೆ.

ಮೈಸೂರು ವಿಶ್ವವಿದ್ಯಾಲಯ ಆಧುನಿಕ ಕನ್ನಡ ಕಾವ್ಯ 'ಸುವರ್ಣ ಸಂಪುಟ'ಕ್ಕೆ ಬೇಂದ್ರೆಯವರು ತಮ್ಮ ಕವಿತೆಗಳನ್ನು ಸೇರಿಸಿಕೊಳ್ಳುವ ಕೋರಿಕೆಗೆ ಉತ್ತರವನ್ನೇ ಕೊಟ್ಟಿರಲಿಲ್ಲ. ವಿಶ್ವವಿದ್ಯಾಲಯ ಆ ಜವಾಬ್ದಾರಿಯನ್ನು ನನಗೆ ವಹಿಸಿದಾಗ, ನಾನು ಅವರ ಹನ್ನೆರಡು ಪ್ರಾತಿನಿಧಿಕ ಕವಿತೆಗಳನ್ನು ಆಯ್ಕೆ ಮಾಡಿ ಬೇಂದ್ರೆಯವರ ಅನುಮತಿ ಪಡೆಯಲು ಸ್ವಲ್ಪ ಅಳುಕಿನಿಂದಲೇ ಅವರ ಮನೆಗೆ ಹೋದೆ. 'ನೀನು ಆ ಸಂಪಾದಕ ಸಮಿತಿಯೊಳಗ ಅದಿಯೇನು? ನಿನ್ನ ಆಯ್ಕೆ ಸರಿಯಾಗಿದೆ, ಆಗಬಹುದು' ಎಂದು ಹಿಂದು-ಮುಂದು ನೋಡದೆ ಒಪ್ಪಿಗೆ ಕೊಟ್ಟರು. ನನಗೆ ತಲೆಯ ಮೇಲಿನ ದೊಡ್ಡ ಭಾರ ಇಳಿಸಿದಂತಾಯಿತು. ('ಮೈಸೂರಿನ ಜನ'ದ ಬಗ್ಗೆ ಅವರಿಗೆ ಒಳಗೊಳಗೇ ಒಂದಿಷ್ಟು ಅಸಮಾಧಾನವಿದ್ದಿರಬೇಕು. ಕಾರಂತರಿಗೂ ಇತ್ತೆಂದು ಕೇಳಿದ್ದೇನೆ) ಪ್ರತಿಭೆಗೆ ಬೇಂದ್ರೆಯವರಿಂದ ಎಲ್ಲಿಲ್ಲದ ಮನ್ನಣೆ ಹಾಗೂ ಗೌರವ. ನಾನು ಹಿಂದೊಮ್ಮೆ ಅವರ ಮನೆಗೆ ಹೋದಾಗ ಅವರ ಮೇಜಿನ ಮೇಲೆ ಕುವೆಂಪು ಅವರ 'ಬೆರಳ್‌ಗೆ ಕೊರಳ್' ನಾಟಕವಿತ್ತು. ಅದನ್ನವರು ಮೆಚ್ಚಿಕೊಂಡದ್ದು ಅವರ ಮಾತಿನ ಮೇಲಿಂದ ನನಗೆ ತಿಳಿದುಬಂತು. ಯಾಕೆಂದರೆ ಕಾವ್ಯದಂತೆ ನಾಟಕವೂ ಅವರ ಬದುಕಿನ ಅವಿಭಾಜ್ಯ ಅಂಗವಾಗಿತ್ತು. (ಇತ್ತೀಚೆಗೆ ಅವರ 'ಸಮಗ್ರ ನಾಟಕ ಸಂಪುಟ'ವಲ್ಲದೆ, ಇದುವರೆಗೆ ಅಲಿಖಿತವೆಂದು ಭಾವಿಸಿದ್ದ ವೃತ್ತಿರಂಗಭೂಮಿಗಾಗಿ ಬರೆದ 'ತಲೆದಂಡ' ನಾಟಕವೂ ಪ್ರಕಟವಾಗಿರುವುದು ಗಮನಾರ್ಹ).

ಕುವೆಂಪು 'ಬೆರಳ್‌ಗೆ ಕೊರಳ್'ನಾಟಕವನ್ನು 'ಶ್ರೀ' ಅವರಿಗೆ ಅರ್ಪಿಸಿ ಕೆಳಗೆ ಒಂದು ಕವಿತೆಯನ್ನೇ ಬರೆದಿದ್ದಾರೆ. 'ಶ್ರೀ' ಮತ್ತು ಕುವೆಂಪುವಿಗೆ ಸಂಬಂಧಪಟ್ಟಂತೆ ಆ ಅರ್ಪಣೆಯನ್ನು ಬೇಂದ್ರೆ ಬೇರೊಂದು ರೀತಿಯಲ್ಲಿ ಹೀಗೆ ಅರ್ಥೈಸಿದರು: ಬೆರಳು ಹಿಡಿದು ನಡೆಸಿದ ಗುರುವಿಗೆ ತನ್ನ ಕೊರಳು ಅಂದರೆ ಕಂಠ, ಧ್ವನಿ(ಕಾವ್ಯ)ಯ ಅರ್ಪಣೆ ಎಂಬುದಾಗಿ. ಹೀಗೆಯೇ ಯಾರಿಗೂ ಹೊಳೆಯದ್ದು ಬೇಂದ್ರೆಯುವರಿಗೆ ಹೊಳೆಯುತ್ತಿದ್ದುದು ಅವರ ಪ್ರತಿಭೆಯ ವಿಶೇಷ ಲಕ್ಷಣ.

1981 ಮೇ ತಿಂಗಳು. 'ಚೆಂಬೆಳಕು' ಅಭಿನಂದನ ಗ್ರಂಥದ ಬಿಡುಗಡೆಯ

ಸಂದರ್ಭದಲ್ಲಿ ಜ್ವರದಿಂದ ಅಸ್ವಸ್ಥರಾಗಿದ್ದೂ ಸಮಿತಿಯ ಕೋರಿಕೆಯಂತೆ ಸಭೆಗೆ ಬಂದು ನನ್ನ ಬಗ್ಗೆ ಆಶೀರ್ವಾದದ ತರ ಮಾತನಾಡುತ್ತ ಹೇಳಿದ್ದನ್ನು ನಾನು ಮರೆಯುವಂತಿಲ್ಲ: "ಒಬ್ಬರೊಬ್ಬರೊಳಗ ಒಡನಾಟ ಇರಬೇಕು. ದೇಶದೊಳಗೆ ಒಳ್ಳೇ ಕವಿ ಹುಟ್ಟಿದರಷ್ಟೇ ಸಾಲದು, ಅವನು ಒಳ್ಳೇವ ಅನ್ನಲಿಕ್ಕೆ ಒಬ್ಬ ಒಳ್ಳೇ ವಿಮರ್ಶಕ ಹುಟ್ಟಬೇಕು. ಕವಿ-ಸಹೃದಯರ ಒಡನಾಟವೇ ಸರಸ್ವತಿ ತತ್ವ. ಪರಸ್ಪರ ಅನಸೂಯಾಭಾವದಿಂದ ಧಾರವಾಡ ಬೆಳೀಲಿ". ಇದೇ ಅವರ ಕೊನೆಯ ಸಾರ್ವಜನಿಕ ಭಾಷಣವಾಗುವುದೆಂದು ಯಾರಿಗೂ ಅನಿಸಿರಲಿಲ್ಲ. ಅದೇ ವರ್ಷ ಅಕ್ಟೋಬರ ತಿಂಗಳಲ್ಲಿ ಅವರು ನಮ್ಮನ್ನಗಲಿದರು.

**ನಿಮ್ಮ ಪ್ರೀತಿಯ ಸಾನೆಟ್ ಕುರಿತು....**

ಭಾವಗೀತೆಯ ಜೊತೆಗೆ ನನ್ನನ್ನು ಹೆಚ್ಚು ಆಕರ್ಷಿಸಿದ ಕಾವ್ಯ ಪ್ರಕಾರವೆಂದರೆ ಸಾನೆಟ್ ಅಥವಾ ಸುನೀತ. ನನ್ನ ಪ್ರಥಮ ಸಂಕಲನ 'ಕಾವ್ಯಾಕ್ಷಿ'ಯಲ್ಲಿಯೇ ಹತ್ತು ಸುನೀತಗಳಿವೆ. ಈ ದಿಸೆಯಲ್ಲಿ ಗೋವಿಂದ ಪೈ, ಮಾಸ್ತಿ, ಕುವೆಂಪು, ಗೋಕಾಕ, ಬೇಂದ್ರೆ, ಪುತಿನ ಅವರ ಪ್ರಯೋಗಗಳನ್ನು ಆಸ್ಥೆಯಿಂದ ಓದಿದ್ದೆ. ಇಂಗ್ಲೀಷ್ ಸಾಹಿತ್ಯದಲ್ಲಂತೂ ಸಾನೆಟ್ ಬರೆಯದ ಕವಿಯೇ ಇಲ್ಲವೆಂದು ಹೇಳಬಹುದು. ಅವರಲ್ಲಿ ವರ್ಡ್ಸ್‌ವರ್ಥ್, ಮಿಲ್ಟನ್, ಷೇಕ್ಸಪಿಯರ್ ನನ್ನ ಮನೋಧರ್ಮಕ್ಕೆ ಹತ್ತಿರವೆನಿಸಿದರು. ಬೇಂದ್ರೆಯವರ 'ಉಯ್ಯಾಲೆ' ಅರ್ಥಪೂರ್ಣವೆನಿಸಿತು. ಸಾನೆಟ್‌ನ ಕಟ್ಟುನಿಟ್ಟುಗಳನ್ನು ಪಾಲಿಸಿಯೂ ಕುವೆಂಪು 'ಕೃತ್ತಿಕೆ'ಯಲ್ಲಿ ಅದ್ಭುತ ರಚನೆಗಳಿವೆ. ಹೀಗೆ ಕನ್ನಡದಲ್ಲಿ ಈ ಕಾವ್ಯಪ್ರಕಾರ ರೂಪವೈವಿಧ್ಯ ಹಾಗೂ ವಸ್ತುವೈವಿಧ್ಯತೆಯಿಂದ ಕಂಗೊಳಿಸಿದೆ. ಮಿತವಾದ ಚೌಕಟ್ಟಿನಲ್ಲಿ ಹಿತವಾದ ಚಿತ್ರಕಶಕ್ತಿಯಿಂದ ಭಾವ-ವಿಚಾರ ಸಮ್ಮಿಲನಗೊಂಡು, ಭಾವಸಾರ-ಚಿಂತನೆಗಳ ನನ್ನ ಒಲವಿಗೆ ಇದು ಅನುರೂಪವೆನಿಸಿದ್ದ ರಿಂದ ಬರೆಬರೆಯುತ್ತಲೇ ಹೊಸತನವನ್ನೂ ಸಾರವತ್ತತೆಯನ್ನೂ ಮೈಗೂಡಿಸಿಕೊಂಡಿತು. ಈ ಕಾಲದಲ್ಲಿ ಇದನ್ನೊಂದು ಆಹ್ವಾನವಾಗಿಯೇ ನಾನು ಸ್ವೀಕರಿಸಿದೆ. ವ್ಯಕ್ತಿಚಿತ್ರ, ನಿಸರ್ಗಸ್ಪಂದನ, ಜಿಜ್ಞಾಸೆ-ಹೀಗೆ ನನ್ನ ಆಸಕ್ತಿಗನುಗುಣವಾಗಿ ವೈವಿಧ್ಯಕ್ಕೂ ಇಲ್ಲಿ ಎಡೆ ದೊರೆಯಿತು. ಕಾವ್ಯದ ಕಸುಬುಗಾರಿಕೆಗೆ ಸೂಕ್ಷ್ಮ ಕೆತ್ತನೆಯ ಕೌಶಲ್ಯಕ್ಕೆ ಸಾನೆಟ್‌ನಲ್ಲಿ ಹೆಚ್ಚಿನ ಅವಕಾಶವಿರುವುದನ್ನು ನಾನು ಕಂಡುಕೊಂಡೆ. ಡಾ. ಶಾಂತಿನಾಥ ದೇಸಾಯಿ, ಡಾ. ಜಿ.ಎಸ್. ಶಿವರುದ್ರಪ್ಪವರನ್ನೊಳಗೊಂಡು ಹಲವಾರು ವಿಮರ್ಶಕರೂ, ಸಹೃದಯ ಓದುಗರೂ ಇವುಗಳನ್ನು ಮೆಚ್ಚುತ್ತ ಬಂದಿರುವುದು ನನ್ನ ಧನ್ಯತೆಯನ್ನು ಹೆಚ್ಚಿಸಿದೆ.

**ಕಾವ್ಯದಲ್ಲಿ ಸಮನ್ವಯತೆಯನ್ನು ಸಾಧಿಸಿದ ಬಗ್ಗೆ....**

'ಸಮನ್ವಯ' ಪದ ಓದುಗರನ್ನು ಗೊಂದಲಕ್ಕೀಡು ಮಾಡಿದೆಯೆಂದು ತೋರುತ್ತದೆ. ನವ್ಯ ಕವಿಗಳು ಈ ಒಂದು ಬ್ರ್ಯಾಂಡ್ ಮಾಡುವಾಗ ಆ ಮಾತಿನ ಹಿಂದಿದ್ದ ಧೋರಣೆ ಸಮಂಜಸವಾದದ್ದಲ್ಲ. ಹಾಗೆ ನೋಡಿದರೆ ಭಾವ-ಬುದ್ಧಿಯ ಸಮನ್ವಯವಿಲ್ಲದಿದ್ದರೆ ಕವಿತೆ ಹೇಗಾಗುತ್ತದೆ? ಪಂಪನ ಬಗ್ಗೆ ಮಾತನಾಡುವಾಗ ಮಾರ್ಗ–ದೇಶಿ ಸಮನ್ವಯ ಎನ್ನುತ್ತೇವಲ್ಲ. ಆದರೆ ನವ್ಯರು 'ಸಮನ್ವಯ' ಅನ್ನುವ ಹೊತ್ತಿನಲ್ಲಿ 'ಹೆಚ್ಚು ಗಣಿಸಬೇಕಾದಂಥ ಕವಿಗಳಲ್ಲ'ಅನ್ನೋ ಅರ್ಥ ಇತ್ತು ಅಂತ ಕಾಣುತ್ತದೆ. ಎಲ್ಲ ಸಮಕಾಲೀನ ಚಳುವಳಿಗಳಿಗೂ ನಾನು ಪ್ರತಿಸ್ಪಂದಿಸುತ್ತ ಬಂದಿದ್ದರೂ ಅವುಗಳಿಗೆ ನನ್ನನ್ನು ಒಪ್ಪಿಸಿಕೊಂಡಿಲ್ಲ. ನನ್ನಕಾವ್ಯ ಶಕ್ತಿಯನ್ನು ಸ್ವವಿಮರ್ಶೆಯಿಂದ ಗುರುತಿಸಿ ಅದರ ಬೆಳವಣಿಗೆಗೆ ಅನುಕೂಲವಾಗಬಲ್ಲ ಅಂಶಗಳನ್ನು ಮಾತ್ರ ನಾನು ಕಾವ್ಯಕ್ಕೆ ಪೋಷಕವಾಗುವಂತೆ ಅಳವಡಿಸಿಕೊಳ್ಳುತ್ತ ಬಂದಿದ್ದೇನೆ. ಸ್ವಂತಿಕೆಗೆ ಧಕ್ಕೆಯಾಗದಂತೆ ಪ್ರಭಾವಗಳನ್ನು ನನ್ನ ಕಾವ್ಯ ಅರಗಿಸಿಕೊಂಡಿದೆ. ಯು.ಆರ್. ಅನಂತಮೂರ್ತಿಯವರೇ ಈಚೆಗೆ ಒಂದೆಡೆ ಬರೆದಿದ್ದಾರೆ: "ಸಮನ್ವಯ ಕವಿಗಳೆಂದು ಜಿ.ಎಸ್.ಎಸ್. ಹಾಗೂ ಕಣವಿಯವರನ್ನು ಕರೆದಿದ್ದೇವಲ್ಲ ಅದು ದೊಡ್ಡ ತಪ್ಪು... ಒಬ್ಬ ಒಳ್ಳೆಯ ಸಾಹಿತಿ ಯಾವ ಕಾಲದಲ್ಲೇ ಇರಲಿ ಅವನು ಬೇರೆ ಬೇರೆ ರೀತಿಯ ಸಮನ್ವಯ ಮಾಡಿಯೇ ಇರುತ್ತಾನೆ. ಅದು ಎಲ್ಲ ಕಾಲಕ್ಕೂ ಇರಬೇಕಾದ ಗುಣ".

**ಸುಮಾರು ಎಂಟು ದಶಕಗಳ ಬದುಕಿನ ಒಟ್ಟು ಅನುಭವ ಹೇಳಿ....**

ಎಂಟು ದಶಕಗಳ ಬದುಕಿನ ಒಟ್ಟು ಅನುಭವವನ್ನು ಹೇಗೆ ಹೇಳುವುದು? ಕಾಲಕಾಲಕ್ಕೆ ಅದು ನನ್ನ ಕಾವ್ಯದಲ್ಲಿ ಅಭಿವ್ಯಕ್ತಿಗೊಳ್ಳುತ್ತ ಬಂದಿದೆ. ನಿಸರ್ಗದ ಒಡನಾಟ ಹಾಗೂ ಒಳ್ಳೆಯ ಮನುಷ್ಯ ಸಂಬಂಧಗಳು ನನ್ನಲ್ಲಿ ಚೈತನ್ಯವನ್ನು ತುಂಬುತ್ತ ಬಂದಿವೆ. ಅತಿ ದೊಡ್ಡ ಮಹತ್ವಾಕಾಂಕ್ಷೆಯನ್ನಿಟ್ಟುಕೊಂಡು ನಾನು ಯಾವುದೇ ಕೆಲಸಕ್ಕೂ ತೊಡಗುವುದಿಲ್ಲ. ಕೈಗೊಂಡ ಕೆಲಸಗಳನ್ನು ಚೊಕ್ಕಟವಾಗಿ, ಸುಂದರವಾಗಿ ಮಾಡುವುದರಲ್ಲಿಯೇ ಒಂದು ಸಂತೋಷವಿದೆ.

ಒಳ್ಳೆಯ ಕಾವ್ಯ ಒಳ್ಳೆಯ ಸ್ನೇಹಿತರನ್ನು ಒದಗಿಸುತ್ತದೆಂಬುದು ನನ್ನ ಅನುಭವಕ್ಕೆ ಬಂದ ಮಾತಾಗಿದೆ. ಯಾರು ಎಷ್ಟೇ ಹೊಗಳಿದರೂ ನನ್ನ ಮಿತಿಗಳನ್ನು ನಾನು ಬಲ್ಲವನಾದ್ದರಿಂದ ಅಹಂಕಾರ ನನ್ನ ಬಳಿ ಸುಳಿದಿಲ್ಲ. 'ಅನ್ಯರಿಗೆ ಅಸಹ್ಯಪಡಬೇಡ' ಎಂಬ ಬಸವಣ್ಣನವರ ಮಾತಿನಿಂದ ಬದುಕಿನಲ್ಲಿ ಪರಸ್ಪರ ಪ್ರೀತಿ, ಸಹನೆ, ಸಹಿಷ್ಣುತೆಯ ಮಹತ್ವವನ್ನು ಅರಿತಿದ್ದೇನೆ. ಕುಟುಂಬ ವಾತ್ಸಲ್ಯ ನನ್ನ ಮನಸ್ಸಿನ ಸ್ವಾಸ್ಥ್ಯವನ್ನು

ಕಾಪಾಡಿದೆ. ನನ್ನ ಸಾಮಾಜಿಕ ಜೀವನದಲ್ಲಿ ಸ್ನೇಹ, ಮಾನವೀಯತೆಗಳು ಪ್ರಧಾನ ಪಾತ್ರ ವಹಿಸಿವೆ. ಸಣ್ಣತನ, ಸಂಕುಚಿತತೆ ದೂರವಾದಷ್ಟೂ ಬದುಕಿನ ಸೌಂದರ್ಯ ಹೆಚ್ಚುತ್ತವೆ. ಒಟ್ಟಿನಲ್ಲಿ ಕಾವ್ಯವೇ ನನ್ನ ಜೀವನ ಧರ್ಮ.

**ಕವಿಯಾಗುವವನ ಮೂಲ ಅರ್ಹತೆಗಳೇನು?**

ಕವಿಯಾಗುವವನ ಮೊದಲ ಅರ್ಹತೆ ಮನುಷ್ಯತ್ವ ಹಾಗೂ ಸಹೃದಯತೆ, ಜೀವನದ ಬಗ್ಗೆ, ನಿಸರ್ಗದ ಬಗ್ಗೆ ಆಸಕ್ತಿ ಹಾಗೂ ಕುತೂಹಲ. ತನ್ನ ಅನುಭವವನ್ನು ಶಬ್ದಗಳಲ್ಲಿ ಅಭಿವ್ಯಕ್ತಿಸುವ ಶಕ್ತಿ. ಕಾವ್ಯವೂ ಒಂದು ಕಲೆಯೆಂಬ ತಿಳುವಳಿಕೆ, ಜೀವನದ ಆಗುಹೋಗುಗಳಿಗೆ ಆತ್ಮೀಯವಾಗಿ ಸ್ಪಂದಿಸುವ ಸಂವೇದನಾ ಸಾಮರ್ಥ್ಯ.

**ಇತ್ತೀಚಿನ ಕಾವ್ಯ ಗದ್ಯವಾಗುತ್ತಿದೆ. ನಿಮ್ಮ ಅನಿಸಿಕೆಯೇನು?**

'ಲಯಪ್ರಜ್ಞೆ' ಇಲ್ಲದಿದ್ದರೆ ಹೀಗಾಗುತ್ತದೆ. ಕಾವ್ಯ ಮೂಲತಃ ಸೌಂದರ್ಯದ ಲಯಾತ್ಮಕ ಸೃಷ್ಟಿ. 'ಸೌಂದರ್ಯ'ಪದವನ್ನು ಇಲ್ಲಿ ವ್ಯಾಪಕವಾದ ಅರ್ಥದಲ್ಲಿ ನೋಡಬೇಕು, ಅಷ್ಟೆ.

**ಉದಯೋನ್ಮುಖ ಕವಿಗಳಿಗೆ ನಿಮ್ಮ ಸಂದೇಶವೇನು?**

'ಸಂದೇಶ' ಎನ್ನುವುದು ಬಹು ದೊಡ್ಡ ಪದ. ಸಹಜತೆಯನ್ನು, ಸರಳತೆಯನ್ನು ಬಯಸುವ ನಾನು ಅದನ್ನು 'ಸಲಹೆ' ಎಂದಿಟ್ಟುಕೊಳ್ಳುತ್ತೇನೆ. 'ಇಂದಿನ'ಎಂದರೆ ಉದಯೋನ್ಮುಖ ಕವಿಗಳು ಎಂದು ತಾನೆ ನಿಮ್ಮ ಮನಸ್ಸಿನಲ್ಲಿರುವುದು? ಇವರು ತಮ್ಮ ಬರವಣಿಗೆಯ ಮಾಧ್ಯಮ ಯಾವುದು ಎಂಬುದನ್ನು ಮೊದಲು ಗುರುತಿಸಿಕೊಳ್ಳಬೇಕು. ಕವಿಯಾಗಲೇಬೇಕೆಂಬ ಹಠ ಬೇಡ.

ಕಾವ್ಯ ರಚನೆಯ ಬಗ್ಗೆ ನಿಜವಾಗಿಯೂ ಒಲವಿದ್ದರೆ ಕನ್ನಡದ ಮಹತ್ವದ ಕವಿಗಳ ಕೃತಿಗಳನ್ನು ಅವುಗಳ ಆಶಯ, ಭಾಷೆ, ಛಂದಸ್ಸು-ಎಲ್ಲ ದೃಷ್ಟಿಯನ್ನಿಟ್ಟುಕೊಂಡು ಚೆನ್ನಾಗಿ ಅಭ್ಯಾಸ ಮಾಡಬೇಕು. ಶಬ್ದ, ಛಂದ ಅಥವಾ ಲಯ ಪ್ರಾಸ, ಮತ್ತು ನಾದ-ಇವೆಲ್ಲದರ ಸಂಘಟಿತ ಆಕೃತಿಯಾಗಿ ಕಾವ್ಯ ಸೃಷ್ಟಿಯಾಗುವುದು. ಅನುಭವ ಗಟ್ಟಿಮುಟ್ಟಾಗಿದ್ದರೆ ಅಭಿವ್ಯಕ್ತಿ ಸುಲಭ ಸಾಧ್ಯ. 'ಅನೇಕ ಹೂಗಳ ರಸವನ್ನುಂಡು ಜೇನುತುಪ್ಪವಾಗಿಸುವ ಪ್ರಕ್ರಿಯೆ' ಇದು ಎಂಬುದನ್ನು ಮರೆಯಬಾರದು.

ಕಾವ್ಯ ಎಂಬುದು, ಮಾನವಪ್ರಜ್ಞೆ ಇಡಿಯಾಗಿ ಕಾರ್ಯದಲ್ಲಿ ತೊಡಗಿದಾಗ ಸಂಭವಿಸುವಂಥದು. ಜೀವನದ ಗತಿ ಬದಲಾದಂತೆ ಅದರ ಲಯ ಬದಲಾಗುತ್ತದೆ. ಅದನ್ನು ಗುರುತಿಸುವಲ್ಲಿಯೇ ಕವಿಯ ನಿಜವಾದ ಯಶಸ್ಸಿರುವುದು. ಕವಿತೆ ಒಂದು

ಪುನರ್ನಿರ್ಮಾಣ. ಆದ್ದರಿಂದ ಹೊಸ ಕವಿತೆ ಬರೆದಾಗಲ್ಲೆಲ್ಲ ಕವಿ ಹೊಸ ಮನುಷ್ಯನಾಗುತ್ತಾನೆ. ಅದನ್ನು ಓದಿದವರೂ ಹೊಸ ಮನುಷ್ಯರಾಗುತ್ತಾರೆ.

ಇಂದಿನ ತರುಣ ಪೀಳಿಗೆಯ ಕವಿಗಳು ತಮ್ಮ ದುಡುಕು, ಪ್ರಚಾರಪ್ರಿಯತೆ, ಸಂಕುಚಿತತೆಗಳನ್ನು ಬದಿಗಿಟ್ಟು ಅಧ್ಯಯನಶೀಲರಾಗಿ ಸ್ವವಿಮರ್ಶೆ ಮಾಡಿಕೊಳ್ಳುತ್ತ ಬರೆಯತೊಡಗಿದರೆ ಒಳ್ಳೆಯ ಕೃತಿಗಳು ಬರದೇ ಇರಲಾರವು. ಯಾವ ಪೋಜನ್ನೂ ಕೊಡದೆ ತಾವು ಅನುಭವಿಸಿದ್ದನ್ನು ಅಭಿವ್ಯಕ್ತಿಗೊಳಿಸಲಿ.

**ನಿಮ್ಮ ಕಾವ್ಯವನ್ನು ತೀವ್ರವಾಗಿ ಪ್ರಭಾವಿಸಿದ ಕವಿಗಳು ಯಾರು?**

ಬೇಂದ್ರೆ, ಕುವೆಂಪು ಹಾಗೂ ಮಧುರಚೆನ್ನ.

* * *

80ಮಳೆಗಾಲಗಳನ್ನು ಕಂಡ ನಿಸರ್ಗದ ಕವಿ ಕಣವಿಯವರಿಗೆ ಕಾವ್ಯವೇ ಜೀವನಧರ್ಮ. ಸಾಹಿತ್ಯ ಸಖಿ ಶಾಂತಾದೇವಿ ಕಣವಿಯವರೊಂದಿಗೆ ಅರ್ಥಪೂರ್ಣ ದಾಂಪತ್ಯ ಜೀವನ ಕಳೆದ ಚೆನ್ನವೀರ ಕಣವಿಯವರ ಬದುಕು, ಬರಹದಲ್ಲಿ ಇಂದಿಗೂ ಅದೇ ಪಾರಿಜಾತದ ಘಮವಿದೆ. ಅವರ ಕಾವ್ಯಯಾನ ಹೀಗೆಯೇ ಮುಂದುವರೆಯಲಿ ಎಂಬುದು ಕಾವ್ಯಾಸಕ್ತರ ಮನದಾಳದ ಹಾರೈಕೆ.

**'ವಿಕ್ರಾಂತ ಕರ್ನಾಟಕ'** ೧೧-೭-೨೦೦೮

*

## ಯಾವ ಚಳವಳಿಯೂ ಇಲ್ಲದೆ ಸಾಹಿತ್ಯ ಬೆಳೆಯಬಲ್ಲದು

● **ಶರತ್ ಕಲ್ಕೋಡ್**

ಕನ್ನಡ ಸಾಹಿತ್ಯ ನಿಂತ ನೀರು ಅನ್ನುವ ಕಲ್ಪನೆಯೇ ತಪ್ಪು. ಅದು ನಿರಂತರವಾಗಿ ಹರಿಯುವ ವೇಗದ ಹೊಸನೀರು. ಯಾವ ಚಳವಳಿಯೂ ಇಲ್ಲದೆ ಸಾಹಿತ್ಯ ಬೆಳೆಯಬಲ್ಲದು. ಯಾಕೆಂದರೆ ಸಾಹಿತ್ಯ ವೈಯಕ್ತಿಕವಾದದ್ದು.

* **ಸರಳತೆ, ಸೌಜನ್ಯ, ಸ್ನೇಹಕ್ಕೆ ಹೆಸರಾದವರು ನೀವು. ನಿಮ್ಮ ಈ ವ್ಯಕ್ತಿತ್ವವನ್ನು ರೂಪಿಸಿದ ಮೂಲ ಸೆಲೆ ಯಾವುದು?**

ಬಾಲ್ಯದಿಂದಲೂ ನಾನು ಭಾವಜೀವಿ ಹೇಗೋ, ಹಾಗೇ ಸ್ನೇಹಜೀವಿ. ಸ್ನೇಹ ಜೀವನದ ಪರಮ ಮೌಲ್ಯವೆಂದೇ ಭಾವಿಸಿ ಬೆಳೆದವನು ನಾನು. ಇದನ್ನು ಕಾಪಾಡಿಕೊಳ್ಳಲು ಅಂತಃಕರಣ, ಸಹನೆ, ಸೌಜನ್ಯ ಬಹಳ ಮುಖ್ಯ. ನನ್ನ ತಂದೆ ಶ್ರೀಘ್ರ ಕೋಪಿ. ಆದರೆ ಅಷ್ಟೇ ಬೇಗ ಮರೆತು ಬಿಡುತ್ತಿದ್ದರು. ಆದರೆ ತಾಯಿ ಬಹಳ ಸಹನಾಶೀಲೆ. ಎಲ್ಲವನ್ನೂ ಸಂಭಾಳಿಸಿಕೊಂಡು ಹೋಗುತ್ತಿದ್ದರು. ನನ್ನ ವ್ಯಕ್ತಿತ್ವದ ಮೇಲೆ ಆವಳ ಪ್ರಭಾವ ಅಪಾರ.

* **ಸಾಹಿತ್ಯದತ್ತ ಹೊರಳಲು ಬಾಲ್ಯದಲ್ಲೇ ನಡೆದ ಪ್ರಮುಖ ಪ್ರೋತ್ಸಾಹಕ ಅಂಶಗಳೇನು?**

ನನ್ನ ತಂದೆ ಪ್ರಾಥಮಿಕ ಶಾಲಾ ಶಿಕ್ಷಕರು. ವಚನ-ತತ್ವ ಪದಗಳಲ್ಲಿ ಅಪಾರ ಆಸಕ್ತಿಯಿದ್ದವರು. ನಾನು ಬಾಲ್ಯದಲ್ಲಿ ಬೆಳೆದದ್ದು ಗದಗ ತಾಲೂಕಿನ ಶಿರುಂದ ಗ್ರಾಮದಲ್ಲಿ. ಶಿರುಂದದ ನಿಸರ್ಗ, ಜನಜೀವನ, ಜಾನಪದ ಹಾಡುಗಳು (ಬೀಸೋಕಲ್ಲು, ಕುಟ್ಟೋ ಹಾಡು, ಹಂತಿಹಾಡು ಸುಗ್ಗಿ, ಹಬ್ಬ-ಹುಣ್ಣಿಮೆ-ಜಾತ್ರೆ-ಹೀಗೆ ಆಗ ಯಾವ ಕೆಲಸವೂ ಹಾಡಿಲ್ಲದೆ ಆಗುತ್ತಿರುವಲಿಲ್ಲ. ಹಾಡು ಜೀವನದಲ್ಲಿ ಹಾಸು ಹೊಕ್ಕಾಗಿತ್ತು). ಹೀಗೆ ಜಾನಪದ ಗೀತೆಗಳೊಂದಿಗೆ ವಿವಿಧ

ವರ್ಗಗಳ ಮತೀಯ ಸಾಮರಸ್ಯವೂ ನನ್ನ ಬದುಕು-ಬರಹಗಳ ಮೇಲೆ ಬೀರಿದ ಪ್ರಭಾವ ಅಪಾರ.

ಮುಂದೆ ಹೈಸ್ಕೂಲ್ ವಿದ್ಯಾಭ್ಯಾಸಕ್ಕಾಗಿ ಧಾರವಾಡದ ಮುರುಘಾ ಮಠದ ಉಚಿತ ಪ್ರಸಾದ ನಿಲಯ ಸೇರಿಕೊಂಡೆ. ಆಗ ಅಲ್ಲಿದ್ದ ಮೃತ್ಯುಂಜಯ ಮಹಾಸ್ವಾಮಿಗಳು 'ಅಣ್ಣನವರ' (ಬಸವಣ್ಣ)ವಚನಗಳನ್ನು ಸುಶ್ರಾವ್ಯವಾಗಿ ಹಾಡುತ್ತಿದ್ದರು. ಈ ಮಠದಲ್ಲಿದ್ದಾಗಲೇ ಮಲ್ಲಿಕಾರ್ಜುನ ಮನ್ಸೂರ್, ಬಸವರಾಜ ರಾಜಗುರು ಮೊದಲಾದವರು ಹಾಡುತ್ತಿದ್ದ ವಚನ ಕೇಳಿ ಸಾಹಿತ್ಯ-ಸಂಗೀತ-ಇವೆರಡರ ಪ್ರಭಾವಲಯದ ಸಾರವನ್ನು ಸಾಕಷ್ಟು ಹೀರಿಕೊಂಡು ಬೆಳೆದೆ.

ಆಗ ಧಾರವಾಡ-ಸಾಹಿತ್ಯ, ಶಿಕ್ಷಣ, ಸಂಸ್ಕೃತಿ ಕೇಂದ್ರವಾಗಿತ್ತು. ಆಲೂರು ವೆಂಕಟರಾಯರು, ಸಾಲಿ ರಾಮಚಂದ್ರರಾಯರು, ಬೇಂದ್ರೆ, ಆನಂದಕಂದ, ಶಂ.ಬಾ.ಜೋಶಿ, ಶ್ರೀರಂಗ, ಉತ್ತಂಗಿ ಚನ್ನಪ್ಪ, ಪ್ರೊ.ಸಿ.ಸಿ.ಬಸವನಾಳ, ಬುರ್ಲಿಬಿಂದು ಮಾಧವ-ಇಂತಹ ಅನೇಕ ಗಣ್ಯ ಸಾಹಿತಿಗಳನ್ನು ನೋಡುವ, ಅವರ ಭಾಷಣ ಕೇಳುವ ಸೌಭಾಗ್ಯ ನನ್ನ ಪಾಲಿಗೆ ಒದಗಿ ಬಂತು. 'ಕರ್ನಾಟಕ ವಿದ್ಯಾವರ್ಧಕ ಸಂಘ' ಸಾಹಿತ್ಯ ಚಟುವಟಿಕೆಗೆ ಕೇಂದ್ರವಾಗಿತ್ತು. ಧಾರವಾಡದಲ್ಲಿ ನಡೆಯುತ್ತಿದ್ದ ಎಲ್ಲಾ ಸಾಂಸ್ಕೃತಿಕ ಕಾರ್ಯಗಳಲ್ಲೂ ತಪ್ಪದೇ ಹಾಜರಿರುತ್ತಿದ್ದೆ. ಜೊತೆಗೆ ಗಳಗನಾಥರ ಕಾದಂಬರಿ, ಕಾರಂತ, ಕುವೆಂಪು ಮುಂತಾದವರ ಬರಹಗಳನ್ನೂ ಓದಲಾರಂಭಿಸಿದೆ. ಹೈಸ್ಕೂಲ್‌ನಲ್ಲಿದ್ದಾಗಲೇ ಕವಿತೆ ರಚಿಸಲಾರಂಭಿಸಿದೆ. ಮುಂದೆ ಕರ್ನಾಟಕ ಕಾಲೇಜು ಸೇರಿದ ಮೇಲೆ ನನ್ನ ಕವಿತೆ-ಸಾಹಿತ್ಯದ ಅಭಿವ್ಯಕ್ತಿಗೆ ಸರಿಯಾದ ರೂಪು-ರೇಷೆ ದೊರೆಯಿತು. ಪ್ರೊ. ಸ.ಸ.ಮಾಳವಾಡ, ಪ್ರೊ. ಅರ್ಮಂಡೋ ಮೇನೇಜಸ್, ಪ್ರೊ. ವಿ.ಎಂ.ಇನಾಂದಾರ್, ಶ್ರೀರಂಗ(ಸಂಸ್ಕೃತ ಪಾಠ ಹೇಳಿದವರು)ಮುಂತಾದ ಅಧ್ಯಾಪಕರು ನನ್ನ ಕಾವ್ಯಾಸಕ್ತಿಗೆ ನೀರೆರೆದು ಪ್ರೋತ್ಸಾಹಿಸಿದರು. ಕವಿಯ ಹೊಟ್ಟೆಯಲ್ಲಿ ಒಬ್ಬ ವಿಮರ್ಶಕನಿರುತ್ತಾನೆ ಎಂಬ ನಂಬಿಕೆ ನನ್ನದು. ಹಾಗಾಗಿ ಹೈಸ್ಕೂಲ್‌ನಲ್ಲಿ ರಚಿಸಿದ ಕವಿತೆಗಳನ್ನೆಲ್ಲ ಮೂಲೆಗೆಸೆದೆ. ಬೇರೆಯವರು ವಿಮರ್ಶೆ ಮಾಡುವುದಕ್ಕಿಂತ ಮುನ್ನವೇ ನನ್ನ ಕಾವ್ಯವನ್ನು ನಾನೇ ವಿಮರ್ಶಿಸಲು ಇದು ಸಹಕಾರಿಯಾಯಿತು.

* **ಕಾಲೇಜು ವಿದ್ಯಾರ್ಥಿಯಾಗಿದ್ದಾಗಲೇ ಹೊರಗಡೆಯಿಂದಲೂ ನಿಮ್ಮ ಸಾಹಿತ್ಯಾಸಕ್ತಿಗೆ ಪ್ರೋತ್ಸಾಹ ದೊರೆಯಿತೆ?**

ಖಂಡಿತಾ, ಕಾಲೇಜಿನಲ್ಲಿ ಓದುತ್ತಿದ್ದಾಗಲೇ ನಾನು ರಚಿಸಿದ ಕವಿತೆಗಳನ್ನು ಪತ್ರಿಕೆಗಳಿಗೆ ಕಳುಹಿಸಲಾರಂಭಿಸಿದೆ. ಮಾಸ್ತಿ ಸಂಪಾದಕತ್ವದ 'ಜೀವನ', ಬೆಟಗೇರಿ ಕೃಷ್ಣಶರ್ಮರ 'ಜಯಂತಿ', ಪ್ರೊ. ಸಿ.ಸಿ.ಬಸವನಾಳ ಅವರ 'ಜಯಕರ್ನಾಟಕ'ದಲ್ಲಿ ನನ್ನ ಕವನಗಳು ಪ್ರಕಟವಾಗತೊಡಗಿದವು. ಆಗ ತಾನೇ ಕವಿತೆ ರಚಿಸಲು ಆರಂಭಿಸಿದ್ದ ಡಾ. ಜಿ.ಎಸ್.ಶಿವರುದ್ರಪ್ಪನವರ ಕವನಗಳೂ 'ಜೀವನ'ದಲ್ಲಿ ಪ್ರಕಟವಾಗತೊಡಗಿದವು. ಕವಿತೆಯನ್ನು ಮೆಚ್ಚಿ ಪರಸ್ಪರ ಪತ್ರ ವ್ಯವಹಾರ ಆರಂಭಿಸಿ ಮುಂದೆ ಪರಿಚಿತರಾಗಿ ಗೆಳೆಯರಾದೆವು. ಅಂದು ಆರಂಭವಾದ ನಮ್ಮ ಗೆಳೆತನ ಇಂದಿನವರೆಗೂ ಮುಂದುವರೆದುಕೊಂಡು ಬಂದಿರುವುದೊಂದು ವಿಶೇಷ. ಸ್ನೇಹಿತರೆಲ್ಲ ಕೂಡಿ(ಕೀರ್ತಿನಾಥ ಕುರ್ತಕೋಟಿ, ಶಂಕರ ಮೊಕಾಶಿ ಪುಣೇಕರ, ಶಿವೇಶ್ವರ ದೊಡ್ಡಮನಿ ಮುಂತಾದವರು)ನನ್ನ ರೂಮಿನಲ್ಲೇ 'ಕಾವ್ಯಾನುಭವ ಮಂಟಪ' ಎಂಬ ಸಾಹಿತ್ಯ ವೇದಿಕೆ ನಿರ್ಮಿಸಿಕೊಂಡು ಚರ್ಚೆ ನಡೆಸುತ್ತಿದ್ದೆವು. ಆಗ ಧಾರವಾಡದಲ್ಲಿದ್ದ ಹಿರಿಯ ಸಾಹಿತಿಗಳು ನಮ್ಮ 'ಕಾವ್ಯಾನುಭವ ಮಂಟಪ'ಕ್ಕೆ ಬಂದು ಕವಿತೆ ಓದುತ್ತಿದ್ದರು. ಸಾಹಿತ್ಯಿಕ ಚರ್ಚೆ ಮಾಡುತ್ತಿದ್ದೆವು. ಕೊಲ್ಹಾಪುರದ ಕಾಲೇಜಿನ ಪ್ರಿನ್ಸಿಪಾಲರಾಗಿದ್ದ ಪ್ರೊ. ಗೋಕಾಕರನ್ನೂ ಕರೆಸಿದ್ದೆವು. ಬೇಂದ್ರೆ ಅವರೂ ಬರುತ್ತಿದ್ದರು.

* **ನಿಮ್ಮ ಪ್ರಥಮ ಕವನ ಸಂಕಲನ ಪ್ರಕಟವಾದಾಗಿನ ಅನುಭವ ಅದಕ್ಕೆ ಸಾಹಿತಿಗಳು ತೋರಿದ ಪ್ರತಿಕ್ರಿಯೆ?**

1949ರ ಮಾತು. ಆಗ ನಾನು ಜೂನಿಯರ್ ಬಿ.ಎ.ನಲ್ಲಿದ್ದೆ. ಪ್ರೊ. ಹಿರೇಮಲ್ಲೂರು ಈಶ್ವರನ್ ತಮ್ಮ 'ಕಲ್ಪನಾ ಗ್ರಂಥ ಮಾಲೆ'ಯಲ್ಲಿ ನನ್ನ ಪ್ರಥಮ ಕವನ ಸಂಕಲನ 'ಕಾವ್ಯಾಕ್ಷಿ'ಪ್ರಕಟಿಸಿದರು. ಬೇಂದ್ರೆ ಆಗ ಸೊಲ್ಲಾಪುರ ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದರು. ಅವರಿಂದ 'ಕಾವ್ಯಾಕ್ಷಿ'ಗೆ ಮುನ್ನುಡಿ ಬಯಸಿ ಪತ್ರ ಬರೆದು ಹಸ್ತಪ್ರತಿ ಜೊತೆಗೆ ಕಳುಹಿಸಿದೆ. ಎಂಟು-ಹತ್ತು ದಿನಗಳಲ್ಲಿ 'ಮುನ್ನುಡಿ' ಬರೆದು ಕಳುಹಿಸಿದರು. ನನಗೆ ಇದು ಬಹಳ ಅನಿರೀಕ್ಷಿತ. ಮುನ್ನುಡಿ ಪ್ರೋತ್ಸಾಹ-ವಿಮರ್ಶಾತ್ಮಕವಾಗಿತ್ತು. ಅದನ್ನೇ ಇಂದಿಗೂ ನನ್ನ ಬಗ್ಗೆ ಕೆಲವು ವಿಮರ್ಶಕರು ಕೋಟ್ ಮಾಡುತ್ತಾರೆ. 'ಕಾವ್ಯಾಕ್ಷಿ'ಗೆ ಒಳ್ಳೆಯ ಪ್ರತಿಕ್ರಿಯೆ-ವಿಮರ್ಶೆ ಬಂದು ನನ್ನ ಕಾವ್ಯದ ಮುಂದಿನ ಮಾರ್ಗ ಸ್ಪಷ್ಟವಾಯಿತು.

ಬೇಂದ್ರೆ 'ಸಖಿಗೀತ' ಮಧುರ ಚೆನ್ನರ 'ನನ್ನನಲ್ಲ' ಪ್ರೇರಣೆಯಿಂದ ಎರಡನೇ ಕಾವ್ಯ ಸಂಕಲನ 'ಭಾವಜೀವಿ' (1950) ಬರೆದೆ. ಅದು ಖಂಡಕಾವ್ಯ. ಹಿರಿಯ

ಕವಿಗಳ ಪ್ರಭಾವಕ್ಕಿಂತ ಅದನ್ನು ಅರಗಿಸಿಕೊಂಡು ಪ್ರೇರಣೆ ಪಡೆದು ಕಾವ್ಯ ರಚಿಸುತ್ತಿದ್ದೆ. 'ಕಾವ್ಯಾಕ್ಷಿ', 'ಭಾವಜೀವಿ' ಪ್ರತಿಗಳನ್ನು ಕುವೆಂಪು ಅವರಿಗೂ ಕಳುಹಿಸಿದ್ದೆ. ಕುವೆಂಪು ಅದನ್ನು ಓದಿ ಮೆಚ್ಚುಗೆ ವ್ಯಕ್ತಪಡಿಸಿದ್ದನ್ನು ಜಿ.ಎಸ್.ಎಸ್ ಪತ್ರಗಳಲ್ಲಿ ವಿವರವಾಗಿ ತಿಳಿಸುತ್ತಿದ್ದರು. ಬೇಂದ್ರೆ, ಕುವೆಂಪು, ಮಧುರಚೆನ್ನರ ಕಾವ್ಯದ ಬಗ್ಗೆ ನನಗೆ ವಿಶೇಷ ಒಲವು. ಅವರ ಕಾವ್ಯಗಳಿಂದ ಪ್ರೇರಣೆ ಪಡೆದು ನನ್ನ ಕಾವ್ಯಗಳಲ್ಲಿ ಪ್ರಯೋಗ ನಡೆಸುತ್ತಿದ್ದೆ. 1952ರಲ್ಲಿ ಎಂ.ಎ., ಮುಗಿಸಿದ ಬಳಿಕ ಇದ್ದಕ್ಕಿದ್ದಂತೆ, 'one fine morning I woke up and found myself famous.' 1950ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯ ಆರಂಭವಾಯಿತು. 1952ರಲ್ಲಿ ವ್ಯಾಸಂಗ ವಿಸ್ತರಣಾ ಪ್ರಕಟಣಾ ವಿಭಾಗ (ಮುಂದೆ ಇದೇ 'ಪ್ರಸಾರಾಂಗ') ಆರಂಭವಾದಾಗ ಅದರ ಕಾರ್ಯದರ್ಶಿಯಾಗಿ ನೇಮಕಗೊಂಡೆ. ಅದೇ ವರ್ಷ ಶಾಂತಾದೇವಿ ಅವರ ಜೊತೆ ವಿವಾಹವೂ ಆಯಿತು. ಮುಂದೆ ಪ್ರಸಾರಾಂಗದ ನಿರ್ದೇಶಕನಾಗಿ ಮೂವತ್ತು ವರ್ಷಗಳ ಕಾಲ ಸೇವೆ ಸಲ್ಲಿಸಿ 1983ರಲ್ಲಿ ನಿವೃತ್ತನಾದೆ.

* **ಕುವೆಂಪು ಜೊತೆ ಸಂಪರ್ಕವಿತ್ತೆ?**

ಹೌದು. 1957ರಲ್ಲಿ ಧಾರವಾಡದಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಕುವೆಂಪು ಅವರೇ ಅಧ್ಯಕ್ಷರು. ಆ ಸಮ್ಮೇಳನದ ಕಾರ್ಯದರ್ಶಿಯಾಗಿ ನಾನು ಕಾರ್ಯ ನಿರ್ವಹಿಸಿದೆ. ಕರ್ನಾಟಕ ವಿಶ್ವವಿದ್ಯಾನಿಲಯದ ಆಶ್ರಯದಲ್ಲಿ ನಡೆದ ಆ ಸಮ್ಮೇಳನಕ್ಕೆ ಕುವೆಂಪು ಇಡೀ ಕುಟುಂಬ ಸಮೇತರಾಗಿ ಬಂದಿದ್ದರು (ತೇಜಸ್ವಿ ಆಗ ಬಹಳ ಚಿಕ್ಕವರು). ಈ ಸಮ್ಮೇಳನದ ಇನ್ನೊಂದು ವಿಶೇಷವೆಂದರೆ ಸಮ್ಮೇಳನದ ಅಧ್ಯಕ್ಷರಾಗಿದ್ದ ಕುವೆಂಪು ಅವರೇ ಕವಿಗೋಷ್ಠಿಯ ಅಧ್ಯಕ್ಷತೆಯನ್ನೂ ವಹಿಸಿದ್ದು (ಇಂತಹ ಅಪೂರ್ವ ಘಟನೆ ಹಿಂದೆ ನಡೆದಿರಲಿಲ್ಲ. ಮುಂದೆಯೂ ನಡೆಯಲಾರದು). ಬೇಂದ್ರೆ, ಗೋಕಾಕ್, ಮುಗಳಿ ಮುಂತಾದ ಹಿರಿಯರು ಭಾಗವಹಿಸಿದ್ದ ಈ ಸಭೆಯಲ್ಲೇ ಕಾಸರಗೋಡಿನ ಕಯ್ಯಾರ ಕಿಞ್ಞಣ್ಣರೈ 'ಮನೆಗೆ ಬಿದ್ದಿದೆ ಬೆಂಕಿ'ಕವನವನ್ನು ಪ್ರಥಮ ಬಾರಿಗೆ ಓದಿದ್ದು.

* **ಬೇಂದ್ರೆ ಅವರ ಜೊತೆ ಬಹಳ ಕಾಲ ಅಪೂರ್ವ ಒಡನಾಟ ಇದ್ದವರು ನೀವು. ಒಂದೆರಡು ಘಟನೆಗಳನ್ನು ನೆನಪಿಸಿಕೊಳ್ಳಬಲ್ಲಿರಾ?**

ಬೇಂದ್ರೆ ಅವರ ಬಗ್ಗೆ ಒಂದೆರಡೇನು?ಬೇಕಾದಷ್ಟು ಹೇಳಬಲ್ಲೆ. ನನಗೆ ಐವತ್ತು ವರ್ಷ ತುಂಬಿದ ಸಂದರ್ಭ (1981 -ಅದೇ ವರ್ಷ ನನ್ನ 'ಜೀವಧ್ವನಿ' ಸಂಕಲನಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ದೊರೆತಿತ್ತು.) ಧಾರವಾಡದಲ್ಲಿ ಅಭಿನಂದನಾ

ಸನ್ಮಾನ ಸಮಾರಂಭ ಏರ್ಪಡಿಸಿದ್ದರು('ಚೆಂಬೆಳಕು'ಅಭಿನಂದನಾ ಗ್ರಂಥ ಸಮರ್ಪಿಸಿದರು.)ಆರೋಗ್ಯ ಸರಿಯಿರದಿದ್ದರಿಂದ ಬೇಂದ್ರೆ ಅವರನ್ನು ಕರೆದಿರಲಿಲ್ಲ. ಪು.ತಿ.ನ ಅಂದಿನ ಸಭಾಧ್ಯಕ್ಷರು. ಸಭೆ ಆರಂಭವಾದ ಸ್ವಲ್ಪ ಹೊತ್ತಿನಲ್ಲೇ ಬೇಂದ್ರೆ ಆಗಮಿಸಿದರು. ಆದರ-ಪ್ರೀತಿಯಿಂದ ಕರೆತಂದು ವೇದಿಕೆ ಮೇಲೆ ಕೂರಿಸಿದೆವು. ಕೊನೆಗೆ ನಾಲ್ಕು ಆಶೀರ್ವಚನದ ಮಾತು ಹೇಳಬೇಕೆಂದು ಕೋರಿಕೊಂಡೆವು. ಅರ್ಧಗಂಟೆ ಮಾತನಾಡಿ ನನ್ನನ್ನು ಹರಸಿದ ಬೇಂದ್ರೆ "ಸಾಹಿತಿಗಳು ಅಸೂಯಾಪರರಾಗಬಾರದು, ಅನಸೂಯ ಪರರಾಗಿರಬೇಕು. ಇದರಿಂದ ಸಾಹಿತಿ-ಸಾಹಿತ್ಯ ಬೆಳೆಯುತ್ತಲ್ಲದೆ, ಧಾರವಾಡವೂ ಬೆಳೆಯುತ್ತದೆ" ಎಂದು ಕೊನೆ ಮಾತು ಹೇಳಿದರು. ಇದು ಧಾರವಾಡದಲ್ಲಿ ಅಷ್ಟೇ ಅಲ್ಲ. ಬೇಂದ್ರೆ ಭಾಗವಹಿಸಿದ ಕೊನೆಯ ಸಾರ್ವಜನಿಕ ಸಭೆ. ಅದರ ಮುಂದಿನ ದೀಪಾವಳಿಯಲ್ಲಿ ಅವರು ಮುಂಬೈನಲ್ಲಿ ತೀರಿಕೊಂಡರು.

ಬೇಂದ್ರೆ ಎಷ್ಟು ವಿನಯಶೀಲರೋ ಅಷ್ಟೆ ನಿಷ್ಠೂರರೂ ಕೂಡ. 'ನಾಕುತಂತಿ'ಕವನ ಸಂಗ್ರಹಕ್ಕೆ ಜ್ಞಾನಪೀಠ ಪ್ರಶಸ್ತಿ ಬಂದ ಸಮಯ ತರ್ಲೆ ವಿಮರ್ಶಕನೊಬ್ಬ ವಾರ ಪತ್ರಿಕೆಯೊಂದರಲ್ಲಿ 'ನಾಲ್ಕು ತಂತಿ'ಬಗ್ಗೆ ಲೇವಡಿ ಮಾಡಿ ಬರೆದಿದ್ದ. ಯಾರೋ ಅದನ್ನು ಬೇಂದ್ರೆ ಅವರ ಗಮನಕ್ಕೆ ತಂದಿದ್ದರು.

ಒಂದು ದಿನ ಬೇಂದ್ರೆ ಅವರ ಮನೆ ಗೇಟು ತೆರೆದು ಆ ತರ್ಲೆ ವಿಮರ್ಶಕ ಮನೆ ಒಳಗೆ ಬರುತ್ತಿರುವುದು ಕಂಡು, ಕವಿ ಮುಂದಿನ ಬಾಗಿಲ ಬಳಿ ಓಡಿ ಬಂದು ಅಡ್ಡವಾಗಿ ನಿಂತು" ಯಾರು ನೀನು, ಯಾರನ್ನ ನೋಡಬೇಕಾಗಿತ್ತು?"ಎಂದು ಪ್ರಶ್ನಿಸಿದರು. ತರ್ಲೆ ವಿಮರ್ಶಕ ತನ್ನ ಹೆಸರು ಹೇಳಿಕೊಂಡು 'ನಿಮ್ಮನ್ನ ನೋಡ್ಲಿಕ್ಕೆ ಬಂದೆ' ಎಂದು ಮುನ್ನುಗ್ಗತೊಡಗಿದ. ಆಗ ಬೇಂದ್ರೆ, "ನೋಡಿದ್ದು ಆಯ್ತಲ್ಲಾ, ಹೋಗಿನ್ನು" ಎಂದು ಧಡಾರನೆ ಬಾಗಿಲು ಮುಚ್ಚಿದರು. ಬಂದ ದಾರಿಗೆ ಸುಂಕವಿಲ್ಲವೆಂದು ಆ ತರ್ಲೆ ವಿಮರ್ಶಕ ಅಲ್ಲಿಂದ ಕಾಲು ಕಿತ್ತ!

* **ಕಾವ್ಯ ಲೋಕದಲ್ಲೇ ವಿಹರಿಸಿದ ನೀವು ಸಾಹಿತ್ಯ ಇನ್ನಿತರ ಪ್ರಕಾರಗಳತ್ತ ಗಮನ ಹರಿಸದಿರಲು ಕಾರಣ?**

ಕಾವ್ಯ ನನ್ನ ಬದುಕಿನ ಪ್ರಧಾನ ಜೀವಾಳ. ಇದರ ಸಮೀಪ ಬರುವಂಥ ಲಲಿತ ಪ್ರಬಂಧ, ಸಾಹಿತ್ಯ ವಿಮರ್ಶೆಯತ್ತ ನನ್ನ ಒಲವಿದೆ. ಆ ನಿಟ್ಟಿನಲ್ಲೂ ಸ್ವಲ್ಪ ಮಟ್ಟಿಗೆ ಕೆಲಸ ಮಾಡಿದ್ದೇನೆ. ಕನ್ನಡ ಸಂಸ್ಕೃತಿ ಇಲಾಖೆ ಹಿರಿಯ ಬರಹಗಾರರ ಸಮಗ್ರ ಕೃತಿಗಳನ್ನು ಪ್ರಕಟಿಸುತ್ತಿವೆ. ಆ ಮಾಲಿಕೆಯಲ್ಲಿ ನನ್ನ ಸಮಗ್ರ ಕಾವ್ಯಗಳ

ಎರಡು ಸಂಪುಟಗಳು, ಸಮಗ್ರ ಗದ್ಯದ ಎರಡು ಸಂಪುಟಗಳು ಹೊರ ಬರುತ್ತಿವೆ. ಸಮಗ್ರ ಗದ್ಯ ಎರಡು ಸಂಪುಟಗಳಷ್ಟು ಇದೆ ಎಂಬುದೇ ನನಗೆ ವಿಸ್ಮಯ-ಆಶ್ಚರ್ಯದ ಸಂಗತಿ. ಸುಮಾರು ಹದಿಮೂರು ನೂರು-ಹದಿನಾಲ್ಕು ನೂರು ಪುಟಗಳಷ್ಟಾಗುವ ಈ ಗದ್ಯ ಸಂಪುಟದಲ್ಲಿ ನಾನು ಬರೆದ ವ್ಯಕ್ತಿ ಚಿತ್ರ, ಪ್ರಬಂಧ ವಿಮರ್ಶೆ, ಸಂಕೀರ್ಣ ಲೇಖನ, ಭಾಷಣ, ಅದಕ್ಕಿಂತ ಎಪ್ಪತ್ತೈದಕ್ಕೂ ಹೆಚ್ಚು ಯುವ ಕವಿಗಳಿಗೆ ಬರೆದ ಮುನ್ನುಡಿಗಳನ್ನೊಳಗೊಂಡಿವೆ. ಕಾವ್ಯವನ್ನು ಜೋಪಾನ ಮಾಡಿದ ಹಾಗೆ ಗದ್ಯಬರಹಗಳನ್ನು ಜೋಪಾನವಾಗಿರಿಸಲಿಲ್ಲ. ಕೆಲವೊಮ್ಮೆ ಕೇಳಿದಾಗ, ಸಮಯಕ್ಕೆ ತಕ್ಕಂತೆ ಬರೆದ ಬರಹಗಳೇ ಹೆಚ್ಚು.

* **ಗೋಕಾಕ್ ಚಳವಳಿಯಲ್ಲಿ ಪ್ರಮುಖ ಪಾತ್ರ ವಹಿಸಿದವರು ನೀವು. ಈಗ ಅಂಥ ಚಳವಳಿ ಅಗತ್ಯ ಇದೆ ಅನಿಸುತ್ತಿದೆಯಾ?**

ಖಂಡಿತ. ಅಂದಿಗಿಂತ ಇಂದು ಕನ್ನಡ ಚಳವಳಿ ಅಗತ್ಯವಿದೆ. ಕನ್ನಡ ಮಾಧ್ಯಮಕ್ಕೆ ಧಕ್ಕೆ ಬಂದಿದೆ. ಅಂದರೆ ಕನ್ನಡದ ಮೂಲ ಸಂಸ್ಕೃತಿಗೇ ಧಕ್ಕೆ ಬಂದಿದೆ. ಇಂಗ್ಲೀಷ್ ಭಾಷೆ ಕಲಿಯುವುದು ಬೇಡ ಎನ್ನುವುದಿಲ್ಲ. ಆದರೆ ಅದನ್ನು ಮಾಧ್ಯಮಿಕ ಶಾಲೆಯಿಂದ ಒಂದು ಭಾಷೆಯಾನ್ನಾಗಿ ಕಲಿಸಿ. ಪ್ರಾಥಮಿಕ ಶಾಲೆಯಲ್ಲಿ ಕನ್ನಡ ಕಲಿಸಿದರೆ ನಮ್ಮ ಭಾಷೆ-ಸಂಸ್ಕೃತಿ ಬಗ್ಗೆ ಅರಿವು ಮೂಡಿಸಿದ ಹಾಗೇ ಆಗುತ್ತದೆ. ಇಲ್ಲದಿದ್ದರೆ ಮಕ್ಕಳಿಗೆ ನಮ್ಮ ಭಾಷೆ-ಸಂಸ್ಕೃತಿ ಬಗ್ಗೆ ಅನುಭೂತಿಯೇ ಇರುವುದಿಲ್ಲ.

* **ಇಂದಿನ ಟಿವಿ-ಸಿನೆಮಾ ಮಾಧ್ಯಮದಲ್ಲಿ ಬಳಸುತ್ತಿರುವ ಕನ್ನಡದ ಬಗ್ಗೆ?**

ಪ್ರಾದೇಶಿಕ ಭಾಷೆಯುನ್ನು ಹಾಸ್ಯಕ್ಕಾಗಿ ಬಳಸಿ ದುರುಪಯೋಗ ಪಡಿಸುತ್ತಿರುವುದನ್ನು ಮೊಟ್ಟ ಮೊದಲು ನಿಲ್ಲಿಸಬೇಕು. ಅನಗತ್ಯವಾಗಿ ಇಂಗ್ಲಿಷ್ ಬಳಸಬಾರದು. ಸಿನೆಮಾ-ಟಿವಿಗಳಲ್ಲಿ(ಮಾಧ್ಯಮ) ಬಳಸುವ ಭಾಷೆಯನ್ನು ಜನ ಸಾಮಾನ್ಯರು ಬಹಳ ಬೇಗ ಅನುಕರಿಸುತ್ತಾರೆ.

* **ಅರವತ್ತು-ಎಪ್ಪತ್ತರ ದಶಕದಲ್ಲಿ ಸೃಷ್ಟಿಯಾದ ಸಾಹಿತ್ಯ. ಅಮೂಲ್ಯವಾದದ್ದು. ಅದು 'ಆಧುನಿಕ ಕನ್ನಡ ಸಾಹಿತ್ಯದ ಸುವರ್ಣ ಯುಗ'. ಈ ಹಿನ್ನೆಲೆಯಲ್ಲಿ ಇಂದಿನ ಯುವ ಸಾಹಿತಿಗಳು ರಚಿಸುತ್ತಿರುವ ಸಾಹಿತ್ಯದ ಬಗ್ಗೆ ನಿರ್ಲಕ್ಷ್ಯ ಧೋರಣೆ ತೋರುತ್ತಿರುವುದು ಸರಿಯೆ?**

ಕನ್ನಡ ಸಾಹಿತ್ಯ ನಿಂತ ನೀರು ಅನ್ನುವ ಕಲ್ಪನೆಯೇ ತಪ್ಪು. ಅದು ನಿರಂತರವಾಗಿ

ಹರಿಯುವ ವೇಗದ ಹೊಸನೀರು. ಯಾವ ಚಳವಳಿಯೂ ಇಲ್ಲದೆ ಸಾಹಿತ್ಯ ಬೆಳೆಯಬಲ್ಲದು. ಯಾಕೆಂದರೆ ಸಾಹಿತ್ಯ ವೈಯಕ್ತಿಕವಾದದ್ದು. ತನ್ನೊಳಗೆ ತಾನೇ ಹೋರಾಟ ನಡೆಸಿ ಸೃಷ್ಟಿಯಾಗುವ ಕ್ರಿಯೆ. ಹೊಸ ಬಗೆಯ ಪ್ರತಿಭೆಗಳು ಬರುತ್ತಿದ್ದಾರೆ. ಅವರನ್ನು ಗುರುತಿಸಬೇಕು. ಹೊಸ ಸಂವೇದನೆಯ, ಹೊಸ ನುಡಿಕಟ್ಟನ್ನು, ಹೊಸ ಅನುಭವವನ್ನು ಕಟ್ಟಿಕೊಡುವ ಬೇರೆ ಬೇರೆ ರಂಗದಿಂದ ಯುವ ಬರಹಗಾರರು, ಬರಹಗಾರ್ತಿಯರೂ ಬರುತ್ತಿದ್ದಾರೆ. ಅವರು ಬೆನ್ನು ತಟ್ಟಿ ಪ್ರೋತ್ಸಾಹಿಸಬೇಕಾದದ್ದು ಹಿರಿಯರ ಕರ್ತವ್ಯ. ಅದು ಬಿಟ್ಟು ಇಪ್ಪತ್ತನೇ ಶತಮಾನ ಸುವರ್ಣ ಯುಗ ಎಂದು ಕನವರಿಸುತ್ತಾ ಕುಳಿತರೆ ಹೊಸದನ್ನು ಗುರುತಿಸುವ ಕಾರ್ಯ ಅಸಾಧ್ಯವಾಗುತ್ತದೆ ಅಷ್ಟೆ.

* **ಬದುಕು-ಬರಹಗಳಿಗೆ ಅಂತರವಿಲ್ಲದೆ ಬದುಕಿದವರು ನೀವು. ಬದುಕು-ಬರಹಕ್ಕೆ ನಿಷ್ಠುರವಾಗಿರುವುದು ಅಗತ್ಯವೆ?**

ಬದುಕು ಬಿಟ್ಟು ಸಾಹಿತ್ಯ ಇರಲು ಸಾಧ್ಯವೆ? ನಮ್ಮನ್ನು ಲೇಖಕರನ್ನಾಗಿ ಸಮಾಜ ಗುರುತಿಸುವಂತೆ ಮಾಡುವುದೂ ಬದುಕೇ, ಆದ್ದರಿಂದ ಅಂಥ ಬದುಕಿಗೆ ನಿಷ್ಠುರವಾಗಿರಬೇಕಲ್ಲವೆ? ಲೇಖಕ ಒಬ್ಬ ಸಮಾಜ ಜೀವಿಯಾದ್ದರಿಂದ ಅವನ ವ್ಯಕ್ತಿತ್ವ-ಬರಹಗಳೆರಡೂ ಸಮಾಜದ ಎದುರಿಗಿರುತ್ತದೆ. ಅವೆರಡರ ಸಮನ್ವಯ ಇಲ್ಲದಿದ್ದರೆ ನಮ್ಮನ್ನು ನಾವು ವಂಚನೆ ಮಾಡಿಕೊಂಡ ಹಾಗೆ, ಜನತೆಯನ್ನೂ ವಂಚಿಸಿದ ಹಾಗೆ. ಜನ ನಮ್ಮ ಬರಹ ಓದಿ ಒಂದು ಬಗೆಯ ನಂಬಿಕೆ-ಆದರ್ಶ-ಗೌರವ ಇಟ್ಟುಕೊಂಡು, ಅನುಕರಿಸಲು ಪ್ರಯತ್ನಿಸುತ್ತಾರೆ. ಅದಕ್ಕೆ ಧಕ್ಕೆ ಬಂದಾಗ ಸಮಾಜದ ದೃಷ್ಟಿಯಲ್ಲಿ ಅಪಮೌಲ್ಯಕ್ಕೆ ಒಳಗಾಗುತ್ತೀರಿ. ಅಷ್ಟೆ ಅಲ್ಲ; ಸಮಾಜದ ಹಿತಕ್ಕೆ ಅದರಿಂದ ಧಕ್ಕೆಯೂ ಆಗಬಲ್ಲದು.

* **ನಿಮಗೆ ಹಲವಾರು ಪ್ರಶಸ್ತಿ-ಪುರಸ್ಕಾರಗಳು ದೊರೆತಿವೆ. ಅವುಗಳಲ್ಲಿ ನಿಮಗೆ ಅತ್ಯಂತ ತೃಪ್ತಿ ತಂದುಕೊಟ್ಟ ಪ್ರಶಸ್ತಿ ಯಾವುದು?ಯಾಕೆ?**

ನಿಸ್ಸಂದೇಹವಾಗಿ 'ಪಂಪಪ್ರಶಸ್ತಿ' ಪಂಪ ನಮ್ಮ ಪರಂಪರೆಯ ಆದಿ ಕವಿ. ಇಂದಿಗೂ ಅಗ್ರಮಾನ್ಯ ಕವಿ. ಆ ದೃಷ್ಟಿಯಲ್ಲಿ 'ಪಂಪಪ್ರಶಸ್ತಿ' ನನಗೆ ಮಹತ್ವ ಪೂರ್ಣ!

**'ಓಮನಸೇ'** ೧-೧೨-೨೦೦೮

*

# ನನ್ನ ನಂಬಿಕೆಯೊಂದು ಆಕಾಶ

● ಡಾ. ಜಿ.ಎಂ.ಹೆಗಡೆ

ಕನ್ನಡ ಕಾವ್ಯಪ್ರಪಂಚದಲ್ಲಿ ತಮ್ಮ ಸೃಜನಶೀಲ ಪ್ರತಿಭೆ ಹಾಗೂ ಆಳವಾದ ಕಾವ್ಯ ಸಂವೇದನೆಯಿಂದ ಕಳೆದ ಅರವತ್ತು ವರ್ಷಗಳಿಂದ ಕವಿತೆ ರಚಿಸುತ್ತಲಿರುವ ಚೆನ್ನವೀರ ಕಣವಿ ಅವರಿಗೆ ಈಗ 85ರ ಸಂಭ್ರಮ. 'ಏನಾದರೂ ಇರಲಿ ಹಾಡು ನಿಲ್ಲಿಸಬೇಡ ದೀಪ ಪಟ್ಟನೆ ಆರಿ ಹೋಗಬಹುದು' ಎಂದು ಹೇಳಿದ ಕಣವಿ ಅವರು ಧ್ಯಾನಸ್ಥ ಮನಸ್ಸಿನಿಂದ ಕವಿತೆ ರಚಿಸುತ್ತಲಿದ್ದಾರೆ. 'ಕಾವಾಕ್ಷಿ'ಯಿಂದ ಇತ್ತೀಚಿನ 'ನೀವೇ ಪ್ರಮಾಣು' ಸಂಕಲನದವರೆಗೆ ಆರು ನೂರಕ್ಕೂ ಹೆಚ್ಚು ಕವಿತೆ ರಚಿಸಿರುವ ಕಣವಿ ಕಾವ್ಯ ಸಹೃದಯರನ್ನು ಆಕರ್ಷಿಸುತ್ತದೆ. 'ವಿಶ್ವಭಾರತಿಗೆ ಕನ್ನಡದಾರತಿ', 'ಹೆಸರಾಯಿತು ಕರ್ನಾಟಕ ಉಸಿರಾಗಲಿ ಕನ್ನಡ', 'ಹೂವು ಹೊರಳುವವು ಸೂರ್ಯನ ಕಡೆಗೆ'ಕೇಳದ ಕನ್ನಡಿಗರಿಲ್ಲ. ತಮ್ಮ ಕವಿತೆಗಳ ಮೂಲಕ ಪ್ರೀತಿ, ಸ್ನೇಹ, ಅಂತಃಕರಣಗಳನ್ನು ಮಾನವೀಯ ಸಂಬಂಧಗಳನ್ನು ಹೊಳೆಯಾಗಿ ಹರಿಸಿದ ಕಣವಿಯವರು ಕವಿಯಾಗಿ, ವಿಮರ್ಶಕರಾಗಿ ಅನನ್ಯ ಸಾಧನೆ ಮಾಡಿದ್ದಾರೆ. ಸುನೀತಗಳಂತೂ ಅವರು ಕನ್ನಡಕ್ಕೆ ನೀಡಿದ ಅತ್ಯಂತ ಮಹತ್ವದ ಕೊಡುಗೆ. ಮೊದಲಿನಿಂದಲೂ ಅವರು ಕನ್ನಡಪರ ಹೋರಾಟಗಳಲ್ಲಿ ಭಾಗವಹಿಸುತ್ತ ಬಂದಿದ್ದಾರೆ.

ಆಧುನಿಕ ಕನ್ನಡ ಕಾವ್ಯದ ಶತಮಾನದ ಚರಿತ್ರೆಯಲ್ಲಿ ಬೇಂದ್ರೆ, ಕುವೆಂಪು, ಕೆ.ಎಸ್. ನರಸಿಂಹಸ್ವಾಮಿ ನಂತರ ಕಣವಿ, ಶಿವರುದ್ರಪ್ಪ ಅವರು ನಮ್ಮ ನಡುವೆ ಇರುವ ಮಹತ್ವದ ಕವಿಗಳಾಗಿದ್ದಾರೆ. ಪ್ರಾಥಮಿಕ ಶಾಲೆಯ ಶಿಕ್ಷಕರ ಮಕ್ಕಳಾಗಿ ಪ್ರತಿಭೆ, ಪರಿಶ್ರಮಗಳಿಂದ ಅವರು ಕನ್ನಡ ಕಾವ್ಯವನ್ನು ಸಮೃದ್ಧಗೊಳಿಸಿದ್ದಾರೆ. ವರಕವಿ ಬೇಂದ್ರೆಯವರು ಗುರುತಿಸಿದಂತೆ ಶಿವ-ರುದ್ರ ಚೆನ್ನ-ವೀರ ಹೆಸರಿನಲ್ಲಿ ಅವಿನಾಭಾವ ಸಂಬಂಧವಿದೆ. ಆದರೆ ಚೆನ್ನವೀರಕಣವಿ, ಜಿ.ಎಸ್.ಶಿವರುದ್ರಪ್ಪನವರ ಕಾವ್ಯದ ದಾರಿ ಬೇರೆಯಾದದ್ದು. ಕಣವಿಯವರು ಜನಪರವಾದ ನಿಲುವುಗಳಿಗೆ ಸ್ಪಂದಿಸುತ್ತ ಉದಾರವಾದ ಮಾನವತಾವಾದದಲ್ಲಿ ತಮ್ಮ ಕಾವ್ಯವನ್ನು ನೆಲೆಗೊಳಿಸುತ್ತಾರೆ. ಶಿವರುದ್ರಪ್ಪನವರು

ಭಾರತದ ಸಮಕಾಲೀನ ಸ್ಥಿತಿಗತಿಯ ಬಗ್ಗೆ ದಟ್ಟವಾದ ವಿಷಾದವನ್ನು ವ್ಯಕ್ತಪಡಿಸುತ್ತಾರೆ. ಕಣವಿಯವರ ಕಾವ್ಯ ಆಕಾಶಗಾಮಿಯಾಗದೆ ಮರ್ತ್ಯದ ಕಡೆಗೆ ಮುಖ ಮಾಡಿರುವುದ ರಿಂದಲೇ ಅಪಾರ ಜನಮನ್ನಣೆಗಳಿಸಿದೆ. ತಮ್ಮ ಸ್ನೇಹಪೂರ್ಣ ವ್ಯಕ್ತಿತ್ವದಿಂದ ಸಾಮರಸ್ಯವನ್ನು ಸಾಧಿಸುವ ಸಾಂಸ್ಕೃತಿಕ ನಾಯಕರಾಗಿ ಕಣವಿ ಕನ್ನಡ ಪ್ರಪಂಚದಲ್ಲಿ ಖ್ಯಾತರಾಗಿದ್ದಾರೆ. ಮೃದು ಮಾತಿನ, ಸಜ್ಜನಿಕೆ ಕಣವಿಯವರೊಡನೆ ಸಾಹಿತ್ಯ ಸಲ್ಲಾಪ ನಡೆಸುವುದು ಒಂದು ಅಪರೂಪದ ಅನುಭವ. ಸುಂದರವಾದ ಹಸಿರು ಪರಿಸರ, ಕಲ್ಯಾಣನಗರದ ಹೂದೋಟದ ನಡುವಿನ 'ಚೆಂಬೆಳಕು' ಕವಿ ನಿವಾಸಕ್ಕೆ ಹೋದಾಗ ಮಳೆಗಾಲ. 'ಒಂದು ಮುಂಜಾವಿನಲಿ ತುಂತುರಿನ ಸೋನೆ ಮಳೆ ಸೋ ಎಂದು ಶ್ರುತಿ ಹಿಡಿದು ಸುರಿಯುತ್ತಿತ್ತು' 'ಬಾನ ಸಾಣೆಗೆ ಹಿಟ್ಟು ಸಣ್ಣಿಸಿದಂತೆ ಜಿನುಗಿದೆ....'ಕಣವಿ ಕವಿತೆ ಸಾಲು ನೆನಪಾದವು. ಮಳೆಗಾಲದ ಕವಿ ಕಣವಿಯವರು ಎಂದಿನ ಪ್ರೀತಿ ಸ್ನೇಹದ ಪರಿಮಳ ಚೆಲ್ಲಿ ಸಾಹಿತ್ಯ ಸಂವಾದದಲ್ಲಿ ಪಾಲ್ಗೊಂಡರು.

**ಎಂಬತ್ತೈದರ ಎತ್ತರದಲ್ಲಿ ನಿಂತು ನೋಡಿದಾಗ ನಿಮ್ಮ ಜೀವನದ ಬಗೆಗೆ ಏನನ್ನಿಸುತ್ತದೆ?**

**ಚೆನ್ನವೀರ ಕಣವಿ :** ನಾನು ಎತ್ತರದಲ್ಲಿ ನಿಂತಿದ್ದೇನೆಂಬ ಭಾವನೆಯೇ ನನಗೆ ಬಂದಿಲ್ಲ. ಎಲ್ಲರೊಡನೆ ಒಂದಾಗಿ ಸಾಗಿ ಬಂದದ್ದರಿಂದಲೇ ನನ್ನ ಮನಸ್ಸಿಗೊಂದು ಸಮಾಧಾನವಿದೆ. ನನ್ನ ಬದುಕಿನಲ್ಲಿ ವಿಶೇಷ ಏರಿಳಿತಗಳಿಲ್ಲದಿರುವುದಕ್ಕೆ ಬಹುಶಃ ಇದೇ ಕಾರಣವಿರಬಹುದು. ನಾನು ಹಳ್ಳಿಯಲ್ಲಿ ಹುಟ್ಟಿ ಬೆಳೆದಿದ್ದರಿಂದ ಅಲ್ಲಿ ಪಡೆದ ಜಾನಪದ ಸಂಸ್ಕಾರ ಮುಂದಿನ ಶಿಷ್ಟ ನಡವಳಿಕೆಯ ಮಾರ್ದವತೆಗೆ ನೆರವಾಯಿತು. ಬಡ ಆದರೆ ಸುಶಿಕ್ಷಿತ ಶಾಲಾ ಶಿಕ್ಷಕರ ಮಗನಾದ್ದರಿಂದ ಶಿಕ್ಷಣದ ಹಾದಿಯಲ್ಲಿ ಮುಂದುವರಿಯುವುದು ಸುಗಮವಾಯಿತು. ಧಾರವಾಡದ ಮುರುಘಾಮಠದ ಪ್ರಸಾದ ನಿಲಯದಲ್ಲಿ ಆಶ್ರಯ ದೊರೆತದ್ದರಿಂದ ಶಿಸ್ತು, ಸ್ವಾವಲಂಬನೆ, ಸಾಹಿತ್ಯಾಸಕ್ತಿ ಬೆಳೆಯಲು ಕಾರಣವಾಯಿತು. ಸಾಂಸ್ಕೃತಿಕ ಕೇಂದ್ರವೆನಿಸಿದ ಧಾರವಾಡದಲ್ಲಿಯೇ ಉನ್ನತ ಶಿಕ್ಷಣ, ಉದ್ಯೋಗ, ಬರವಣಿಗೆ ಹಾಗೂ ಸಾಹಿತ್ಯಿಕ ಚಟುವಟಿಕೆಗೆ ಚಾಲನೆ ದೊರಕಿತು. ಹಮ್ಮುಬಿಮ್ಮುಗಳಿಲ್ಲದ ಶಾಂತಾದೇವಿಯವರೊಂದಿಗೆ ನಡೆಸಿದ ನೆಮ್ಮದಿಯ ಕುಟುಂಬ ಜೀವನ ವೈಯಕ್ತಿಕ ಸಾಧನೆಗೆ ನೆರವಾಯಿತು. ಪ್ರೀತಿ ಸ್ನೇಹಗಳ ದಂಡೆಗಳ ನಡುವೆ ನನ್ನ ಬಾಳ ಹೊಳೆ ಪ್ರಶಾಂತವಾಗಿ ಸಾಗಿ ಬಂದಿದೆ. 'ಕವಿ' ಎಂಬ ಎರಡಕ್ಷರದ ಶಬ್ದ ಇಷ್ಟೊಂದು ಮನ್ನಣೆಗೆ ಪಾತ್ರವಾಗುವುದನ್ನು ನೋಡಿ ಒಮ್ಮೊಮ್ಮೆ ಆಶ್ಚರ್ಯವಾಗುತ್ತದೆ.

**ಕಾವ್ಯದಲ್ಲಿ ವಿಕಸನಶೀಲವಾದ ಜೀವಂತಗತಿಯುನ್ನು ತರಲು ನಿಮಗೆ ಸಾಧ್ಯವಾದುದು ಹೇಗೆ?**

**ಕಣವಿ :** ಕಾವ್ಯ ಸಹಜಸ್ಫೂರ್ತಿಯಿಂದ ಹೊರಹೊಮ್ಮಿ ಜೀವನದ ಲಯವನ್ನು ಕಂಡುಕೊಳ್ಳಲು ಹವಣಿಸಿದರೆ ಅದಕ್ಕೆ ಜೀವಂತಗತಿ ತಾನಾಗಿಯೇ ಒದಗಿ ಬರುತ್ತದೆ. ಭಾವ ಜೀವನದ ವಿಕಾಸ ವೈಚಾರಿಕತೆಯ ನೇಯ್ಗೆಯಲ್ಲಿ ಪ್ರಕಾಶಗೊಂಡ ಹಾಗೆಲ್ಲ ಅದು ವಿಕಸನಶೀಲವಾಗಬಹುದು. ಆದರೂ ಇದನ್ನು ವಿವರಿಸುವುದು ಕಷ್ಟ.

**ಪ್ರಯೋಗಶೀಲತೆ ನಿಮ್ಮ ಕಾವ್ಯದ ಪ್ರಮುಖ ಲಕ್ಷಣ. ಈ ಬಗ್ಗೆ ಹೇಳಿ.**

**ಕಣವಿ :** ಕವಿತೆ ಬರೆಯುವುದೇ ಮೂಲತಃ ಒಂದು ಹೊಸ ಅನುಭವ. ಹಿಂದೆ ಎಷ್ಟೋ ಕವಿತೆಗಳನ್ನು ಬರೆದಿದ್ದರೂ ಹೊಸ ಕವಿತೆ ಬರೆಯಲು ತೊಡಗಿದಾಗ ಹೊಸದಾಗಿ ಲೇಖನಿ ಹಿಡಿದಂತೆ ಭಾಸವಾಗುತ್ತದೆ. ಹೊಸ ಭಾವ ತನಗೆ ಹೊಸ ಭಾಷೆಯನ್ನೂ ಹೊಸ ರೀತಿಯನ್ನೂ ಅಪೇಕ್ಷಿಸುತ್ತದೆ. ಅದು ಯಶಸ್ವಿಯಾದರೆ ಹೊಸ ಪ್ರಯೋಗವಾಗಿ ಪರಿಣಮಿಸುತ್ತದೆ. ಕವಿತೆ ನನಗೆ ಅಭಿವ್ಯಕ್ತಿಯ ಅನನ್ಯ ಸಾಧನವಾಗಿರುವುದರಿಂದ ಪ್ರಯೋಗಶೀಲತೆ ಅದರ ಪ್ರಮುಖ ಲಕ್ಷಣವಾಗಿ ಕಂಡಿರಬೇಕು.

**ನಿಮ್ಮ ಕಾಲದ ಸಾಹಿತ್ಯ ಚಳವಳಿಗಳ ಸಂಬಂಧದ ಬಗ್ಗೆ ಹೇಳಿ.**

**ಕಣವಿ :** ಸಾಹಿತ್ಯಿಕ ಚಳುವಳಿಗಳಿಂದ ಬದಲಾವಣೆ ತಿರುವು ಸಾಧ್ಯವಿದೆ. ನವೋದಯದ ಗಾಢ ಸಂಬಂಧದಿಂದ ಬಂದ ನನಗೆ ಈ ಚಳವಳಿಗಳ ಧ್ಯೇಯ ಧೋರಣೆಗಳ ಬಗ್ಗೆ ಕುತೂಹಲವಿರಲಿಲ್ಲವೆಂದಲ್ಲ. ಅವುಗಳಿಗೆ ಪ್ರತಿಸ್ಪಂದಿಸಿಯೂ ಇದ್ದೇನೆ. ಆದರೆ ಅವುಗಳಿಗೆ ನನ್ನನ್ನು ಒಪ್ಪಿಸಿಕೊಳ್ಳಲಿಲ್ಲ. ನನ್ನ ವ್ಯಕ್ತಿತ್ವದ ಮೂಲದ್ರವ್ಯಕ್ಕೆ ಪೋಷಕವಾಗಬಲ್ಲ ಅವುಗಳ ಬಗ್ಗೆ ಆಯ್ಕೆ ನನ್ನದಾಗಿತ್ತು. ಬದ್ಧತೆ ಚಲನಶೀಲತೆಗೆ ಅಡ್ಡಿಯಾಗಬಹುದು. ಅದನ್ನು ಮೀರಿ ದೃಷ್ಟಿ ಹರಿಸಬೇಕು.

**ನಿಸರ್ಗ ಪ್ರೀತಿ ನಿಮ್ಮ ಕಾವ್ಯ ಜೀವನದುದ್ದಕ್ಕೂ ಉಳಿದಿದ್ದು ಹೇಗೆ?**

**ಕಣವಿ :** ನಾನು 'ನಿಸರ್ಗವೇ ಜೀವನ' ಎಂದು ಭಾವಿಸಿದವನು. ನಿತ್ಯವೂ ಅದರ ಒಡನಾಟ. ಅನುಭವ ಆಸ್ವಾದನೆಗಳೇ ನನಗೆ ಚೈತನ್ಯ ನೀಡುತ್ತವೆ. ನಿಸರ್ಗಕ್ಕೂ ನನಗೂ ಋಣಾನುಬಂಧ, ಬಿಡಿಸಲಾಗದ ಬೆಸುಗೆ. ಅದರಿಂದಲೇ ಮಾನವಲೋಕವನ್ನೂ ಪ್ರೀತಿಸುವಂತಾಯಿತು. ಎರಡರಲ್ಲೂ ನನಗೆ ಸಮಾನ ಶ್ರದ್ಧೆ, ಬದುಕಿನ ರಹಸ್ಯವನ್ನರಿಯಲು ಅದು ಸಹಕಾರಿ. ನಾನು ಜೀವನವನ್ನು ನೋಡುವ

ಕ್ರಮವೇ ಅದಾಗಿರುವುದರಿಂದ ಕಾವ್ಯ ಹೇಗೆ ಅದಕ್ಕೆ ಹೊರಗಾಗಬಲ್ಲುದು?

**ವಿಮರ್ಶಕರು ನಿಮ್ಮದು 'ಮೆಲುದನಿಯ ಕಾವ್ಯ' ಎನ್ನುತ್ತಾರಲ್ಲ...**

**ಕಣವಿ :** ಒಂದು ಕಾವ್ಯದ ಬಗ್ಗೆ ಎಲ್ಲ ವಿಮರ್ಶಕರೂ ಒಂದೇ ಅಭಿಪ್ರಾಯ ತಾಳಬೇಕೆಂದು ಅಪೇಕ್ಷಿಸುವುದು ತಪ್ಪಲ್ಲವೇ? ತಮಗೆ ಅನಿಸಿದ್ದನ್ನು, ತಾವು ಗುರುತಿಸುವ ಮುಖ್ಯ ಲಕ್ಷಣಗಳನ್ನು ಹೇಳುವಾಗ ಕಾವ್ಯದ ಮೇಲಿನ ಪ್ರೀತಿಯಿಂದಲೇ ಅವರು ಹೇಳುತ್ತಾರೆ. ನಮ್ಮ ಕಾವ್ಯದ ಸಂದರ್ಭದಲ್ಲಿ 'ಮೆಲುದನಿ'ಗೂ ಒಂದು ಸ್ಥಾನವಿದೆ. ಮೆಲುದನಿಯಿಂದಲೂ ಪ್ರತಿಭಟಿಸಬಹುದು. ವಿಡಂಬನೆ ಮಾಡಬಹುದು ಅಲ್ಲವೇ?

**ನಿಮ್ಮ 'ನೀವೇ ಪ್ರಮಾಣು' ಸಂಕಲನದ ಕೆಲವು ಸುನೀತಗಳು ಕ್ಲಿಷ್ಟವಾಗಿರುವುದಕ್ಕೆ ಅಭಿವ್ಯಕ್ತಿಯ ನಾವೀನ್ಯತೆ ಕಾರಣವೇ?**

**ಕಣವಿ :** ಚಿಂತನೆಯ ಮತ್ತು ಭಾವ ಸಾಹಚರ್ಯದ ಎಳೆಗಳು ಅಲ್ಲಿ ದಟ್ಟವಾಗಿ ಹೆಣೆದುಕೊಡಿರುವುದರಿಂದ ಹಾಗೆನಿಸಬಹುದು. ಲಕ್ಷ್ಯವಿಟ್ಟು ಓದಿದರೆ ಬಹುಶಃ ಕ್ಲಿಷ್ಟತೆ ತಲೆದೋರದು. ವ್ಯಕ್ತಿ-ಸಮಾಜ-ಸಾಹಿತ್ಯ ಮೂರರ ಪರಸ್ಪರ ಸಂಘರ್ಷದಲ್ಲಿ ಕವಿ ತನ್ನ ಹಾದಿಯನ್ನು ಸ್ಪಷ್ಟಗೊಳಿಸಿಕೊಳ್ಳುವ ಚಿತ್ರ ಈ ಸುನೀತಗಳಲ್ಲಿದೆ. 'ನೀವೇ ಪ್ರಮಾಣು'ಸುನೀತದ ಕೊನೆಯ ಎರಡು ಸಾಲುಗಳನ್ನು ಗಮನಿಸಿ.

> **ಹೊರಗಣವ ಒಳಗಣವನೆಂಬ ತರ್ಕದ ತೀಟೆ**
> **ಬಸವಳಿದು ಬೆಂಡಾಗಲೇ ರಸದಾಳಿ ಕಬ್ಬಾಗಲೇ**

**ನಿಮ್ಮ ಗದ್ಯ ಬರವಣಿಗೆ ಬಗ್ಗೆ ಒಂದಿಷ್ಟು.**

**ಕಣವಿ :** ಈ ಮೊದಲು ಐದಾರು ಬಂದಿವೆ. ಈಗ ಪ್ರಕಟವಾದ 'ಸಾಹಿತ್ಯ ಸಮಾಹಿತ'ದಲ್ಲಿಯ ಲೇಖನಗಳು ಸಾಹಚರ್ಯ, ಸಮಾಲೋಚನೆ ಮತ್ತು ಸಂಬೋಧನ ಎಂಬ ಮೂರು ಭಾಗಗಳಲ್ಲಿವೆ. ಹಿರಿಯರಾದ ಮಾಸ್ತಿಯವರನ್ನೊಳಗೊಂಡು ನಾಡು ನುಡಿಗೆ ದುಡಿದ ಹಾಗೂ ದುಡಿಯುತ್ತಿರುವ ಚೇತನಗಳ ದೀರ್ಘಕಾಲದ ಒಡನಾಟದ ಅನುಭವ ವ್ಯಕ್ತಿಚಿತ್ರದ ರೂಪದಲ್ಲಿ ಬಂದಿದ್ದರೆ, ವಿಮರ್ಶಾ ಲೇಖನಗಳು, ಕೆಲ ಭಾಷಣಗಳು ನನ್ನ ಅಭ್ಯಾಸದ ರೀತಿಯನ್ನು ಸೂಚಿಸಬಹುದು. ಆಯಾ ಕಾಲಘಟ್ಟದ ಸಾಂಸ್ಕೃತಿಕ ವಿವರಗಳಿಗೂ ಅವು ಎಡೆಗೊಟ್ಟಿವೆ. ಈಗ ಹೊರಬಂದಿರುವ 'ಸದ್ಭಾವ'ದ ಲೇಖನಗಳು ಇದಕ್ಕೆ ಪೂರಕವಾಗಿವೆ. ಕರ್ನಾಟಕ ಸರಕಾರದ ಪ್ರಕಟಣೆ ಯೋಜನೆಯಂತೆ ನನ್ನ ಸಮಗ್ರ ಗದ್ಯ ಸಂಪುಟ ಪ್ರಕಟವಾಗಿದೆ. ನನ್ನ ಸಾಹಿತ್ಯ ವಿಮರ್ಶೆ ಇದರಲ್ಲಿ ಅಂತಸ್ಥವಾಗಿದೆ.

**ಇಂದು ಕವಿಗಳ ಸಂಖ್ಯೆ ಹೆಚ್ಚು. ಕಾವ್ಯ ಸಂಕಲನಗಳೂ ಅಧಿಕ. ಆದರೆ ಕಾವ್ಯದ ಬಗೆಗೆ ಆಸಕ್ತಿ ಕಡಿಮೆ ಏಕೆ?**

**ಕಣವಿ :** ಇದೊಂದು ವಿರೋಧಾಭಾಸದ ಸಂಗತಿ. ವಿವಿಧ ಮಾಧ್ಯಮಗಳಲ್ಲಿ ಜನರ ಆಸಕ್ತಿ ಹಂಚಿ ಹೋಗಿರುವುದರಿಂದ ಕವಿತೆ ಮಾತ್ರವಲ್ಲ, ಒಟ್ಟಾರೆ ಓದುವ ಹವ್ಯಾಸ ಹಿಂದೆ ಸರಿದಿದೆ. ಆದರೆ ಕೇಳುಗರು ಇದ್ದಾರೆ. ಸುಗಮ ಸಂಗೀತ ಅದನ್ನು ತುಂಬಿಕೊಡುತ್ತದೆ. ಜನಕ್ಕೆ ಕಾವ್ಯದ ಬಗ್ಗೆ ಪ್ರೀತಿ ಇಲ್ಲವೆಂದಲ್ಲ. ಬಿಡಿಗವಿತೆಗಳನ್ನು ಅಭ್ಯಾಸ ಮಾಡುವ ಪ್ರವೃತ್ತಿ ಬಹಳ ಕಡಿಮೆಯಾಗಿದೆ.

**ಕವಿಗಳು ಕ್ಯಾಸೆಟ್, ಸಿಡಿ, ಸುಗಮ ಸಂಗೀತದ ಮೂಲಕ ಜನರ ಹತ್ತಿರ ಹೋಗಲು ಬಯಸಿದ್ದಾರೆ. ಕನ್ನಡ ಕಾವ್ಯಮತ್ತೆ ರಸಸಂಪ್ರದಾಯದತ್ತ ಮರುಳುತ್ತದೆಯೇ?**

**ಕಣವಿ :** ಕಾವ್ಯ ತೀರ ಉಸಿರುಗಟ್ಟಿಸುವ ಕೆಲಸವಾಗಬಾರದಲ್ಲವೆ, ಅದಕ್ಕಾಗಿ ಭಾವಗೀತೆಗಳು ಮತ್ತೆ ರಂಗಕ್ಕೆ ಬಂದಿರುವುದು ಒಳ್ಳೆಯದು. ಕಾವ್ಯದಿಂದ ಒದಗುವ ಸಂತೋಷಕ್ಕೆ ಚ್ಯುತಿ ಬರದಂತೆ ಸುಗಮ ಸಂಗೀತ ನೋಡಿಕೊಳ್ಳುತ್ತದೆ. ನಮ್ಮ ಕಾವ್ಯ ಪರಂಪರೆಯಲ್ಲಿ ಹಾಡು ಒಂದು ಮುಖ್ಯ ಅಂಗವಾಗಿರುವುದನ್ನು ಅಲ್ಲಗೆಳೆಯುವಂತಿಲ್ಲ. ಆದರೆ ಈಚಿನ ಭಾವಗೀತೆಗಳಲ್ಲಿ ನವೋದಯ ಕಾಲದ ಭಾವೋದ್ರೇಕವಿಲ್ಲ. ಸಮಕಾಲೀನತೆಯ ಸ್ಪಂದನದೊಂದಿಗೆ ಅಭಿವ್ಯಕ್ತಿಗೊಳಿಸುವ ಪ್ರಯತ್ನ ಕಂಡುಬರುತ್ತದೆ. ಇದು ರಸ ಸಂಪ್ರದಾಯದ ಪುನರಾವರ್ತನೆಯಲ್ಲ.

**ನಾಳಿನ ಕನ್ನಡ, ಕವಿ ಮತ್ತು ಕಾವ್ಯದ ಬಗ್ಗೆ...**

**ಕಣವಿ :** ಅಲ್ಲಿಲ್ಲಿ ಉದಯಿಸುತ್ತಿರುವ ಹೊಸ ಪ್ರತಿಭೆಗಳನ್ನು ಕಂಡು ನನಗೆ ಸಂತೋಷವಾಗಿದೆ. ಅದಕ್ಕೊಂದು ನಿಶ್ಚಿತ ಪ್ರವಾಹದ ಗತಿ ಬಂದಿರದಿದ್ದರೂ ಕನ್ನಡ ಕಾವ್ಯದ ಭವಿಷ್ಯ ಆಶಾದಾಯಕವಾಗಿದೆ. ನಮ್ಮ ವಿಮರ್ಶಕರ ಲಕ್ಷ್ಯ ಇದರ ಕಡೆಗೆ ಹೊರಳಬೇಕಾಗಿದೆ. ಹೊಸ ಕವಿಗಳನ್ನು ಲೇಖಕರನ್ನು ಉತ್ತೇಜಿಸುವ ವಾತಾವರಣ ನಿರ್ಮಾಣವಾಗಬೇಕಾಗಿದೆ. ವಿಮರ್ಶೆಯ ನಿಕಷಕ್ಕೆ ಒಡ್ಡುವ ಅಗತ್ಯವೂ ಇದೆ.

**ಗಡಿನಾಡಿನಲ್ಲಿ ಕನ್ನಡದ ಸ್ಥಿತಿಗತಿ, ಕನ್ನಡ ಭಿವೃದ್ಧಿ ಪ್ರಾಧಿಕಾರ ಮಾಡಬೇಕಾದ ಕಾರ್ಯದ ಬಗ್ಗೆ ತಮ್ಮ ಸಲಹೆ.**

**ಕಣವಿ :** ಧಾರವಾಡದ ಅಖಿಲ ಕರ್ನಾಟಕದ ಕೇಂದ್ರ ಕನ್ನಡ ಕ್ರಿಯಾ ಸಮಿತಿಯು ಕನ್ನಡ ಅಭಿವೃದ್ಧಿ ಪ್ರಾಧಿಕಾರ ಹಾಗೂ ಕನ್ನಡ ಪುಸ್ತಕ ಪ್ರಾಧಿಕಾರದ ಸಹಯೋಗದೊಂದಿಗೆ ಮಹಾರಾಷ್ಟ್ರದ ಜತ್ತ ತಾಲೂಕಿನಲ್ಲಿ ನಾವು ಇತ್ತೀಚೆಗೆ ಪ್ರವಾಸ

ಕೈಕೊಂಡಿದ್ದಾಗ ಅಲ್ಲಿಯ ಶಾಲೆಗಳಲ್ಲಿ ಕನ್ನಡ ಉಳಿಸಿಕೊಳ್ಳಲು ನಡೆಸಿದ ಪ್ರಯತ್ನಗಳ ಪ್ರತ್ಯಕ್ಷ ಅರಿವಾಯಿತು. ನಾವು50 ಕನ್ನಡ ಶಾಲೆಗಳಿಗೆ 12 ಲಕ್ಷ ರೂ. ಮೌಲ್ಯದ ಇಪ್ಪತ್ತು ಸಾವಿರ ಕನ್ನಡ ಪುಸ್ತಕಗಳನ್ನು ಉಚಿತವಾಗಿ ವಿತರಿಸಿದ ಸಂದರ್ಭದಲ್ಲಿ ಶಾಲಾ ಮಕ್ಕಳು, ಶಿಕ್ಷಕ ವರ್ಗ ಹಾಗೂ ಜನತೆ ತೋರಿಸಿದ ಉತ್ಸಾಹ ಮೇರೆ ಮೀರಿತ್ತು. ಮಹಾರಾಷ್ಟ್ರ ಸರಕಾರ ಮರಾಠಿ ಭಾಷೆಯಲ್ಲಿ ಅಂಗನವಾಡಿಗಳನ್ನು ಪ್ರಾರಂಭಿಸುವ ಮೂಲಕ ಕನ್ನಡವನ್ನು ಬೇರುಸಹಿತ ಕಿತ್ತು ಹಾಕುವ ಪ್ರಯತ್ನ ನಡೆಸಿರುವಾಗ ಈ ಸಂಸ್ಥೆ ಕನ್ನಡ ಬಾಲವಿಹಾರವನ್ನು ಸರಕಾರದ ಆರ್ಥಿಕ ನೆರವು ಇಲ್ಲದೆ ಪ್ರಾರಂಭಿಸಿದೆ. ಸರಕಾರ ಇಂಥ ಸಂಸ್ಥೆಗಳಿಗೆ ಆರ್ಥಿಕ ನೆರವು ನೀಡಬೇಕು. ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲೆಗಳ ಕನ್ನಡ ಮಾಧ್ಯಮದ ಶಿಕ್ಷಕರಿಗೆ ಕನ್ನಡ ಮಾಧ್ಯಮದಲ್ಲಿಯೇ ತರಬೇತಿ ನೀಡುವಂತೆ ಮಹಾರಾಷ್ಟ್ರ ಸರಕಾರದ ಮೇಲೆ ಒತ್ತಾಯ ತರಬೇಕು. ಗಡಿನಾಡ ಕನ್ನಡಿಗರಿಗಾಗಿ ಕರ್ನಾಟಕದ ಮುಕ್ತ ವಿಶ್ವವಿದ್ಯಾಲಯದಲ್ಲಿ ಅಂಚೆಯ ಮೂಲಕ ಬಿ.ಎಡ್ ಎಂ.ಎಡ್ ತರಗತಿಗಳಿಗೆ ಅವಕಾಶ ಕಲ್ಪಿಸಬೇಕು. ಕನ್ನಡ ಅಭಿವೃದ್ಧಿ ಪ್ರಾಧಿಕಾರದ ನೂತನ ಅಧ್ಯಕ್ಷರು ಗಡಿನಾಡಿನ ಕನ್ನಡ ಸಮಸ್ಯೆಗಳ ಬಗ್ಗೆ ಒಳನಾಡಿನ ಕನ್ನಡ ಸಮಸ್ಯೆಗಳ ಬಗ್ಗೆ ತೀವ್ರವಾಗಿ ಸ್ಪಂದಿಸಿ ಕನ್ನಡದ ಸ್ಥಾನ, ಪ್ರತಿಷ್ಠೆ ಹೆಚ್ಚುವಂತೆ ಮಾಡಬೇಕು. ಶಿಕ್ಷಣದಲ್ಲಿ ಕನ್ನಡ ಭದ್ರವಾಗಬೇಕಾದರೆ ಶಿಕ್ಷಕರ ನೇಮಕಾತಿ ತುರ್ತಾಗಿ ಆಗಬೇಕಾಗಿದೆ. ರಾಜ್ಯದ ಶಾಲೆ ಕಾಲೇಜುಗಳಲ್ಲಿ ಕನ್ನಡ ಅಧ್ಯಾಪಕರ ನೇಮಕಾತಿ ಆಗದೇ ಕನ್ನಡ ಶಿಕ್ಷಣಕ್ಕೆ ಬಹಳ ತೊಂದರೆಯಾಗಿದೆ.

**ಸರ್ಕಾರದ ಈಚಿನ ಭಾಷಾನೀತಿಯ ಬಗ್ಗೆ ನಿಮ್ಮ ಅಭಿಪ್ರಾಯವೇನು?**

**ಕಣವಿ :** ಆರನೇ ತರಗತಿಯಿಂದ ಇಂಗ್ಲೀಷ್ ಮಾಧ್ಯಮ ಶಾಲೆಗಳನ್ನು ಹೋಬಳಿ ಮಟ್ಟದಲ್ಲಿ ಪ್ರಾರಂಭಿಸುವ ಸರ್ಕಾರದ ವಿಚಾರ ಅವೈಜ್ಞಾನಿಕ ಮತ್ತು ಆಘಾತಕಾರಿಯಾದದ್ದು, ಕನ್ನಡ ಮಾಧ್ಯಮದ ಶಾಲೆಗಳಲ್ಲಿ ಕಲಿಕೆಯ ಏರ್ಪಾಡು ಸರಿಯಿಲ್ಲದಿದ್ದರೆ ಅದನ್ನು ಮೇಲಕ್ಕೆತ್ತುವ ಮತ್ತು ಗುಣಮಟ್ಟವನ್ನು ಸುಧಾರಿಸುವ ತೀವ್ರ ಕ್ರಮಗಳನ್ನು ತೆಗೆದುಕೊಳ್ಳಬೇಕು. ಶಿಕ್ಷಣದ ವ್ಯಾಪಾರೀಕರಣದ ಹಾವಳಿಯನ್ನು ತಡೆಯಲು ಕನ್ನಡ ಶಾಲೆಗಳನ್ನು ಬಲಪಡಿಸಬೇಕು. ಸರ್ಕಾರವೇ ಇಂಗ್ಲಿಷ್ ಮಾಧ್ಯಮ ಶಾಲೆಗಳನ್ನು ತೆರೆಯುತ್ತ ಹೋದರೆ ಕನ್ನಡ ಮಾಧ್ಯಮ ಶಾಲೆಗಳು ಬಾಗಿಲು ಮುಚ್ಚಬೇಕಾಗಿ ಬರುತ್ತದೆ. ಆರನೇ ತರಗತಿಯಿಂದ ದೇಶವ್ಯಾಪಿ ಏಕರೂಪ ಶಿಕ್ಷಣಕ್ಕೆ ರಾಷ್ಟ್ರೀಯ ನೀತಿ ರೂಪಿಸಿದರೆ ಇಂಥ ಸಮಸ್ಯೆ ಏಳುವುದಿಲ್ಲ. ಭಾಷೆ ಕೇವಲ ಸಂಪರ್ಕ ಸಾಧನವಲ್ಲ. ಅದು ಬದುಕುವ ಕ್ರಮ ಮತ್ತುಸಾಮಾಜೀಕರಣ ಪ್ರಕ್ರಿಯೆಯ ಸಾಧನ.

ಭಾಷೆಯನ್ನು ಬಿಟ್ಟುಕೊಡುವುದೆಂದರೆ ನಮ್ಮ ಜೀವನಕ್ರಮವನ್ನು ಪರಕೀಯರಿಗೆ ಒಪ್ಪಿಸಿದಂತಲ್ಲವೇ? ಕೆಳಹಂತದಿಂದಲೆ ಇಂಗ್ಲಿಷ್‌ನ್ನು ಒಂದು ಭಾಷೆಯಾಗಿ ಕಲಿಸುವುದಕ್ಕೆ ಯಾವುದೇ ಅಭ್ಯಂತರವಿಲ್ಲ. ಸರ್ವೋಚ್ಚ ನ್ಯಾಯಾಲಯಲ್ಲಿನ ಮಾತೃಭಾಷಾ ಮಾಧ್ಯಮದ ಮೊಕದ್ದಮೆ ಬಗ್ಗೆ ಸರ್ಕಾರ ವಿಶೇಷ ಗಮನ ಹರಿಸಬೇಕು.

**ಭ್ರಷ್ಟತೆಯ ಜಾಲದಲ್ಲಿ ಸಿಲುಕಿಕೊಂಡ ದೇಶವನ್ನು ಪಾರು ಮಾಡುವುದು ಹೇಗೆ?**

**ಕಣವಿ :** ನಮ್ಮ ದೇಶದಲ್ಲಿ ಭ್ರಷ್ಟಾಚಾರ ಎಲ್ಲೆಡೆ ತುಂಬಿಕೊಂಡಿದೆ. ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಡಿದವರು, ಹಿರಿಯರೂ ನೈರಾಶ್ಯದ ವಾತಾವರಣದಲ್ಲಿದ್ದಾರೆ. ಲಂಚ ಕೊಡದಿದ್ದರೆ ಕೆಲಸವೇ ಆಗುವುದಿಲ್ಲ ಎಂಬ ಸ್ಥಿತಿಗೆ ಬಂದು ಅದರಲ್ಲಿ ಪಾಲುದಾರರಾಗುವ ಸಂದರ್ಭ ಬಂದಿರುವುದು ಶೋಚನೀಯ. ನಮ್ಮ ರಾಷ್ಟ್ರಕ್ಕೆ ಪ್ರಾಮಾಣಿಕ ನಾಯಕಬೇಕು. ಈ ಕಾಲಕ್ಕೆ ತಕ್ಕಂತೆ ಗಾಂಧಿ, ಅಂಬೇಡ್ಕರ, ಜೆ.ಪಿ., ಲೋಹಿಯಾರಂಥ ರಾಷ್ಟ್ರ ನಿರ್ಮಾಪಕರು ಬೇಕಾಗಿದ್ದಾರೆ. ಭ್ರಷ್ಟಾಚಾರ, ಜನಶೋಷಣೆ ನಿಲ್ಲಿಸಲು ಸಮಗ್ರಕ್ರಾಂತಿ ಆಗಬೇಕು.

'ವಿಜಯವಾಣಿ :

ವಿಜಯವಿಹಾರ' ೨-೯-೨೦೧೨

*

# ಚೆನ್ನವೀರ ಕಣವಿ ಕೃತಿಸೂಚಿ

## ಕಾವ್ಯ

| ಕೃತಿ | ಪ್ರಕಾಶಕರು | ವರ್ಷ |
|---|---|---|
| ಕಾವ್ಯಾಕ್ಷಿ | : ಕಲ್ಪನಾ ಗ್ರಂಥಮಾಲೆ, ಧಾರವಾಡ | ೧೯೪೯ |
| ಭಾವಜೀವಿ | : ಪ್ರಗತಿಶೀಲ ಸಾಹಿತ್ಯಮಾಲೆ, ಧಾರವಾಡ | ೧೯೫೦ |
| ಆಕಾಶಬುಟ್ಟಿ | : ಪ್ರತಿಭಾ ಗ್ರಂಥಮಾಲೆ, ಧಾರವಾಡ | ೧೯೫೩ |
| ಮಧುಚಂದ್ರ | : ಶಾರದಾ ಪ್ರಕಟನಾಲಯ, ಬೆಂಗಳೂರು | ೧೯೫೪ |
| ದೀಪಧಾರಿ | : ಸುರುಚಿ ಪ್ರಕಾಶನ, ಮೈಸೂರು | ೧೯೫೬ |
| ಮಣ್ಣಿನ ಮೆರವಣಿಗೆ | : ಶಾರದಾ ಪ್ರಕಟನಾಲಾಯ, ಬೆಂಗಳೂರು | ೧೯೬೦ |
| ನೆಲ-ಮುಗಿಲು | : ಶಾರದಾ ಮಂದಿರ, ಮೈಸೂರು | ೧೯೬೫, ೧೯೭೧ |
| ಎರಡು ದಡ | : ಗೀತಾ ಬುಕ್ ಹೌಸ್, ಮೈಸೂರು | ೧೯೬೯ |
| ನಗರದಲ್ಲಿ ನೆರಳು | : ತ. ವೆಂ. ಸ್ಮಾರಕ ಗ್ರಂಥಮಾಲೆ, ಮೈಸೂರು | ೧೯೭೪ |
| ಚಿರಂತನ ದಾಹ (ಆಯ್ದ ಕವನಗಳು) | : ವಿಶ್ವ ಕನ್ನಡ ಸಮ್ಮೇಳನ, ಮೈಸೂರು | ೧೯೮೯ |
| ಜೀವಧ್ವನಿ | : ಐ.ಬಿ.ಎಚ್. ಪ್ರಕಾಶನ, ಬೆಂಗಳೂರು | ೧೯೮೦, ೧೯೮೩ |
| ಹಕ್ಕಿಪುಚ್ಚ | : ಭಾರತೀ ಸಾಹಿತ್ಯ ಭಂಡಾರ, ವಿಜಾಪುರ | ೧೯೮೫ |
| ಕಾರ್ತಿಕದ ಮೋಡ | : ಶಾರದಾ ಪ್ರಕಟನಾಲಯ, ಬೆಂಗಳೂರು | ೧೯೮೬ |
| ಹೂವು ಹೊರಳುವವು ಸೂರ್ಯನ ಕಡೆಗೆ | : ಐ.ಬಿ.ಎಚ್. ಪ್ರಕಾಶನ, ಬೆಂಗಳೂರು (ವಿವಿಧ ಪ್ರಕಾಶಕರಿಂದ ೫ ಆವೃತ್ತಿಗಳು) | ೧೯೮೭ |
| ಹೊಂಬೆಳಕು | : (ಮೊದಲ ೧೨ ಸಂಗ್ರಹಗಳ ಸಂಪುಟ) ಐ.ಬಿ.ಎಚ್. ಪ್ರಕಾಶನ, ಬೆಂಗಳೂರು | ೧೯೮೯ |
| ಜೀನಿಯಾ | : ಸ್ನೇಹ ಪ್ರಕಾಶನ, ಬೆಂಗಳೂರು | ೧೯೯೦ |

| | | |
|---|---|---|
| ಶಿಶಿರದಲ್ಲಿ ಬಂದ ಸ್ನೇಹಿತ : | ಕನ್ನಡ ಸಂಘ ಕ್ರೈಸ್ತ ಕಾಲೇಜು, ಬೆಂಗಳೂರು | ೧೯೯೪ |
| ಕಣವಿ ಸಮಗ್ರ ಕಾವ್ಯ : | ವೀರಶೈವ ಅಧ್ಯಯನ ಅಕಾಡೆಮಿ, ಬೆಳಗಾವಿ | ೧೯೯೬ |
| ಬರೆದು ತೀರದ ಬದುಕು: | ತ.ವೆಂ. ಸ್ಮಾರಕ ಗ್ರಂಥಮಾಲೆ, ಮೈಸೂರು | ೨೦೦೦ |
| ಸುನೀತ ಸಂಪದ : | ಲೋಹಿಯಾ ಪ್ರಕಾಶನ ಬಳ್ಳಾರಿ | ೨೦೦೨ |
| ಕಣವಿ ಸಮಗ್ರ ಕಾವ್ಯ : | ಸಂವಹನ ಪ್ರಕಾಶನ, ಮೈಸೂರು | ೨೦೦೩ |
| ಚೆಂಬೆಳಕು : | ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ | ೨೦೦೫ |
| ಚಿಣ್ಣರ ಲೋಕವ ತೆರೆಯೋಣ : | (ಮಕ್ಕಳ ಪದ್ಯಗಳು) | ೨೦೦೬ |
| | ಸಾಹಿತ್ಯ ಪ್ರಕಾಶನ, ಹುಬ್ಬಳ್ಳಿ | ೨೦೦೮, ೨೦೧೪ |
| ಮಾನಸ ಪೂಜೆ : | ಸಾಹಿತ್ಯ ಸಿರಿ, ಸಿರಿಗೆರೆ | ೨೦೦೬ |
| ನೀವೇ ಪ್ರಮಾಣು : | ಸುಮುಖ ಪ್ರಕಾಶನ, ಬೆಂಗಳೂರು | ೨೦೦೭ |
| ಕಣವಿ ಚುಟುಕುಗಳು : | ವೈದ್ಯವಾರ್ತಾ ಪ್ರಕಾಶನ, ಮೈಸೂರು | ೨೦೦೯ |
| ಜೀವ-ಜೀವಾಳ (ಆಯ್ದ ಕವನಗಳು) : | ಸಪ್ನ ಬುಕ್ ಹೌಸ್, ಬೆಂಗಳೂರು | ೨೦೧೧ |
| ಭೂಮಿ-ಬದುಕು : | ಸಪ್ನ ಬುಕ್ ಹೌಸ್, ಬೆಂಗಳೂರು | ೨೦೧೨ |
| ಕಣವಿ ಕಾವ್ಯ ಭಂಡಾರ: | (ಎರಡು ಸಂಪುಟಗಳು) | |
| | ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು | ೨೦೦೯ |

## ಗದ್ಯ

### ವಿಮರ್ಶೆ-ಪ್ರಬಂಧ ಇತ್ಯಾದಿ

| | | |
|---|---|---|
| ಸಾಹಿತ್ಯ ಚಿಂತನ : | ಮಿಂಚಿನಬಳ್ಳಿ ಗ್ರಂಥಮಾಲೆ, ಧಾರವಾಡ | ೧೯೬೬ |
| ಕಾವ್ಯಾನುಸಂಧಾನ : | ತ.ವೆಂ. ಸ್ಮಾರಕ ಗ್ರಂಥಮಾಲೆ, ಮೈಸೂರು | ೧೯೭೧ |
| ಸಮಾಹಿತ : | ಭಾಂಡಗೆ ಪ್ರಕಾಶನ, ಗದಗ | ೧೯೭೭ |
| ಮಧುರಚೆನ್ನ : | ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು | ೧೯೮೪ |
| ಸಮತೋಲನ : | ಮಿಂಚಿನಬಳ್ಳಿ ಗ್ರಂಥಮಾಲೆ, ಹುಬ್ಬಳ್ಳಿ | ೧೯೮೯ |
| ವಚನಾಂತರಂಗ : | ಮುರುಘರಾಜೇಂದ್ರ ಬೃಹನ್ಮಠ, ಚಿತ್ರದುರ್ಗ | ೧೯೯೯ |
| ಶುಭನುಡಿಯೆ ಹಕ್ಕಿ : | ಸಾಹಿತ್ಯ ಪ್ರಕಾಶನ, ಹುಬ್ಬಳ್ಳಿ | ೨೦೦೦ |
| ಸಾಹಿತ್ಯ ಸಮಾಹಿತ : | ಕನ್ನಡ ವಿಶ್ವವಿದ್ಯಾಲಯ, ಹಂಪಿ | ೨೦೦೬ |
| ಸದ್ಭಾವ : | ಸಂವಹನ ಪ್ರಕಾಶನ, ಮೈಸೂರು | ೨೦೦೮ |

ಕಣವಿ ಸಮಗ್ರ ಗದ್ಯ : (ಎರಡು ಸಂಪುಟಗಳು)
ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು ೨೦೧೦

ಬೇಂದ್ರೆ ಕಾವ್ಯದ ಕುಹುಕ್ಕುಹೂ : ಡಾ. ದ.ರಾ. ಬೇಂದ್ರೆ
ರಾಷ್ಟ್ರೀಯ ಸ್ಮಾರಕ ಟ್ರಸ್ಟ್, ಧಾರವಾಡ ೨೦೧೨

ಅವಿನಾಭಾವ : ಕನ್ನಡನಾಡು ಲೇಖಕರ ಮತ್ತು ಓದುಗರ
ಸಹಕಾರ ಸಂಘ ನಿಯಮಿತ, ಗುಲಬರ್ಗಾ ೨೦೧೪

ಸ್ಮೃತಿ ಸೌರಭ : ಮನೋಹರ ಗ್ರಂಥಮಾಲಾ, ಧಾರವಾಡ ೨೦೧೬

## ಸಂಪಾದನೆ

ನವಿಲೂರು ಮನೆಯಿಂದ (ಇತರರೊಡನೆ) ೧೯೫೨

ನವ್ಯ ಧ್ವನಿ (ಇತರರೊಡನೆ) : ಸಮಾಜ ಪುಸ್ತಕಾಲಯ, ಧಾರವಾಡ ೧೯೫೬

ನೈವೇದ್ಯ : ಬಾಲ ಲೀಲಾ ಮಹಾಂತ ಶಿವಯೋಗೀಶ್ವರ
ಗ್ರಂಥಮಾಲೆ, ಧಾರವಾಡ ೧೯೬೦

ನಮ್ಮೆಲ್ಲರ ನೆಹರು (ಇತರರೊಡನೆ) ಭಾವಸಂಗಮ,
ಹಿಂದಿ ಪ್ರಚಾರ ಸಭಾ ಧಾರವಾಡ ೧೯೬೪

ಕನ್ನಡದ ಕಾಲು ಶತಮಾನ (ಇತರರೊಡನೆ) :
ಮಿಂಚಿನಬಳ್ಳಿ ಗ್ರಂಥಮಾಲೆ, ಧಾರವಾಡ ೧೯೬೫

ಸಿದ್ಧಿ ವಿನಾಯಕ ಮೋದಕ : ಗೋಕಾಕ ಷಷ್ಠ್ಯಬ್ದಿಪೂರ್ತಿ ಅಭಿನಂದನ ಸಮಿತಿ,
ಧಾರವಾಡ ೧೯೬೯

ಜೀವನಸಿದ್ಧಿ (ಇತರರೊಡನೆ) : ಎಸ್. ಶೆಟ್ಟರ, ಕೊಪ್ಪಳ ೧೯೭೧

ಆಧುನಿಕ ಕನ್ನಡ ಕಾವ್ಯ (ಇತರರೊಡನೆ) Modern Kannada Poetry
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ೧೯೭೭

ಕವಿತೆಗಳು : ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು ೧೯೮೦

ಸುವರ್ಣ ಸಂಪುಟ (ಇತರರೊಡನೆ) : ಮೈಸೂರು ವಿಶ್ವವಿದ್ಯಾನಿಲಯ ೧೯೮೦

ರತ್ನಸಂಪುಟ (ಇತರರೊಡನೆ) : ಮೈಸೂರು ವಿಶ್ವವಿದ್ಯಾನಿಲಯ ೧೯೮೫

ದಶವಾರ್ಷಿಕ ಕವಿತೆಗಳು (ಇತರರೊಡನೆ) :
ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು ೧೯೮೫

ಎರಡು ದಶಕದ ಕವಿತೆಗಳು (ಇತರರೊಡನೆ) :
ಕೇಂದ್ರ ಸಾಹಿತ್ಯ ಅಕಾಡೆಮಿ, ನವದೆಹಲಿ

ಬಾಬಾ ಫರೀದ್ : (ಭಾಷಾಂತರ) ಕೇಂದ್ರ ಸಾಹಿತ್ಯ ಅಕಾಡೆಮಿ, ನವದೆಹಲಿ೧೯೯೩

ಅನುಭಾವ ಪಥ (ಇತರರೊಡನೆ) : ಉದ್ಧಾನ ಶ್ರೀ ಪ್ರಕಾಶನ,
ಸಿದ್ಧಗಂಗಾಮಠ, ತುಮಕೂರು ೨೦೧೦

## ಚೆನ್ನವೀರ ಕಣವಿಯವರನ್ನು ಕುರಿತ ಗ್ರಂಥಗಳು

ಚೆನ್ನವೀರ ಕಣವಿ ಕಾವ್ಯ ದೃಷ್ಟಿ : ಗೌರೀಶ ಕಾಯ್ಕಿಣಿ,
ಕರ್ನಾಟಕ ವಿದ್ಯಾವರ್ಧಕ ಸಂಘ, ಧಾರವಾಡ ೧೯೭೮

ಚೆಂಬೆಳಕು (ಅಭಿನಂದನ ಗ್ರಂಥ) : ಸಂ : ಡಾ. ಗುರುಲಿಂಗ ಕಾಪಸೆ, ೧೯೮೦

ಚೆನ್ನವೀರ ಕಣವಿ ಹಾಗೂ ಜಿ.ಎಸ್. ಶಿವರುದ್ರಪ್ಪ ಅವರ ಕಾವ್ಯ :
ಸಂ : ಎ.ಬಿ. ಹಿರೇಮಠ ಅನ್ನದಾನೀಶ್ವರ ಕಾಲೇಜು, ಮುಂಡರಗಿ ೧೯೯೧

ಕಣವಿ ಸಾಹಿತ್ಯ ಸಂಪದ : ಸಂ: ನಿಜಲಿಂಗೇಶ್ವರ ಪ್ರಕಾಶನ ನಿಡಸೋಸಿ ೧೯೯೪

ಚೆನ್ನವೀರ ಕಣವಿ ಬದುಕು-ಬರಹ : ಕೀರ್ತಿನಾಥ ಕುರ್ತಕೋಟಿ
ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ೧೯೯೬

ಕವಿ ಕಣವಿ : ಡಾ. ಜಿ.ಎಂ. ಹೆಗಡೆ
ನೆಲೆ ಪ್ರಕಾಶನ, ಸಿಂದಗಿ ೧೯೯೬, ೧೯೯೯, ೨೦೦೫

ಮುಗಿಯದ ಹಾಡು (ಕಾವ್ಯಾಭಿನಂದನ) : ಸಂ. ಡಾ. ಗುರುಲಿಂಗ ಕಾಪಸೆ
ರಾಘವೇಂದ್ರ ಪ್ರಕಾಶನ, ಅಂಕೋಲಾ ೧೯೯೮

ಕಣವಿ ಮತ್ತು ಆಧುನಿಕ ಕಾವ್ಯ ಪರಂಪರೆ : (ಪಿಎಚ್.ಡಿ. ಪ್ರಬಂಧ) ೨೦೦೦
ಡಾ. ಗುಂಡಣ್ಣ ಕಲ್ಬುರ್ಗಿ : ಸೌಜನ್ಯ ಪ್ರಕಾಶನ, ಮೂಡಲಗಿ

ಬೆಳ್ಳಿ ತೇರಿನ ದಾರಿ (ವಿವಿಧ ವಿಮರ್ಶಕರು) : ಸಂ: ಡಾ. ಗುರುಲಿಂಗ ಕಾಪಸೆ,
ಡಾ. ಜಿ.ಎಂ. ಹೆಗಡೆ ೨೦೦೩

ಕವಿ ಕಣವಿ ಸಂದರ್ಶನ : ಸಂ : ಡಾ. ಜಿ.ಎಂ. ಹೆಗಡೆ,
ಕನ್ನಡ ಜಾಗೃತಿ ಗ್ರಂಥ ಮಾಲೆ, ಚಿಂಚಣಿ ೨೦೦೩

ಕಣವಿಯವರ ಕವಿತೆ : ಹೊಸ ಓದು : ಸಂ. ಡಾ. ಗುರುಲಿಂಗ ಕಾಪಸೆ
ಡಾ. ಜಿ.ಎಂ. ಹೆಗಡೆ ಸುಮುಖ ಪ್ರಕಾಶನ, ಬೆಂಗಳೂರು ೨೦೦೮

ಕಣವಿಯವರ ಆಯ್ದ ಕವಿತೆಗಳ ಅನುಸಂಧಾನ :
ಸಂ : ಡಾ. ಗುರುಲಿಂಗ ಕಾಪಸೆ, ಡಾ. ಜಿ.ಎಂ. ಹೆಗಡೆ
ಸಪ್ನ ಬುಕ್ ಹೌಸ್, ಬೆಂಗಳೂರು ೨೦೧೩

ಚೆನ್ನವೀರ ಕಣವಿ : ಡಾ. ಗುರುಲಿಂಗ ಕಾಪಸೆ,
ನವ ಕರ್ನಾಟಕ ಪಬ್ಲಿಕೇಶನ್ಸ್, ಬೆಂಗಳೂರು ೨೦೦೯, ೨೦೧೨

Inviting Life : (ಆಯ್ದ ಕವಿತೆಗಳ ಇಂಗ್ಲಿಷ್ ಅನುವಾದ) ೨೦೦೩
ಸಂ : ಡಾ. ಕೆ. ರಾಘವೇಂದ್ರ ರಾವ್,
ಕೇಂದ್ರ ಸಾಹಿತ್ಯ ಅಕಾಡೆಮಿ, ನವದೆಹಲಿ

ಚೆಂಬೆಳಕಿನ ಕವಿ ಚೆನ್ನವೀರ ಕಣವಿ
ಡಾ. ಜಿ.ಎಂ. ಹೆಗಡೆ
ಡಾ. ಎಂ.ಎಂ. ಕಲಬುರ್ಗಿ ಅಧ್ಯಯನ ಸಂಸ್ಥೆ ಗದಗ ೨೦೧೭

ಚೆನ್ನವೀರ ಕಣವಿ ಸಂದರ್ಶನ
ಸಂ : ಡಾ. ಜಿ.ಎಂ. ಹೆಗಡೆ
ಸಂವಹನ ಪ್ರಕಾಶನ ಮೈಸೂರು ೨೦೧೮

# ನಮ್ಮ ಸಂಸ್ಥೆಯ ಉತ್ತಮ ಪ್ರಕಟಣೆಗಳು

| ಕ್ರ.ಸಂ. | ಪುಸ್ತಕದ ಹೆಸರು | ಲೇಖಕರ ಹೆಸರು | ಬೆಲೆ |
|---|---|---|---|
| 1 | ನಡುರಾತ್ರಿಯಲ್ಲಿ ಸ್ವಾತಂತ್ರ್ಯ | ಹೆಚ್.ಆರ್. ಚಂದ್ರವದನರಾವ್ | 150-00 |
| 2 | ರಾಜರ್ಷಿ ನಾಲ್ವಡಿ ಕೃಷ್ಣರಾಜ ಒಡೆಯರು | ಸೇವಂತಿ ಡಿ. ರೈ. | 75-00 |
| 3 | ಕನ್ನಡ ವಕ್ರೋಕ್ತಿ ಜೀವಿತ | ಆರ್. ಲಕ್ಷ್ಮೀನಾರಾಯಣ | 375-00 |
| 4 | ಬಳಕೆಯ ಕನ್ನಡ | ಪ್ರೊ. ಹೆಚ್. ಸಿದ್ದಲಿಂಗಯ್ಯ | 105-00 |
| 5 | ಕಾನೂನು ಕನ್ನಡ | ಪ್ರೊ. ಹೆಚ್. ಸಿದ್ದಲಿಂಗಯ್ಯ | 75-00 |
| 6 | ಸಮಗ್ರ ಕನ್ನಡ | ಪ್ರೊ. ಹೆಚ್. ಸಿದ್ದಲಿಂಗಯ್ಯ | 80-00 |
| 7 | ಜಗದ ನಂಟ | ಪ್ರೊ. ಚಂದ್ರಶೇಖರಯ್ಯ | 150-00 |
| 8 | ಗಾಂಧೀಜಿ ಬದುಕು ಬರಹ | ಪಿ. ಎಸ್. ಚಂದ್ರಣ್ಣ | 150-00 |
| 9 | ಭಗವಾನ್ ಶ್ರೀ ರಮಣ ವಚನಾಮೃತ | ಡಿ.ಎ. ಶಂಕರ್ | 105-00 |
| 10 | ಸಂಸ್ಕೃತ ಸೂಕ್ತಿ ಸಂಗ್ರಹ | ವಿದ್ವಾನ್ ಎಚ್.ವಿ. ನಾಗರಾಜರಾವ್ | 100-00 |
| 11 | ಅಲಂಕಾರ ಸರ್ವಸ್ವಮ್ | ವಿದ್ವಾನ್ ಎಚ್.ವಿ. ನಾಗರಾಜರಾವ್ | 200-00 |
| 12 | ಯುಗದ ಉತ್ಸಾಹ | ಡಾ. ಎಂ. ಚಿದಾನಂದಮೂರ್ತಿ | 350-00 |
| 13 | ಗಿರೀಶ ಕಾರ್ನಾಡರ ನಾಟಕಗಳು ಕನ್ನಡದ ಪ್ರತಿಕ್ರಿಯೆ | ಕೆ. ಮರುಳಸಿದ್ದಪ್ಪ | 350-00 |
| 14 | ಭಗವಾನ್ ಬುದ್ಧ ವಚನಾಮೃತ | ಡಿ.ಎ. ಶಂಕರ್ | 80-00 |
| 15 | ಇಂಗ್ಲೀಷ್-ಕನ್ನಡ ರಸಾಯನಶಾಸ್ತ್ರ ನಿಘಂಟು | ಆರ್.ಎಲ್. ಮಂಗಳೂರ್ | 500-00 |
| 16 | ಗೃಹವೈದ್ಯ | ಡಾ. ರಾಜೇಂದ್ರಪ್ರಸಾದ್ | 40-00 |
| 17 | ನೀರು ನೀರಡಿಸಿತ್ತು | ಡಾ. ಎಂ.ಎಂ. ಕಲಬುರ್ಗಿ | 50-00 |
| 18 | ಕ್ಯಾನ್ಸರನ್ನು ಗೆದ್ದ ಸಂತಸ | ಕೃಷ್ಣವಟ್ಟಂ | 100-00 |
| 19 | ಮಹಾಕವಿ ಹರಿಹರನ ಕನ್ನಡ ನಾಡಿನ ಶರಣರು | ಡಿ. ನಾಗೇಂದ್ರಪ್ಪ | 120-00 |
| 20 | ಮಹಾಕವಿ ಹರಿಹರನ ಪುರಾತನ ಶರಣರು | ಡಿ. ನಾಗೇಂದ್ರಪ್ಪ | 180-00 |
| 21 | ಮಹಾಯಾತ್ರಿಕ | ಮಲೆಯೂರು ಗುರುಸ್ವಾಮಿ | 250-00 |
| 22 | ರಾಜ ಒಡೆಯರ್ | ಎಂ.ಎಸ್. ವೇದಾ | 180-00 |
| 23 | ಜೈನಪುರಾಣ ಕಥಾಪ್ರಪಂಚ | ಡಿ.ಎ. ಶಂಕರ್ | 160-00 |
| 24 | ಶಿವರಾಮ ಕಾರಂತರ ಕಾದಂಬರಿಗಳಲ್ಲಿ ಸಾಮಾಜಿಕ ಪ್ರಜ್ಞೆ | ಡಾ. ಎಂ.ಎಸ್. ನಂದೀಶ್ ಹಂಚೆ | 300-00 |
| 25 | ಯಾರನ್ನೂ ನಿರ್ಲಕ್ಷಿಸಬೇಡಿ ಪ್ಲೀಸ್... | ಡಾ. ಎಂ.ಆರ್. ರವಿ | 100-00 |
| 26 | ಬಸವಪ್ಪಶಾಸ್ತ್ರಿಗಳ ಸಮಗ್ರ ನಾಟಕ ಸಂಪುಟ | ಡಾ. ಎಂ.ಎಸ್. ನಂದೀಶ್ ಹಂಚೆ | 500-00 |
| 27 | ಲಕ್ಷ್ಮೀಶನ ವಚನ ಜೈಮಿನಿಭಾರತ | ಪ್ರೊ. ಹೆಚ್. ಸಿದ್ದಲಿಂಗಯ್ಯ | 300-00 |
| 28 | ಮಹಾಭಾರತದ ಕಥೆಗಳು | ಡಾ. ಹುಣಸೂರು ಎಸ್. ರಾಘವೇಂದ್ರ ರಾವ್ | 300-00 |
| 29 | ಆಸ್ಪತ್ರೆಯಲ್ಲಿ ಐವತ್ತನಾಲ್ಕು ದಿನಗಳು | ಶಿವರಾಮು ಕಾಡನಕುಪ್ಪೆ | 130-00 |
| 30 | ಒಂದು ಅಡಿ ಭೂಮಿ ಮತ್ತು ಬೊಗಸೆ ತುಂಬ ಪ್ರೀತಿ | ಡಾ. ನಿರಂಜನ ವಾನಳ್ಳಿ | 150-00 |
| 31 | ಕುವೆಂಪು ಧ್ಯಾನದಲ್ಲಿ | ಡಾ. ಸಿ. ನಾಗಣ್ಣ | 90-00 |
| 32 | ದುರ್ಯೋಧನನ್ | ಡಾ. ಬಿ.ವಿ. ವಸಂತಕುಮಾರ್ | 90-00 |
| 33 | ರಾಷ್ಟ್ರದ್ರಷ್ಟಾರ ಎಸ್. ನಿಜಲಿಂಗಪ್ಪ | ಡಾ. ಆರ್.ಎನ್. ದಿನೇಶ್ | 220-00 |
| 34 | ಮತ್ತೆ ಬಂದ ವಸಂತ | ಡಾ|| ಹೆಚ್.ಎಸ್. ರುದ್ರೇಶ್ | 280-00 |

| | | | |
|---|---|---|---|
| 35 | ಅಪೂರ್ವ ಮಣಿಗಳು | ಡಾ|| ಹೆಚ್.ಎಸ್. ರುದ್ರೇಶ್ | 130-00 |
| 36 | ಗುಪ್ತಗಾಮಿನಿ | ಡಾ|| ಹೆಚ್.ಎಸ್. ರುದ್ರೇಶ್ | 80-00 |
| 37 | ಪುಸ್ತಕ ಸಂಸ್ಕೃತಿ : ಭುವನದ ಭಾಗ್ಯ | ಸಿಪಿಕೆ | 30-00 |
| 38 | ಮಹಿಳಾ ಕಾವ್ಯ ಕಾರಣ | ಎಂ.ಎಸ್. ವೇದಾ | 250-00 |
| 39 | ಸಿಪಿಕೆ ಸಾಹಿತ್ಯ ಸಾಧನೆ | ದೇಜಗೌ | 50-00 |
| 40 | ಶ್ರೀ ರಾಮಾಯಣ | ಡಾ. ಹುಣಸೂರು ಎಸ್. ರಾಘವೇಂದ್ರ ರಾವ್ | 400-00 |
| 41 | ಖರೇ ಖರೇ ಕಿತ್ತೂರು ಬಂಡಾಯ | ಡಾ. ಎಂ.ಎಂ. ಕಲಬುರ್ಗಿ | 50-00 |
| 42 | ನೀರಾಗ ನಿಂತೀನಿ ನೀರಡಿಸಿ | ಡಾ. ಎಂ.ಎಂ. ಕಲಬುರ್ಗಿ | 70-00 |
| 43 | ಭಾರತಕ್ಕೊಂದು ಸೇತುವೆ | ಡಿ.ಎ. ಶಂಕರ್ | 180-00 |
| 44 | ನಮ್ಮ ಹಳ್ಳಿಗಳು | ಡಿ.ಎ. ಶಂಕರ್ | 150-00 |
| 45 | ನೃತ್ಯ ನೂಪುರ | ಪ್ರೊ. ಕೆ. ರಾಮಮೂರ್ತಿ ರಾವ್ | 175-00 |
| 46 | ನುಡಿಸೊಡರು | ಡಾ. ಶರತ್ ಚಂದ್ರ ಸ್ವಾಮಿಗಳು | 250-00 |
| 47 | ಸಂಗೀತ ಮತ್ತು .... | ಶಿರೀಷ ಜೋಷಿ | 150-00 |
| 48 | ವಿಶ್ವಬಂಧು | ಪ್ರೊ. ಬಿ. ಸೋಮಶೇಖರಪ್ಪ | 200-00 |
| 49 | ಭೂಮಿಯನ್ನು ಹಂಚಿಕೊಳ್ಳುವ ಬಗೆಗಳು | ಡಿ.ಎಸ್. ನಾಗಭೂಷಣ | 280-00 |
| 50 | ಡಾ. ವಸುಮಳಲಿ ಅವರ ಗಡಿಗಳು ಗೋಡೆಗಳೇ ? | ಪ್ರೊ. ಜಿ. ವೆಂಕಟೇಶ | 170-00 |
| 51 | ಬೀಜ ಮತ್ತು ಭೂಮಿ | ಶಿವರಾಮು ಕಾಡನಕುಪ್ಪೆ | 225-00 |
| 52 | ದೇಹ ರಾಜಕಾರಣ | ಸಿ. ಜಿ. ಮಂಜುಳಾ | 125-00 |
| 53 | ಕಾಡುಜೀವನ | ಅಂಶಿ ಪ್ರಸನ್ನಕುಮಾರ್ | 200-00 |
| 54 | ಕಾಡಿನ ಜಾತ್ರೆ | ಅಂಶಿ ಪ್ರಸನ್ನಕುಮಾರ್ | 350-00 |
| 55 | ಅನುಭವ ಮಂಟಪ | ಅಂಶಿ ಪ್ರಸನ್ನಕುಮಾರ್ | 175-00 |
| 56 | ಜೀವನೋತ್ಸಾಹ | ಡಾ. ಎಂ. ಆರ್. ರವಿ | 105-00 |
| 57 | ಜೀವನ ಮಂಟಪ | ಡಾ. ಎಂ. ಆರ್. ರವಿ | 95-00 |
| 58 | ಕಪಿಲೆ ಹರಿದಳು ಕಡಲಿಗೆ | ಪ್ರೊ. ಮಲೆಯೂರು ಗುರುಸ್ವಾಮಿ | 300-00 |
| 59 | ಚರಿತ್ರೆಯ ಪುಟಕ್ಕೆ ಒಂದು ಟಿಪ್ಪಣಿ | ಪ್ರೊ. ಮಲೆಯೂರು ಗುರುಸ್ವಾಮಿ | 175-00 |
| 60 | ತಲೆಮಾರಿನ ಪೈಸಾ | ಡಾ. ಎಂ. ಕನ್ನಿಕಾ | 70-00 |
| 61 | ಬಸವಣ್ಣನವರ ಆಯ್ದ ನೂರೆಂಟು ವಚನಗಳು | ಡಿ. ನಾಗೇಂದ್ರಪ್ಪ | 30-00 |
| 62 | ಬಸವ ಬಿಂಬ | ಡಾ. ನಂದೀಶ ಹಂಚೆ (ಸಂ) | 320-00 |
| 63 | ಡಿ.ಎ. ಶಂಕರ್ ಅವರ ಸಮಗ್ರ ನಾಟಕ ಸಂಪುಟ | ಡಿ. ಎ. ಶಂಕರ್ | 500-00 |
| 64 | ಬದುಕಿನ ಸೂತ್ರಗಳು | ಡಾ. ಸಿ.ಪಿ. ರಾಮಶೇಷ್ | 200-00 |
| 65 | ಬಿ.ಎಂ. ಶ್ರೀಕಂಠಯ್ಯ | ಡಾ. ರಾಗೌ | 80-00 |
| 66 | ಅಚ್ಚಗನ್ನಡ ದೇಹಾವಯವ ಪದಕೋಶ | ಡಾ. ಟಿ.ವಿ. ವೆಂಕಟಾಚಲ ಶಾಸ್ತ್ರೀ | 70-00 |
| 67 | ಲೋಕಾಲೋಕ | ಮಧುವನ ಶಂಕರ | 120-00 |
| 68 | ಸಂಸ್ಕೃತಿಯ ಸ್ವರೂಪ | ಎಸ್.ಎನ್. ಮಾಧವರಾವ್ | 65-00 |
| 69 | ಸಮರಸದ ಜೀವಸೆಲೆ | ಡಾ. ಬಿ.ವಿ. ವಸಂತಕುಮಾರ್ | 175-00 |
| 70 | ನಾಟಿಪಟ - ಕೊಡಗಿನ ಕತೆಗಳು | ಡಾ. ಕವಿತಾ ರೈ | 90-00 |
| 71 | ಚಂದ್ರಯಾನ | ಪ್ರೊ. ಕೆ. ಭೈರವಮೂರ್ತಿ | 500-00 |
| 72 | ಮಲೆಯೂರು ಗುರುಸ್ವಾಮಿ ಬದುಕು-ಬರಹ | ಡಾ. ಮಹದೇವಸ್ವಾಮಿ ಹೆಗ್ಗೊಠಾರ | 100-00 |

ಪ್ರತಿಭಾವಂತ ಕವಿಯ ದರ್ಶನ ಲಿಪಿ (ಪುಸ್ತಕ) ರೂಪದ ಕವಿತೆಗಳ ಮೂಲಕ ಸಹೃದಯನಿಗೆ ಲಭಿಸುವುದು. ಪರೋಕ್ಷವಾಗಿ ಕವಿತೆಯ ಆತ್ಮೀಯ ಓದುವಿಕೆ ಓದುಗನಲ್ಲಿ ಹಾಗೂ ಹಾಡಿನ ಅನುರೂಪದ ಆಲಿಸುವಿಕೆ ಕೇಳುಗನಲ್ಲಿ ಮತ್ತೆ ಮತ್ತೆ ಕವಿಯ ಬಗ್ಗೆ ಮೂಡಿಸಿರುವುದು, ಆತನನ್ನು ನೋಡಬೇಕು, ಮತ್ತೇನೇನೋ ಕೇಳಿ ತಿಳಿಯಬೇಕೆಂಬ ಕೌತಕ, ಕುತೂಹಲಗಳನ್ನು.

ಕವಿಯ ಅಪ್ರಕಟಿತ, ಅವ್ಯಕ್ತ, ವ್ಯಕ್ತಿಗತ ಮಗ್ಗಲುಗಳನ್ನು ನೋಡಿ, ತಿಳಿಯುವ ಆಸೆ ಸಹೃದಯನಲ್ಲಿ ಮೊಳೆಯುತ್ತಿರುತ್ತದೆ; ಕವಿತೆಯಾಚೆ-ಈಚೆಗಿನ ಸಂಗತಿ, ಸನ್ನಿವೇಶಗಳನ್ನು ಶೋಧಿಸುವ ಪ್ರವೃತ್ತಿ ವಿಮರ್ಶಕನಲ್ಲಿರುತ್ತದೆ. ಕವಿಯನ್ನು ಭೆಟ್ಟಿಯಾಗಿ, ಮಾತಿಗೆಳೆದು ಮಾಹಿತಿ ಸಂಗ್ರಹಿಸುವ ಶೋಧನ ಸ್ವಭಾವ ಕೆಲವು ಕಾವ್ಯಾಭ್ಯಾಸಿಗಳದ್ದಾಗಿರುತ್ತದೆ.

ಓದುಗ, ಕೇಳುಗ, ವಿಮರ್ಶಕ, ಕಾವ್ಯಾಭ್ಯಾಸಿಗಳಿಗೆಲ್ಲ ಕಿವಿಗೊಟ್ಟು ಸಂದರ್ಶನ-ಸಂವಾದದಲ್ಲಿ ಪಾಲುಗೊಳ್ಳುವುದು ಕವಿ ಮಾಡುವ ಮತ್ತೊಂದು ಬಗೆಯ ಸೃಜನಶೀಲ ಚಟುವಿಟಿಕೆ.

ಚೆನ್ನವೀರ ಕಣವಿಯವರ ಕಾವ್ಯದಲ್ಲಿ ಆಸಕ್ತಿ, ಅನುರಕ್ತಿಯುಳ್ಳ ಹಲವರು ಕಳೆದ 30 ವರ್ಷಗಳಿಂದ ಒಂದಲ್ಲ ಮತ್ತೊಂದು ಸಂದರ್ಭದಲ್ಲಿ ಅವರನ್ನು ಸಂದರ್ಶಿಸಿ ಅವರ ವ್ಯಕ್ತಿತ್ವವನ್ನು ಬಯಲುಗೊಳಿಸಿದ ಪ್ರಸಂಗಗಳು ಹಲವು ಹದಿನೆಂಟು. ನಾಡಿನ ವಿವಿಧ ಪತ್ರಿಕೆಗಳಲ್ಲಿ ಹರಡಿಕೊಂಡಿದ್ದ ಈ ಸಾಹಿತ್ಯಕ ದಾಖಲೆಗಳು ಮತ್ತೆ ಮತ್ತೆ ಮೆಲುಕು ಹಾಕುವಂತಿವೆ; ಕಣವಿ ಕಾವ್ಯದ ಅರ್ಥವಂತಿಕೆ ಹೆಚ್ಚಿಸುವಂತಿದೆ.

–ಶ್ಯಾಮಸುಂದರ ಬಿದರಕುಂದಿ




**ಸಂವಹನ**
೧೨/೧ಎ, ಈವನಿಂಗ್ ಬಜಾರ್ ಹಿಂಭಾಗ
ಶಿವರಾಂಪೇಟೆ, ಮೈಸೂರು-೫೭೦೦೦೧